

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ
ತ್ರೈಮಾಸಿಕ
ಏಪ್ರಿಲ್ ೨೦೧೪ - ಮಾರ್ಚ್ ೨೦೧೫

ಸಂಪಾದಕರು

ಲಕ್ಷ್ಮೀಪತಿ ಕೋಲಾರ


ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ,
ಬೆಂಗಳೂರು-೫೬೦೦೦೨
ದೂರವಾಣಿ - ೨೨೨೧೧೬೫೦

**ANIKETHANA**

A literary Journal (Quarterly)

Edited by
Lakshmipathykolara

Published by :
**Smt. C.H.Bhagya, Registrar, Karnataka Sahithya Academy,**
**Kannada Bhavana, J.C.Road, Bengaluru-560002**

Pages : **184**

Price : 50/-

ಸಂಪುಟ : ೨೫
ಸಂಚಿಕೆಗಳು: ೯೯/೧೦೦/೧೦೧/೧೦೨
ಪ್ರತಿಗಳು : ೧೫೦೦

**ಪ್ರಕಾಶಕರು**
ಶ್ರೀಮತಿ ಸಿ.ಎಚ್.ಭಾಗ್ಯ, ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ,
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು-೦೨

ಬಿಡಿ ಪ್ರತಿ : ರೂ. ೫೦/-
ವಾರ್ಷಿಕ ಚಂದಾ : ರೂ. ೨೦೦/-
ಆಜೀವ ಚಂದಾ : ರೂ. ೧೦೦೦/-

ರಕ್ಷಾಪುಟ
ಒಳಪುಟ ವಿನ್ಯಾಸ : ಮಂಜುನಾಥ.ಎಸ್. ಬೆಂಗಳೂರು

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233



ಪ್ರಿಯ ಓದುಗರೆ,

ಅಕಾಡೆಮಿಯ ನಿಯತಕಾಲಿಕೆ 'ಅನಿಕೇತನ'ದ ಪ್ರಕಟಣೆ ತೀರಾ ತಡವಾದುದಕ್ಕೆ ಅದರದ್ದೇ ಆದ ಅಪೇಕ್ಷಿತ ಅನುಕೂಲಗಳ ಮೂಲಭೂತ ಸಮಸ್ಯೆಗಳಿದ್ದೇ ಇವೆ. ಲೇಖನ, ಕಥೆ, ಕವಿತೆ ಮತ್ತು ಅನುವಾದಗಳನ್ನು ಅವಿರುವ ಹಾಗೇ ಪಠ್ಯದ ರೀತಿ ಮುದ್ರಿಸಿ ಪ್ರಕಟಿಸುವ ಕೆಲಸ ತುಂಬಾ ಸುಲಭದ್ದು. ಆದರೆ ಅನಿಕೇತನದ ಒಟ್ಟಾರೆ ವಿನ್ಯಾಸವನ್ನು ಚಿತ್ರಗಳ ಮೂಲಕ ಸೌಂದರ್ಯಾತ್ಮಕಗೊಳಿಸುವುದಕ್ಕೆ ಇತರೆ ಕಂಪ್ಯೂಟರ್ ಕೌಶಲ ಕೆಲಸಗಾರರ ಅಗತ್ಯವಿದ್ದು, ಅಂತಹ ಕುಶಲಿಗಳ ಅಲಭ್ಯತೆ ಪ್ರಕಟಣೆ ತಡವಾಗುವುದಕ್ಕೆ ಮೂಲ ಕಾರಣವಾಗಿದೆ. ಇದರೊಂದಿಗೆ ಇನ್ನಿತರ ಸಮಸ್ಯೆಗಳೂ ತಳುಕು ಹಾಕಿಕೊಂಡಿದ್ದು, ಈ ತಾಂತ್ರಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬಹುದಾದ ನಿಟ್ಟಿನಲ್ಲಿ ಅಕಾಡೆಮಿಯ ಮುಂಬರುವ ಸದಸ್ಯರು ಹಾಗೂ ಅಧ್ಯಕ್ಷರು ಮೂಲಭೂತ ಚಿಂತನೆ ನಡೆಸುವುದು ಅನಿಕೇತನದ ನಿರಂತರ ಪ್ರಕಟಣೆಯ ದೃಷ್ಟಿಯಿಂದ ಅತ್ಯಗತ್ಯವೆಂಬುದು ನನ್ನ ಅನಿಸಿಕೆ. ಇದು ಕೇವಲ ಅನುಭವದ ಹಿನ್ನೆಲೆಯಿಂದ ನಾನು ವಿನಮ್ರವಾಗಿ ನೀಡಬಹುದಾದ ಸಲಹೆಯಾಗಿದೆ. ಉಳಿದಂತೆ ಪ್ರಕಟಣೆಗೆಂದು ತುಂಬಾ ಹಿಂದೆಯೇ ಬಂದಿದ್ದ ಲೇಖನ, ಕವಿತೆ, ಕಥೆ, ನಾಟಕ ಹಾಗೂ ಅನುವಾದಗಳಲ್ಲಿ ಉತ್ತಮವಾದವನ್ನೇ ಆರಿಸಿ ಈ ಸಂಚಿಕೆಯಲ್ಲಿ ಬಳಸಿಕೊಳ್ಳಲಾಗಿದೆ. ಡಾ. ಬಸವರಾಜ ಸಾದರ ಅವರು ಅನುವಾದಿಸಿರುವ ಕೊಂಕಣಿ ಕಥೆ 'ಬರ್ಗರ್' ಅಂತೂ ವರ್ತಮಾನದ ಸಂದರ್ಭದಲ್ಲಿ ಅತ್ಯಂತ ಮಾನವೀಯ ಸ್ತರದ ಪ್ರಸ್ತುತತೆಗೆ ಸಾಮಾನ್ಯ ವಿವೇಕದ ಕನ್ನಡಿ ಹಿಡಿದಂತಿದೆ. ಬರಹಗರರೆಲ್ಲರಿಗೂ ಕೃತಜ್ಞತೆಗಳು. ಓದುಗ ಮಹಾಶಯ ಪ್ರಕಟಣೆ ತಡವಾದುದಕ್ಕೆ ಮನ್ನಿಸಿ ಎಂದಿನಂತೆ 'ಅನಿಕೇತನ'ವನ್ನು ಸ್ವಾಗತಿಸುತ್ತಾರೆಂಬ ನಂಬಿಕೆ ನಮ್ಮದು.

**– ಸಂಪಾದಕರು**



## ಪುಟ ತೆರೆದಂತೆ...

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ
ತ್ರೈಮಾಸಿಕ



# ಬರ್ಗರ್

ಮೂಲ ಕೊಂಕಣಿ - ದಾಮೋಧರ ಮೌಜೋ

ಕನ್ನಡಕ್ಕೆ- ಡಾ.ಬಸವರಾಜ ಸಾದರ

"ಏನು!! ನೀನು ಅದನ್ನು ಶರ್ಮಿಳಾಗೆ ಕೊಟ್ಟುಬಿಟ್ಟೆಯಾ?" ತಾಯಿ ಒಮ್ಮೆಲೇ ಪಟಾಕಿಯಂತೆ ಸಿಡಿದಳು. ಅದರ ಹಿಂದೆಯೇ ಎರಡನೆಯ ಪಟಾಕಿ ಕೂಡ ಸಿಡಿಯಿತು- "ಮತ್ತೆ, ಅದನ್ನವಳು ತಿಂದುಬಿಟ್ಟಳಾ?" "ತಿಂದರೇನಾಯ್ತಮ್ಮ? ಅವಳು ನನ್ನ ಗೆಳತಿ..." -ಇರ್ನೆ ದೃಢವಾದ ಮಾತುಗಳಲ್ಲಿ ಪ್ರತಿಕ್ರಿಯಿಸಿದಳು. "ಪ್ರೀತಿಯ ಮಗಳೆ... ಅವಳೊಬ್ಬ ಹಿಂದೂ...." "ಅವಳು ಹಿಂದೂ ಆದರೆ ಏನಾಯ್ತು? ಅವಳು ತರುವ ಪಲಾವನ್ನು ನಾನೂ ತಿನ್ನುತ್ತೇನೆ. ನಾವು ದಿನಾಲೂ ಹೀಗೆ ಒಬ್ಬರಿಗೊಬ್ಬರು ಹಂಚಿಕೊಂಡೇ ತಿನ್ನೋದು ಅಮ್ಮ....."- ಇರ್ನೆ ಇನ್ನಷ್ಟು ಖಚಿತವಾಗಿ ಹೇಳಿದಳು. "ಆದರೆ ಮಗಳೆ, ಹಿಂದೂಗಳು ಗೋಮಾಂಸವನ್ನು ತಿನ್ನೋದಿಲ್ಲ. ಗೋಮಾಂಸವನ್ನು ತಿಂದ ವಿಷಯವೇನಾದರೂ ಅವಳ ತಂದೆ-ತಾಯಿಗೆ ಗೊತ್ತಾದರೆ, ಖಂಡಿತವಾಗಿ ಅವರು ನಿರಾಶರಾಗುತ್ತಾರೆ. ನೀನು ಮತ್ತು ಶರ್ಮಿಳಾ ಇಬ್ಬರೂ

ಅವರಿಂದ ಬೈಯ್ಗುಳ ತಿನ್ನಬೇಕಾಗುತ್ತದೆ" "ಆದರೆ?..." ಇಷ್ಟು ನಡೆಯುವುದರೊಳಗೆ ಇರ್ನ ಇನ್ನೂ ಕೆರಳಿಬಿಟ್ಟಿದ್ದಳು. ಆದರೂ ತನ್ನನ್ನು ತಾನು ನಿಯಂತ್ರಿಸಿಕೊಳ್ಳುವ ಮನೋಭಾವ ಹೊಂದಿದ್ದ ಆಕೆ–"ಅಲ್ಲಮ್ಮ, ಅವಳು ಗೋಮಾಂಸದ ಬರ್ಗರ್ ತಿಂದರೆ ಏನು ಸಮಸ್ಯೆ?"– ಎಂದು ಗಡುಸಾಗಿಯೇ ಪ್ರಶ್ನಿಸಿದಳು. "ಅದು ಪಾಪ!!" "ಅದು ಪಾಪವೆಂದಾದರೆ ಅವಳಿಗಾಯ್ತು; ಆದರೆ ನನಗಲ್ಲವಲ್ಲ?" "ಕಾರಣವೇನೇಂದರೆ, ಅವರ ದೇವರು ಅವರಿಗೆ ಗೋಮಾಂಸವನ್ನು ತಿನ್ನಬೇಡಿರೆಂದು ಹೇಳಿದ್ದಾನೆ" ತಾಯಿ, ಇರ್ನಗೆ ವಿವರಿಸಿದಳು. "ಆದರೆ ಅಮ್ಮ, ದೇವರು ಒಬ್ಬನೇ ಎಂದು ನಮಗೆ ಕಲಿಸಿದ್ದಾರಲ್ಲ?" ಈಗ ಅವಳ ತಾಯಿಗೆ ಎಲ್ಲಿಲ್ಲದ ಸಿಟ್ಟು "...ನನಗೇ ಉಪದೇಶ ಮಾಡ್ಲಿಕ್ಕೆ ಬರಬೇಡ. ನಿಮ್ಮ ತಂದೆ ಬಂದ ಮೇಲೆ ಎಲ್ಲಾ ಅವರನ್ನೇ ಕೇಳು"– ದನಿ ಎತ್ತರಿಸಿದಳು. ಗೋಮಾಂಸದ ಬರ್ಗರ್ ತಿಂದ ಕಾರಣಕ್ಕಾಗಿ ಶರ್ಮಿಳಾ ಪಾಪಿಯಾಗುತ್ತಾಳೆಂಬುದನ್ನು ಹಾಗೂ ಅದಕ್ಕಾಗಿ ಅವಳ ತಂದೆ-ತಾಯಿ ಅವಳ ಮೇಲೆ ಕೋಪಗೊಳ್ಳುತ್ತಾರೆಂಬುದನ್ನು ತಿಳಿದ ಇರ್ನಗೆ ತುಂಬ ನಿರಾಶೆಯಾಯಿತು. ಈ ಘಟನೆಯ ಬಗೆಗೆ ತಂದೆಯವರು ಮನೆಗೆ ಬಂದ ಮೇಲೆ ವಿಚಾರಿಸಬೇಕೆಂದು ನಿರ್ಧರಿಸಿದ ಆಕೆ ತನ್ನ ಆ ದಿನದ ಹೋಂವರ್ಕ್‌ಗೆ ತೊಡಗಿದಳು. ಓದಲೆಂದು ಪುಸ್ತಕದ ಚೀಲವನ್ನು ತೆಗೆದ ತಕ್ಷಣ ಮೊದಲು ಅವಳ ಕಣ್ಣಿಗೆ ಬಿದ್ದದ್ದು ನಾಲ್ಕೈದು ದಿನಗಳ ಹಿಂದೆ ಶರ್ಮಿಳಾ ತನಗೆ ಕೊಟ್ಟಿದ್ದ ಪುಸ್ತಕ. ಶರ್ಮಿಳಾ ಓದುವುದನ್ನು ತುಂಬ ಇಷ್ಟಪಡುತ್ತಿದ್ದಳು. ಅವಳ ತಂದೆ ಆಕೆಗೆ ಓದಲೆಂದು ನಿರಂತರ ಒಳ್ಳೊಳ್ಳೆಯ ಪುಸ್ತಕಗಳನ್ನು ತಂದುಕೊಡುತ್ತಿದ್ದರು. ಇರ್ನ ಕೂಡ ಓದುವುದನ್ನು ಇಷ್ಟಪಡುತ್ತಿದ್ದಳಾದರೂ ಅವಳು ಎನಿಡ್ ಬ್ಲೈಟನ್ ಮತ್ತು ಹ್ಯಾರಿ ಪಾಟರ್‌ನ ಪುಸ್ತಕಗಳ ಹೊರತಾಗಿ ಮತ್ತೇನನ್ನೂ ಓದಿರಲಿಲ್ಲ. ಕಳೆದ ವರ್ಷ ಎಂಟನೆಯ ತರಗತಿಯಲ್ಲಿದ್ದಾಗ ಅವಳು ಓದುವ ಹವ್ಯಾಸವನ್ನು ಬೆಳೆಸಿಕೊಂಡಳು. ಆಮೇಲೆ ಶರ್ಮಿಳಾಳ ಗೆಳೆತನ ಸಂಪಾದಿಸಿದ ನಂತರ ಅವಳ ಓದಿನ ದಿಕ್ಕೇ ಬದಲಾಯ್ತು. ಮೊದಮೊದಲು ಶರ್ಮಿಳಾ ಅವಳಿಗೆ ಚಾರ್ಲಸ್ ಡಿಕನ್ಸ್‌ನ 'ಓಲಿವರ್ ಟ್ವಿಸ್ಟ್' ಪುಸ್ತಕ ಕೊಟ್ಟಳು. ನಂತರ ಕೊಟ್ಟ ಸಣ್ಣ ಪುಸ್ತಕ ಡುಮಾಸ್‌ನ 'ದಿ ಥ್ರೀ ಮಸ್ಕೇಟಿಯರ್ಸ್'. ಇವೆಲ್ಲ ಮೂಲದಿಂದ ಸಂಕ್ಷೇಪಗೊಂಡ ಆವೃತ್ತಿಗಳು. ಓದುವ ಹವ್ಯಾಸ ಬೆಳೆದಂತೆ ಇರ್ನ ಒಳ್ಳೆಯ ಹಾಗೂ ಸಾಧಾರಣ ಪುಸ್ತಕಗಳ ನಡುವಿನ ವ್ಯತ್ಯಾಸ ಗುರುತಿಸುವುದನ್ನು ಕಲಿತಳು. ಇತ್ತೀಚಿಗಂತೂ ಶಾಲೆಯಲ್ಲಿ ಮಧ್ಯಂತರ ಬಿಡುವು ಬಿಟ್ಟಾಗ ಇರ್ನ ಮತ್ತು ಶರ್ಮಿಳಾ ಮಾತಾಡುತ್ತಿದ್ದುದು ಕೇವಲ ಪುಸ್ತಕಗಳ ಬಗೆಗೆಯೇ. ಶರ್ಮಿಳಾ ಕೊಂಕಣಿ ಪುಸ್ತಕಗಳನ್ನು ಪ್ರೀತಿಯಿಂದ ಓದುತ್ತಿದ್ದಳು. ನಂತರ ಮನೋಹರ ಸರದೇಸಾಯಿ ಅವರ ಕವಿತೆಗಳನ್ನು ಇರ್ನಗೆ ಓದಿ ಹೇಳತೊಡಗಿದಳು. ಶರ್ಮಿಳಾಳ ಸಹವಾಸದಲ್ಲಿ ಇರ್ನ ಕೂಡ ಕೊಂಕಣಿ ಪುಸ್ತಕಗಳನ್ನು ಓದಲು ಸುರೂ ಮಾಡಿದಳು. ಪುಸ್ತಕಗಳ ಚರ್ಚೆಯಲ್ಲಿ ಮುಳುಗಿ ಹೋಗುತ್ತಿದ್ದ ಅವರಿಬ್ಬರಿಗೂ ಮಧ್ಯಾಹ್ನದ ಬಿಡುವಿನ ವೇಳೆ ಹೋದದ್ದೇ ಗೊತ್ತಾಗುತ್ತಿರಲಿಲ್ಲ.

"ನೀನೀಗ ಓದುತ್ತಿರುವುದು ಒಂಭತ್ತನೆಯ ಕ್ಲಾಸಿನಲ್ಲಿ. ಮುಂದಿನ ವರ್ಷವೇ ಎಸ್.ಎಸ್.ಸಿ. ವರ್ಗಕ್ಕೆ ಹೋಗುತ್ತೀ. ಇಂಥ ಹೊತ್ತಲ್ಲಿ ನೀನು ಅನವಶ್ಯಕವಾದ ಬೇರೆ ಪುಸ್ತಕಗಳನ್ನು

ಓದುತ್ತ ಸಮಯ ಹಾಳುಮಾಡಕೂಡದು. ಪಬ್ಲಿಕ್ ಪರೀಕ್ಷೆಯಲ್ಲಿ ಒಳ್ಳೆಯ ಮಾರ್ಕ್ಸ್ ಗಳಿಸಬೇಕೆಂದರೆ ನೀನು ಈಗಿನಿಂದಲೇ ಮನಸ್ಸುಗೊಟ್ಟು ಚೆನ್ನಾಗಿ ಓದಬೇಕು"- ಎಂದು ತಾಯಿ ಆಗಾಗ ಎಚ್ಚರಿಸುತ್ತಿದ್ದಳಾದರೂ, ಇರ್ನೆ ಅದಾವುದರ ಬಗೆಗೂ ಚಿಂತಿಸುತ್ತಿರಲಿಲ್ಲ. ಶರ್ಮಿಳಾಳೊಂದಿಗೆ ಗೆಳೆತನ ಸುರೂವಾದ ನಂತರ ಅವಳು ಮೊದಲಿಗಿಂತಲೂ ಹೆಚ್ಚಿನ ಅಂಕಗಳನ್ನು ಗಳಿಸತೊಡಗಿದ್ದಳು. ಇರ್ನೆ ಗಣಿತದಲ್ಲಿ ತುಂಬಾ ಬುದ್ಧಿವಂತೆಯಾಗಿದ್ದಳು. ನೂರಕ್ಕೆ ಒಂದೆರಡೇ ಅಂಕ ಕಡಿಮೆ ಬಂದರೂ ಅವಳು ಸಿಡಿಮಿಡಿಗೊಳ್ಳುತ್ತಿದ್ದಳು. ಶರ್ಮಿಳಾ ಇಂಗ್ಲೀಷ್ ಮತ್ತು ಕೊಂಕಣಿ ವಿಷಯಗಳಲ್ಲಿ ಹೆಚ್ಚು ಜಾಣಳಾಗಿದ್ದಳು. ಇರ್ನೆಯ ಗೆಳೆತನದ ಪರಿಣಾಮವಾಗಿ ಅವಳೂ ಗಣಿತದಲ್ಲಿ ಒಳ್ಳೆಯ ಸಾಧನೆ ಮಾಡತೊಡಗಿದ್ದಳು. ಅವರಿಬ್ಬರ ಗೆಳೆತನ ಹೀಗೆ ತುಂಬ ಅನ್ಯೋನ್ಯವಾಗಿರುವಾಗಲೇ ಗೋಮಾಂಸದ ಬರ್ಗರಿನ ಆ ಘಟನೆ ಅಚಾನಕಾಗಿ ಅಡ್ಡಬಂದು, ಯಾಕಾದರೂ ಇದು ಹೀಗಾಯಿತೋ ಎನಿಸತೊಡಗಿತು.

ಶಾಲೆಯವರು ಮಕ್ಕಳನ್ನೆಲ್ಲ ಒಮ್ಮೆ 'ಕಾಬೋ ಡೆ ರಾಮಾ'ಗೆ ವನಭೋಜನಕ್ಕೆಂದು ಕರೆದುಕೊಂಡು ಹೋಗಿದ್ದರು. ಶರ್ಮಿಳಾ ಮತ್ತು ಇರ್ನೆ ಕೂಡ ಆ ಮಕ್ಕಳಲ್ಲಿದ್ದರು. ಅಲ್ಲಿಗೆ ಹೋದಾಗ ಅವರಿಗೆ ತಾವು ಚಿಕ್ಕವರಿದ್ದಾಗ ಓದಿದ್ದ ಕಿಲ್ಲೆ-ಕೋಟೆ-ಕೊತ್ತಲಗಳ ಆಕರ್ಷಕ ಕತೆಗಳು ನೆನಪಾದವು. ಸುಮಾರು ಹೊತ್ತು ಅವರು ಆ ಜಾಗೆಯಲ್ಲಿ ಸಂತೋಷದಿಂದ ನಲಿದಾಡಿದರು. ಮಧ್ಯಾಹ್ನದ ಹೊತ್ತಿಗೆ ಹಸಿವಾದಾಗ ಮಕ್ಕಳೆಲ್ಲ ತಮ್ಮ ತಮ್ಮ ಊಟದ ಡಬ್ಬಿಗಳನ್ನು ಬಿಚ್ಚಿ ತಿನ್ನತೊಡಗಿದರು. ಇರ್ನೆ ಮತ್ತು ಶರ್ಮಿಳಾ ಅಲ್ಲಿಯೇ ಇದ್ದ ಹುಣಸೆಮರದ ನೆರಳಲ್ಲಿ ಕುಳಿತು ತಮ್ಮ ಊಟದ ಡಬ್ಬಿಗಳನ್ನು ತೆರೆದರು. "ನಾವಿಬ್ಬರೂ ನಮ್ಮ ನಮ್ಮ ಡಬ್ಬಿಗಳಲ್ಲಿರುವ ತಿಂಡಿಯನ್ನು ಹಂಚಿಕೊಂಡು ತಿನ್ನೋಣ" ಎಂದ ಶರ್ಮಿಳಾ, ತನ್ನ ತಾಯಿ ಕಳಿಸಿದ್ದ ಪಲಾವ್‌ದಲ್ಲಿ ಒಂದಿಷ್ಟನ್ನು ಇರ್ನೆಗೆ ಕೊಟ್ಟಳಲ್ಲದೆ, "ನೀನು ಏನು ತಂದಿರುವಿ? ಎಷ್ಟೊಂದು ಗಮಗಮ ವಾಸನೆ ಬರುತ್ತಿದೆಯಲ್ಲ?"- ಎಂದು ಕುತೂಹಲದಿಂದ ಕೇಳಿದಳು. ಅವಳು ಹಾಗೆನ್ನುವಷ್ಟರಲ್ಲಿಯೇ ಇರ್ನೆ ತಾನು ತಂದಿದ್ದ ಬರ್ಗರ್‌ಗಳಲ್ಲಿಯ ಒಂದು ತುಂಡನ್ನು ಶರ್ಮಿಳಾಳ ಬಾಕ್ಸ್‌ನಲ್ಲಿ





ಹಾಕಿಬಿಟ್ಟಳು. ಅದಕ್ಕೆ ಔಪಚಾರಿಕವಾಗಿ ಶರ್ಮಿಳಾ "ಬೇಡ ಬೇಡ.... ನೀನು ತಿನ್ನು...." ಎನ್ನುತ್ತಿರುವಾಗಲೇ ಇರ್ನೆ– " ಇರಲಿ ತೊಗೋ. ಏನೂ ಸಂಕೋಚಪಟ್ಟುಕೊಳ್ಳಬೇಡ. ತಿನ್ನು. ನಾನು ಎರಡು ಬರ್ಗರ್‌ಗಳನ್ನು ತಂದಿರುವೆ"–ಎಂದು ಪ್ರತಿಕ್ರಿಯಿಸಿದಳು.

ಬರ್ಗರ್‌ನ ಘಟನೆ ಈ ಹಂತಕ್ಕೆ ತಲುಪಬಹುದೆಂಬ ಕಲ್ಪನೆ ಇರ್ನೆಗೆ ವನಭೋಜನದ ಸಮಯದಲ್ಲಿ ಅಪ್ಪಿ–ತಪ್ಪಿ ಕೂಡ ಬಂದಿರಲಿಲ್ಲ. ಅವಳು ಹಾಗೆ ಮಾಡಿದ್ದು ಖಂಡಿತ ನಿರುದ್ದೇಶಪೂರ್ವಕವಾಗಿತ್ತು. ಆದರೆ ಅದು ಶರ್ಮಿಳಾಗೆ ಪಾಪವಾಗಿ ಪರಿಣಮಿಸಿಬಿಟ್ಟಿತ್ತು. 'ಅವಳ ತಂದೆ–ತಾಯಿ ಆಕೆಯನ್ನು ಬೈಯ್ದರೆ ಏನು ಮಾಡುವುದು?'

ಇರ್ನೆ ಹಾಗೆ ಯೋಚಿಸುತ್ತಿರುವಾಗಲೇ ತಂದೆ ಮನೆಗೆ ಬಂದರು. ಆಕೆ ಅವರನ್ನು ಕೇಳಬೇಕೆನ್ನುವಷ್ಟರಲ್ಲಿ ಅವಳ ತಾಯಿಯೇ ನಡೆದುದನ್ನೆಲ್ಲ ಸವಿವರವಾಗಿ ಅವರಿಗೆ ತಿಳಿಸಿಬಿಟ್ಟಳು. "ಅಪ್ಪಾ, ಹಿಂದೂಗಳು ಗೋಮಾಂಸ ತಿನ್ನುವುದಿಲ್ಲವೆಂದು ನನಗೆ ಗೊತ್ತಿರಲಿಲ್ಲ"–ಇರ್ನೆ ಸಣ್ಣ ದನಿಯಲ್ಲಿ ಗುನುಗುನಿಸಿದಳು. "ಇರಬಹುದು ಮಗಳೆ, ಆದರೆ ಅವಳಿಗೆ ಇದು ಗೊತ್ತಿರಲಿಲ್ಲವೇ? ಗೊತ್ತಿದ್ದೂ ಅದನ್ನೇಕೆ ತಿಂದಳು ಅವಳು?" ಅಪ್ಪ ಕೇಳಿದ್ದು ಸರಿಯಾಗಿಯೇ ಇತ್ತು. ಗೊತ್ತಿದ್ದೂ ಶರ್ಮಿಳಾ ಯಾಕೆ ಆ ಬರ್ಗರನ್ನು ತಿಂದಳು? "ಅದು ಗೋಮಾಂಸದ ಬರ್ಗರ್ ಎಂದು ನೀನು ಅವಳಿಗೆ ಹೇಳಿದ್ದೆಯಾ?" ತಂದೆ ಹೀಗೆ ಪ್ರಶ್ನಿಸಿದಾಗ ಇರ್ನೆ ಕಣ್ಣೀರು ಸುರಿಸುತ್ತ ಗದ್ಗದಿತ ದನಿಯಲ್ಲಿ– "ಇಲ್ಲ ಅಪ್ಪ.... ನಾನು ಅವಳಿಗೆ ಹಾಗೆ ಹೇಳಲಿಲ್ಲ. ಬರ್ಗರ್ ಎಂದು ಮಾತ್ರ ಹೇಳಿದೆ.... ಅದು ನನ್ನ ತಪ್ಪು....."

"ನೋಡು ಮಗಳೆ, ತಪ್ಪು ಎರಡೂ ಕಡೆಯಿಂದ ಆಗಿದೆ. ಇರಲಿ ಬಿಡು. ಅದನ್ನೇ ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಮತ್ತೆ ನೀನು ಈಗ ಹೋಗಿ, ಅದು ಗೋಮಾಂಸದ ಬರ್ಗರ್ ಆಗಿತ್ತೆಂದು ಮಾತ್ರ ಹೇಳಬೇಡ" ತಂದೆಯ ಮಾತಿನಿಂದ ಇರ್ನೆಗೆ ಸಮಾಧಾನವಾಗಲಿಲ್ಲ. "ಅಲ್ಲ ಅಪ್ಪಾ, ಅವಳ ತಂದೆಗೆ ಇದು ಗೊತ್ತಾದರೆ ಅವರು ಅವಳನ್ನು ಖಂಡಿತ ಬೈಯ್ಯುತ್ತಾರೆ". "ಅವರಿಗೆ ಗೊತ್ತಾಗುವುದಾದರೂ ಹೇಗೆ? ನೀನು ಹೇಳಿದರೆ ಮಾತ್ರ ತಾನೆ?". "ಆಯ್ತು ಅಪ್ಪಾ ಅದೆಲ್ಲಾ ಇರಲಿ, ನೋಡು ಈಗ ಅವಳು ಗೋಮಾಂಸವನ್ನು ತಿಂದುಬಿಟ್ಟಿದ್ದಾಳೆ. ಅವಳಿಗೆ ಪಾಪ ತಟ್ಟುವುದಿಲ್ಲವೆ? ಹಾಗಾಗಿಬಿಟ್ಟರೆ ಅವಳು ಇನ್ನುಮುಂದೆ ನನ್ನೊಂದಿಗೆ ಮಾತಾಡೋದೇ ಇಲ್ಲ". ಇರ್ನೆಯ ಹೊಟ್ಟೆಯಲ್ಲಿ ಪಾತರಗಿತ್ತಿಗಳು ಹಾರಾಡುವಂತೆ ಭಾಸವಾಯ್ತು. 'ತಾವು ವನಭೋಜನಕ್ಕೆ ಹೋಗಿದ್ದ ಆ ದಿನ ಅದೆಷ್ಟು ಖುಷಿಯದಾಗಿತ್ತು!! ಆದರೆ ತನ್ನಿಂದಾದ ಒಂದು ಸಣ್ಣ ತಪ್ಪಿನಿಂದಾಗಿ ಶರ್ಮಿಳಾ ಈಗ ಅದರ ಕೆಟ್ಟ ಪ್ರತಿಫಲವನ್ನು ಅನುಭವಿಸಬೇಕಾಯ್ತು' -ಎಂದು ಅವಳು ಹಳಹಳಿಸತೊಡಗಿದಳು.

ಇರ್ನೆ ತುಂಬ ಕನಸುಣಿ ಹುಡುಗಿ. ಆದರೆ ಅವಳಿಗೆ ಇಂದು ಬಿದ್ದ ಕನಸು ಮಾತ್ರ ಎಂದಿಗಿಂತ ಭಯಾನಕವಾಗಿತ್ತು. ಕನಸಿನಲ್ಲಿ ಶರ್ಮಿಳಾಳ ತಂದೆ-ತಾಯಿ ಇಬ್ಬರೂ ಸೇರಿ ಅವಳಿಗೆ ಸರಿಯಾಗಿ ನೀರಿಳಿಸುತ್ತಿದ್ದರು. ಹೊರಗಡೆ ಭಯಂಕರವಾದ ಸಿಡಿಲು-ಮಿಂಚುಗಳೊಂದಿಗೆ ಮಳೆ ಸುರಿಯುತ್ತಿತ್ತು. ಶರ್ಮಿಳಾ, ತನ್ನ ತಂದೆ-ತಾಯಿಗಳೆದುರು ಮಂಡಿಯೂರಿ ಕುಳಿತು ಅಳುತ್ತಿದ್ದಳು. - 'ನನ್ನಿಂದ ತಪ್ಪಾಯ್ತು. ನನ್ನನ್ನು ಕ್ಷಮಿಸಿರಿ. ಇರ್ನೆ ನನಗೆ ಮೋಸ ಮಾಡಿದಳು. ಆ ಕಾರಣಕ್ಕಾಗಿಯೇ ನಾನು ಅದನ್ನು ತಿಂದೆ. ಇನ್ನುಮುಂದೆ ನಾನೆಂದೂ ಗೋಮಾಂಸವನ್ನು ತಿನ್ನುವುದಿಲ್ಲ. ಅಷ್ಟೇ ಅಲ್ಲ, ನಾನು ಇರ್ನೆಯ ಜೊತೆಗಿನ ಸಂಬಂಧವನ್ನೇ ಮುರಿದುಕೊಳ್ಳುತ್ತೇನೆ. ಅವಳೊಂದಿಗೆ ಇನ್ನೆಂದಿಗೂ ನಾನು ಮತ್ತೆ ಮಾತಾಡುವುದಿಲ್ಲ.... ಮಾತಾಡುವುದಿಲ್ಲ...' -ಎಂದು ಅಂಗಲಾಚುತ್ತಿದ್ದಳು. ಅವಳು ಒಳಗಡೆ ಹೀಗೆ ರೋಧಿಸುತ್ತಿರುವಾಗಲೇ ಹೊರಗಡೆ ಸಿಡಿಲು-ಮಿಂಚು ಠಳಾಯಿಸುತ್ತಿದ್ದವು. ಅವುಗಳ ಅಬ್ಬರದಲ್ಲಿ ಇರ್ನೆಯ ಕಣ್ಣು ಮಂಜಾದವು, ಕಿವಿ ಕೇಳಿಸದಂತಾದವು. 'ಅಯ್ಯೋ ಆ ಸಿಡಿಲು ಎಲ್ಲಿ ಬಿತ್ತೋ.....ಅದೇನಾದರೂ ಶರ್ಮಿಳಾಳ ಮೇಲೆಯೇ ಬಿದ್ದಿತೋ....ಈಗ ಶರ್ಮಿಳಾ ಎಲ್ಲಿದ್ದಾಳೋ.....!!'- ಒಮ್ಮೆಲೇ ಬೆಚ್ಚಿ ಎಚ್ಚರಾದ ಇರ್ನೆಯ ಮೈತುಂಬ ಬೆವರು ಹರಿಯುತ್ತಿತ್ತು.

ಇರ್ನೆಯ ಮನಸ್ಸಿನಲ್ಲೆದ್ದ ಬಿರುಗಾಳಿ ಇನ್ನೂ ಜೋರಾಗಿಯೇ ಬೀಸುತ್ತಿತ್ತು. ಬಹುಶ: ಅವಳ ತಂದೆ-ತಾಯಿ ಆ ವಿಷಯವನ್ನೇ ಮರೆತಂತಿದ್ದರು. ಅವಳೂ ಏನೂ ನಡೆದೇ ಇಲ್ಲವೆಂಬಂತೆ ಇರಲು ನಿರ್ಧರಿಸಿದಳು. ನಿನ್ನೆ ವನಭೋಜನಕ್ಕೆಂದು ಕರೆದುಕೊಂಡು ಹೋದ ಕಾರಣಕ್ಕಾಗಿ ಇವತ್ತು ಶಾಲೆಯವರು ರಜೆ ಘೋಷಿಸಿದ್ದರು. ನಾಳೆಯಂತೂ ರವಿವಾರ. 'ಇನ್ನು ಸೋಮವಾರವೇ ಶರ್ಮಿಳಾಳ ಭೆಟ್ಟಿಯಾಗುವುದು....'-.ಹೀಗೆ ಯೋಚಿಸುತ್ತಿರುವಾಗಲೇ ಅವಳ ಕೈಯಲ್ಲಿದ್ದ ಮೋಬೈಲ್ ರಿಂಗಣಿಸತೊಡಗಿತು. ಅದರ ಶಬ್ದ ಕೇಳಿದ ತಕ್ಷಣ ಆ ಕರೆ ಯಾರದಿರಬಹುದೆಂದು ಗೊತ್ತಾಗಿ ಇರ್ನೆಗೆ ಆ ಫೋನನ್ನು

ತೆಗೆದುಕೊಳ್ಳುವ ಧೈರ್ಯ ಬರಲಿಲ್ಲ. ಅದು ಹಾಗೇ ಬಾರಿಸುತ್ತಲೇ ಇತ್ತು. ಅವಳ ಹೃದಯ ಡಬ್ ಡಬ್ ಎಂದು ಹೊಡೆದುಕೊಳ್ಳತೊಡಗಿತು. ಜೊತೆಗೆ ಎದೆ ಕಂಪಿಸತೊಡಗಿತು.

"ನಿನ್ನ ಫೋನ್ ಹೊಡೆದುಕೊಳ್ಳುತ್ತಿದೆ...ಅದನ್ನು ತೊಗೋ..."– ತಾಯಿ, ಇರ್ನೆಗೆ ಕೂಗಿ ಹೇಳಿದಳು. ಆದರೆ ಇರ್ನೆ ಆ ಫೋನ್ ಕರೆಯನ್ನು ಕಟ್ ಮಾಡಿಬಿಟ್ಟಳು. ಹಾಗೆ ಕಟ್ ಮಾಡಿ ಒಂದು ನಿಟ್ಟುಸಿರು ಬಿಡಬೇಕೆನ್ನುವಷ್ಟರಲ್ಲಿಯೇ ಮತ್ತೆ ಫೋನ್ ಬಾರಿಸತೊಡಗಿತು. ಈ ಸಲ ತಾಯಿ ಕೂಗಿ ಹೇಳುವ ಮೊದಲೇ ಇರ್ನೆ ಫೋನ್ ಕಟ್ ಮಾಡಿದಳಷ್ಟೇ ಅಲ್ಲ; ಅದನ್ನು ಸ್ವಿಚ್ ಆಫ್ ಕೂಡ ಮಾಡಿಬಿಟ್ಟಳು. ಇಂಥ ಹೊತ್ತಲ್ಲಿ ಶರ್ಮಿಳಾಳನ್ನು ಬಿಟ್ಟು ಅವಳಿಗೆ ಇನ್ಯಾರು ಫೋನ್ ಮಾಡಲು ಸಾಧ್ಯ?

ಮುಂಜಾನೆಯ ಉಪಾಹಾರದಲ್ಲಿ ಇರ್ನೆ ಬರ್ಗರ್‌ನ್ನು ತುಂಬ ಇಷ್ಟಪಡುತ್ತಿದ್ದಳಾದ ಕಾರಣ ಅವಳ ತಾಯಿ ನಿನ್ನೆ ಮಾಡಿ ಉಳಿದಿದ್ದ ಬರ್ಗರನ್ನೇ ಓವನ್‌ನಲ್ಲಿಟ್ಟು ಬಿಸಿ ಮಾಡಿ ಅವಳಿಗೆ ತಿನ್ನಲು ಕೊಟ್ಟಳು. ಅವುಗಳತ್ತ ದೃಷ್ಟಿಯನ್ನೂ ಕೂಡ ಹರಿಸದ ಇರ್ನೆ ಬರ್ಗರ್‌ಗಳ ಆ ಪ್ಲೇಟನ್ನೇ ದೂರ ತಳ್ಳಿಬಿಟ್ಟು . ಟೇಬಲ್ ಮೇಲೆ ಇಟ್ಟಿದ್ದ ಬ್ರೆಡ್ಡಿನಲ್ಲಿ ಒಂದು ತುಂಡನ್ನು ತೆಗೆದುಕೊಂಡು ಚಹಾದಲ್ಲಿ ಅದ್ದಿ ಅದನ್ನೇ ಬಾಯಾಡಿಸತೊಡಗಿದಳು. ತಾಯಿ ಇದನ್ನೆಲ್ಲ ಗಮನಿಸುವ ಮೊದಲೇ ಒಂದೇ ಗುಟುಕಿನಲ್ಲಿ ಚಹಾ ಕುಡಿದು ಪುಸ್ತಕವನ್ನೋದುತ್ತ ಕುಳಿತುಬಿಟ್ಟಳು.

ಶರ್ಮಿಳಾಳಿಂದ ಓದಲು ಪಡೆದಿದ್ದ ಪುಸ್ತಕವನ್ನು ಇರ್ನೆ ಅವಳಿಗೆ ಹಿಂದಿರುಗಿಸಬೇಕಾಗಿತ್ತು. 'ಈಗ ಶರ್ಮಿಳಾ ತನ್ನ ಜೊತೆ ಮಾತಾಡುವಳೇ?'– ಎಂಬುದೇ ಇರ್ನೆಗೆ ದೊಡ್ಡ ಚಿಂತೆಯಾಗಿತ್ತು. 'ಅವಳು ಮಾತಾಡದಿದ್ದರೆ ಆಕೆಗೆ ಪುಸ್ತಕವನ್ನು ಹಿಂದಿರುಗಿಸುವುದು ಹೇಗೆ? ಏನೇ ಇರಲಿ. ಪುಸ್ತಕ ಹಿಂದಿರುಗಿಸುವ ನೆಪವಾದರೂ ತಾವಿಬ್ಬರೂ ಮತ್ತೆ ಮಾತನಾಡುವ ಅವಕಾಶವನ್ನು ತಂದುಕೊಡಬಹುದು. ಹಾಗೆ ಅವಳು ನನ್ನೊಂದಿಗೆ ಮಾತನಾಡಿದರೆ ನಾನು ಅವಳಲ್ಲಿ ಖಂಡಿತ ಕ್ಷಮೆಯನ್ನು ಬೇಡುತ್ತೇನೆ. ಶರ್ಮಿಳಾ ಏನೂ ವೈರತ್ವ ಸಾಧಿಸುವ ವ್ಯಕ್ತಿಯಲ್ಲ..... ಅವಳು ಹಾಗಿರುವುದೇನೋ ನಿಜ; ಆದರೆ ಅವಳ ತಂದೆ–ತಾಯಿ ನನ್ನ ಮೇಲೆ ದ್ವೇಷ ಸಾಧಿಸಲು ಅವಳಿಗೆ ಒತ್ತಾಯ ಮಾಡಿದರೆ ಹೇಗೆ?....ಅವಳು ಹಿಂದೂ ಎಂಬುದೇನೋ ನನಗೆ ಗೊತ್ತು. ಆದರೆ ತಾನು ಅವಳಿಂದ ಬೇರೆ ಎಂಬ ಭಾವನೆ ಬರಲಾರದಷ್ಟು ತಾವಿಬ್ಬರೂ ಹತ್ತಿರವಾಗಿದ್ದವರು. ಅಷ್ಟಕ್ಕೂ, ತಾನು ತಿನ್ನುವುದನ್ನು ಅವಳೂ ತಿಂದರೆ ಅದು ಪಾಪವಾಗುತ್ತದೆಯೆಂದು ತನಗೆ ಎಂದೂ, ಯಾರೂ ಹೇಳಿಲ್ಲ. ಹಾಗೆ ಯಾರಾದರೂ ಹೇಳಿದ್ದರೂ ತಾನು ಅದನ್ನು ನಂಬುತ್ತಿದ್ದೆನೆ? ಅವಳಾಗಿಯೇ ಬರ್ಗರ್‌ನ್ನು ಇಷ್ಟಪಡದಿದ್ದರೆ ತಾನು ಅದನ್ನು ಅರ್ಥಮಾಡಿಕೊಳ್ಳಬಹುದಿತ್ತು. ಆದರೆ, ಶರ್ಮಿಳಾ ಬರ್ಗರ್‌ನ್ನು ಬರೀ ಇಷ್ಟಪಟ್ಟು ತಿಂದದ್ದಷ್ಟೇ ಅಲ್ಲ; ಅದರ ರುಚಿಯನ್ನು ಮನಸಾರೆ ಹೊಗಳಿದಳು ಕೂಡ. ಬರ್ಗರ್ ತಿನ್ನುವಾಗ ಅವಳು ಖುಷಿಪಟ್ಟಿದ್ದನ್ನು ತಾನು ಅಮ್ಮನಿಗೂ ಹೇಳಿದ್ದೇನೆ. ಶರ್ಮಿಳಾ ಕೂಡ ತನ್ನ ತಾಯಿಗೆ ಅದರ ರುಚಿಯ ಬಗ್ಗೆ ಹೇಳಿರಲೂಬಹುದು. ಅಷ್ಟೇ ಅಲ್ಲ, ಅವಳ ತಾಯಿ, ಅದು ಯಾವುದರ ಬರ್ಗರ್?

ಎಂದು ಕೇಳಿರಲೂ ಸಾಕು. ಶರ್ಮಿಳಾ ಆ ಪ್ರಶ್ನೆಗೆ ಏನು ಉತ್ತರ ಕೊಟ್ಟಳೊ!! ಅವಳ ತಾಯಿ ಏನು ತಿಳಿದುಕೊಂಡಳೊ!! ಶರ್ಮಿಳಾ ಅಂದರೆ ಅವಳ ತಂದೆಗೆ ತುಂಬ ಪ್ರೀತಿ. ಹಾಗಿರುವಾಗ ಅವಳು ಇಂಥ ಪಾಪ ಮಾಡಿದ್ದು ಅವರಿಗೆ ಗೊತ್ತಾದರೆ ಅವರು ಸುಮ್ಮನಿದ್ದಾರೆಯೆ...? ಅವರು ಶರ್ಮಿಳಾಳನ್ನು ಹೇಗೆ ಶಿಕ್ಷಿಸಬಹುದು?' –ಆಳವಾದ ಚಿಂತೆಯಲ್ಲಿ ಮುಳುಗಿದ ಇರ್ನೆ ಅದರಿಂದ ಹೊರಬಂದದ್ದು ತಾಯಿ ಕಕ್ಕುಲಾತಿಯಿಂದ ಮಾತನಾಡಿಸಿದಾಗಲೆ–

"ಇರ್ನೆ, ಏನಾಗಿದೆ ಮಗಳೆ ನಿನಗೆ? ಮುಂಜಾನೆ ನೀನು ಬರ್ಗರ್‌ನ್ನೂ ತಿನ್ನಲಿಲ್ಲ. ಈಗ ನೋಡಿದರೆ, ನಿನಗೆ ಮಧ್ಯಾಹ್ನದ ಊಟ ಮಾಡಲೂ ಮನಸ್ಸಿದ್ದಂತಿಲ್ಲ...?" ತಾಯಿಗೆ ಬೇಸರವಾಗದಿರಲೆಂದು ಇರ್ನೆ ಏನೋ ಒಂದಿಷ್ಟು ತಿಂದಂತೆ ಮಾಡಿದಳು. ಅಂದು ಅರ್ಧ ದಿನ ರಜೆಯಿದ್ದ ಕಾರಣ ತಂದೆ ಅಷ್ಟೊತ್ತಿಗಾಗಲೇ ಮನೆಗೆ ಬಂದಿದ್ದರು. ಅವರು ಇನ್ನೇನು ಊಟ ಮಾಡಬೇಕೆನ್ನುವಷ್ಟರಲ್ಲಿಯೇ ಇರ್ನೆಯ ತಾಯಿ– "ನೋಡಿ, ಇವಳು ನಿನ್ನೆ ತನ್ನ ಹಿಂದೂ ಗೆಳತಿಗೆ ಗೋಮಾಂಸದ ಬರ್ಗರ್‌ನ್ನು ತಿನ್ನಲು ಕೊಟ್ಟೆ ಎಂಬ ಕಾರಣಕ್ಕಾಗಿ ಇವತ್ತು ಮಂಕು ಹಿಡಿದವರಂತೆ ಕುಳಿತುಬಿಟ್ಟಿದ್ದಾಳೆ"– ಎಂದು ಅಹವಾಲು ಹೇಳಿದರು. ಅದಕ್ಕೆ ಅವಳ ತಂದೆ ನಗುತ್ತ–

"...ಇರ್ಲಿ ಬಿಡು ಇರ್ನೆ, ನೀನು ಅದಕ್ಕಾಗಿ ಹೆಚ್ಚು ಚಿಂತೆ ಮಾಡಬೇಡ. ನೋಡು ಹೇಗೂ ನೀನೀಗ ನಿನ್ನ ಗೆಳತಿಯನ್ನು ಅಪವಿತ್ರ ಮಾಡಿಬಿಟ್ಟಿದ್ದೀಯಾ. ಈಗ ನಾವು ಅವಳನ್ನು ಮದುವೆಯಾಗುವ ಒಬ್ಬ ಒಳ್ಳೆಯ ಕ್ಯಾಥೋಲಿಕ್ ವರನನ್ನು ಹುಡುಕಿದರಾಯ್ತು"

ತನ್ನ ತಂದೆ ಸಂದರ್ಭ ಏನೆಂಬುದರ ಬಗ್ಗೆ ಗಂಭೀರವಾಗಿದ್ದಾರೋ–ಇಲ್ಲವೋ ಅಥವಾ ತನ್ನ ಕಾಲೆಳೆಯಲೆಂದು ಅವರು ಬೇಕಂತಲೇ ಹೀಗೆ ಮಾಡುತ್ತಿದ್ದಾರೋ–ಎಂದು ಇರ್ನೆಗೆ ಯಾವುದೂ ತಿಳಿಯದಂತಾಯ್ತು. ನೇರವಾಗಿ ಅವರನ್ನೇ ಕೇಳಬೇಕೆಂದುಕೊಂಡ ಆಕೆಗೆ ಮತ್ತೇನೆನ್ನಿಸಿತೋ, ಎದ್ದವಳೇ ಒಳಗೆ ನಡೆದುಬಿಟ್ಟಳು.

'ಅಂದರೆ, ತಾನು ಶರ್ಮಿಳಾಳನ್ನು ಅಪವಿತ್ರ ಮಾಡಿದೆ ಎಂದಾಯಿತು!! ಆದರೆ ತಾನು ನಿಜವಾಗಿ ಮಾಡಿದ್ದೇನು? ಅದಕ್ಕೆ ಅಪವಿತ್ರತೆಯ ಕಳಂಕ ಅಂಟಿಕೊಂಡಿತು. ಅಪವಿತ್ರ ಮಾಡಿದೆ ಎಂದರೆ, ತಾನು ಅವಳನ್ನು ಕೆಡಿಸಿದೆ ಎಂದಾಯ್ತು. ಅಪ್ಪ ಹೇಳುತ್ತಾರೆ– ಅವಳನ್ನು ಮದುವೆಯಾಗಲು ಒಬ್ಬ ಕ್ಯಾಥೋಲಿಕ್ ವರನನ್ನು ಹುಡುಕಬೇಕು–ಎಂದು. ಆದರೆ ಇದು ಸಾಧ್ಯವೆ? ಮದುವೆ ಎಂಬುದು ಅವರವರ ವೈಯಕ್ತಿಕ ಆಯ್ಕೆಗೆ ಸಂಬಂಧಿಸಿದ ಪ್ರಶ್ನೆ. ಇದೀಗ ಪಾಲಕರು ತಮ್ಮ ಮಕ್ಕಳಿಗಾಗಿ ಸಂಗಾತಿಗಳನ್ನು ಹುಡುಕುವ ದಿನಗಳೂ ದೂರ ಹೋಗಿವೆ ಎಂದೂ ಅಪ್ಪ ಹೇಳುತ್ತಾರೆ. ಪುಸ್ತಕಗಳಲ್ಲಿಯೂ ನಾವು ಇದನ್ನೇ ಓದುತ್ತಿದ್ದೇವೆ. ಶರ್ಮಿಳಾ ಪಾಪದ ಹುಡುಗಿ. ದೇವರೆ, ಅವಳಿಗೆ ಮಾತ್ರ ಏನೂ ಆಗದಿರಲೆಂದು ಬೇಡುವೆ'.

ಸಂಜೆ ಇರ್ನೆ ಹೊರಗೆ ಹೋಗಲೆಂದು ಬಟ್ಟೆ ಬದಲಾಯಿಸಿದಳು. ಅವಳನ್ನು ನೋಡಿದ ತಾಯಿ "ಎಲ್ಲಿಗೆ ಹೊರಟಿರುವೆ ಇರ್ನೆ?" ಎಂದು ಆಶ್ಚರ್ಯದಿಂದ ಕೇಳುತ್ತಲೇ–

"ಓಹೋ... ನಿನ್ನ ಗೆಳತಿಯ ಮನೆಗಾ?..." ಎಂದು ಉದ್ದೇಶಪೂರ್ವಕವಾಗಿ ಮತ್ತೊಂದು ಮಾತು ಸೇರಿಸಿದಳು. "ನಾನು ಪ್ರಾರ್ಥನೆಗಾಗಿ ಚರ್ಚ್‌ಗೆ ಹೋಗುತ್ತಿದ್ದೇನಮ್ಮ" ಎಂದಳು ಇರ್ನೆ. ರವಿವಾರದ ಕಡ್ಡಾಯ ಪ್ರಾರ್ಥನೆಗೆ ಹೋಗಲು ಆಗದಿರುವವರಿಗಾಗಿ ಶನಿವಾರ ಸಾಯಂಕಾಲ ಪ್ರಾರ್ಥನಾ ಸಭೆ ಇರುತ್ತಿತ್ತು. ಅಂದು ಸಾಮಾನ್ಯವಾಗಿ ಹೆಚ್ಚು ಜನರ ಗದ್ದಲ ಇರುತ್ತಿರಲಿಲ್ಲವಾದ ಕಾರಣ ಇರ್ನೆ ಆ ದಿನವೇ ಪ್ರಾರ್ಥನೆ ಸೇವೆಗೆ ಹೋಗುತ್ತಿದ್ದಳು.

ಸಾಧ್ಯವಿರುವಷ್ಟು ತನ್ನನ್ನೇ ತಾನು ಸಮಾಧಾನಪಡಿಸಿಕೊಳ್ಳುತ್ತ ಇರ್ನೆ ಪ್ರಾರ್ಥನಾ ಸಭೆಯಲ್ಲಿ ಪಾಲ್ಗೊಂಡಳು. ಪ್ರಾರ್ಥನೆ ಮುಗಿದ ನಂತರ ಚರ್ಚ್ ಖಾಲಿಯಾಗುವುದನ್ನು ಕಾಯ್ದು ಅವಳು ಪೂಜ್ಯ ಫಾದರ್ ಅವರನ್ನು ಹಿಂಬಾಲಿಸಿ ಪವಿತ್ರ ಸನ್ನಿಧಾನದೊಳಗೆ ಪ್ರವೇಶಿಸಿದಳು. ಅಲ್ಲಿ ಅವರಿಬ್ಬರನ್ನುಳಿದು ಬೇರಾರೂ ಇರಲಿಲ್ಲ.

"ಫಾದರ್, ನಾನೊಂದು ತಪ್ಪೊಪ್ಪಿಗೆ ಮಾಡಿಕೊಳ್ಳಬಯಸುತ್ತೇನೆ"–ಇರ್ನೆ ಕೇಳಿಕೊಂಡಳು. ಒಂದು ಕ್ಷಣ ಆಶ್ಚರ್ಯಚಕಿತರಾದ ಫಾದರ್ ಅವಳತ್ತ ನೋಡಿ, ತಲೆ ಅಲ್ಲಾಡಿಸುತ್ತ " ಬಾ ಮಗೂ"–ಎಂದರು. ತಮ್ಮ ಶಲ್ಯವನ್ನು ಕುತ್ತಿಗೆಯ ಸುತ್ತ ಸರಿಪಡಿಸಿಕೊಳ್ಳುತ್ತ ಅವರು ಕುಳಿತುಕೊಂಡರು. ಇರ್ನೆ ಅವರೆದುರು ಮಂಡಿಯೂರಿ ಕುಳಿತು, ಎದೆ ಹಾಗೂ ಭುಜ ಮುಟ್ಟಿಕೊಂಡು ಕ್ರಾಸ್ ಚಿಹ್ನೆಗೆ ಗೌರವ ಸಲ್ಲಿಸುವುದರೊಂದಿಗೆ ಬಾಗಿ– "ಫಾದರ್, ನಾನೊಂದು ಪಾಪಕೃತ್ಯ ಮಾಡಿರುವೆ. ನನ್ನನ್ನು ಆಶೀರ್ವದಿಸಿ ಕ್ಷಮಿಸಿರಿ"–ಎಂದಳು ದೈನ್ಯದಿಂದ. "ಮಗಳೆ, ನೀನು ಈ ಹಿಂದೆ ಯಾವಾಗ ತಪ್ಪೊಪ್ಪಿಗೆ ಕೇಳಿದ್ದು?" ಇರ್ನೆ ಅವರ ಪ್ರಶ್ನೆಗೆ ಉತ್ತರಿಸುತ್ತಲೇ "ಫಾದರ್, ನಿನ್ನೆ ನಾನು ಒಂದು ಪಾಪ ಮಾಡಿರುವೆ" ಎಂದು ಮತ್ತೆ ಹೇಳಿದಳು. "ಮಗಳೆ, ದೇವರಲ್ಲಿ ನಂಬಿಕೆ ಇಡು. ನಿನ್ನ ಹೃದಯವನ್ನು ತೆರೆದುಕೋ. ಅಂದರೆ ನೀನು ದೇವರಿಂದ ಕ್ಷಮೆ ಹೊಂದುವಿ"–ಫಾದರ್ ಅವರ ಪ್ರೇರಣಾತ್ಮಕ ಮಾತುಗಳಿಂದ ಇರ್ನೆಗೆ ಹೊಸ ಧೈರ್ಯ ಬಂದಂತಾಯ್ತು. ಮತ್ತೆ ಹೇಳತೊಡಗಿದಳು– "ಫಾದರ್, ನಿನ್ನೆ ನಾವು ಶಾಲೆಯ ವತಿಯಿಂದ ವನಭೋಜನಕ್ಕೆ ಹೋಗಿದ್ದೆವು. ನನ್ನ ಗೆಳತಿ ಶರ್ಮಿಳಾ ನನ್ನೊಂದಿಗಿದ್ದಳು. ಊಟ ಮಾಡಲೆಂದು ನಾವಿಬ್ಬರೂ ಒಟ್ಟಿಗೆ ಕುಳಿತೆವು. ನಾನು ಒಯ್ದಿದ್ದ ಗೋಮಾಂಸದ ಬರ್ಗರನ್ನು ಅವಳಿಗೆ ಕೊಟ್ಟೆ. ಅವಳು ಅದನ್ನು ತಿಂದಳು. ಹಿಂದೂಗಳು ಗೋಮಾಂಸ ತಿನ್ನುವುದಿಲ್ಲವೆಂದು ನನಗೆ ಗೊತ್ತಿರಲಿಲ್ಲ. ಅದಕ್ಕಾಗಿ ನಾನು ತಪ್ಪು ಮಾಡಿಬಿಟ್ಟೆ. ಫಾದರ್ ನನ್ನನ್ನು ಕ್ಷಮಿಸಿರಿ"

ಫಾದರ್ ಮುಖದ ಮೇಲೆ ನಗುವಿನ ಅಲೆಯೊಂದು ಸುಳಿದಾಡಿತು. "ಅಷ್ಟೇ ತಾನೆ, ಮಗಳೆ ನೀನೇನೂ ಚಿಂತಿಸಬೇಡ. ಇದು ಕ್ಷಮಾರ್ಹವಾದ ಸಣ್ಣ ಅಪರಾಧ. ಇದಕ್ಕಾಗಿ ನೀನು ಕ್ಷಮೆ ಕೇಳುತ್ತಿರುವಿಯಲ್ಲವೆ? ನಿನ್ನ ಹೃದಯ ಈಗ ಪರಿಶುದ್ಧವಾಯಿತು"

"ಆದರೆ, ಫಾದರ್, ಇದು ನನ್ನಿಂದಾಗಿ ಅವಳಿಗೆ ತಟ್ಟಿದ ಪಾಪ!! ಇರ್ನೆಯ ಮಾತನ್ನು ನಡುವೆಯೇ ತಡೆದ ಫಾದರ್ ಅವಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹೇಳಿದರು. "ಮಗೂ, ನೀನೇನೂ ಚಿಂತೆ ಮಾಡಬೇಡ. ಎಲ್ಲ ಸಮಸ್ಯೆಯನ್ನೂ ಪರಿಹರಿಸಲಾಗುವುದು"–ಎನ್ನುತ್ತ ದೇವರಲ್ಲಿ ಪ್ರಾರ್ಥಿಸಿದ ಅವರು "ದೇವರು ನಿನ್ನನ್ನು

ಕ್ಷಮಿಸಿದ್ದಾರೆ. ನೀನೀಗ ದೇವರ ಕೃಪೆಗೆ ಪಾತ್ರಳಗಿದ್ದೀ. ಶಾಂತಳಾಗು"–ಎಂದು ಕೊನೆಯ ಆಶೀರ್ವಾದ ಮಾಡಿ ಎದ್ದು ನಿಂತರು.

'ಅದು ಹೇಗೆ? ದೇವರು ತನ್ನನ್ನೇನೋ ಕ್ಷಮಿಸಿರಬಹುದು. ಆದರೆ ಶರ್ಮಿಳಾಳ ತಂದೆ–ತಾಯಿ ಅವಳನ್ನು ಕ್ಷಮಿಸುತ್ತಾರೆಯೆ? ಅಥವಾ ದೇವರು ಅವಳನ್ನು ಕ್ಷಮಿಸುತ್ತಾನೆಯೆ?' –ಹೀಗೆ ಮತ್ತೆ ಯೋಚನೆಗಳ ತಾಕಲಾಟದ ಮನೋಸ್ಥಿತಿಯಲ್ಲಿಯೇ ಇರ್ನ ಮನೆಯ ಕಡೆ ಹೊರಟಳು. ರಾತ್ರಿಯಾಯಿತು... ಮತ್ತೆ ಅದೇ... ಮರಳಿ ಬಂತು ಕನಸು.

ಈ ಸಲದ ಕನಸಿನಲ್ಲಿ ಇರ್ನ, ಶರ್ಮಿಳಾಳ ಎದುರು ಮಂಡಿಯೂರಿ ಕುಳಿತು ಕ್ಷಮೆ ಬೇಡುತ್ತಿದ್ದಾಳೆ. ಶರ್ಮಿಳಾ ಮಾತ್ರ ಅವಳತ್ತ ಗಮನ ಕೊಡದೆ ತಿರಸ್ಕಾರದ ಮಾತುಗಳನ್ನಾಡುತ್ತಿದ್ದಾಳೆ. ' ತಪ್ಪು ಮಾಡಿದ್ದು ನೀನು, ಅದಕ್ಕಾಗಿ ನಾನು ದಂಡ ತೆರಬೇಕೆ? ನೋಡಿಲ್ಲಿ ಹೇಗಿವೆ....'– ಎನ್ನುತ್ತ ತನ್ನ ಬೆನ್ನು ಮತ್ತು ಕೈ–ಕಾಲುಗಳ ಮೇಲೆ ಮೂಡಿದ್ದ ಹೊಡೆತದ ಬಾರುಗಳನ್ನು ತೋರಿಸುತ್ತಾಳೆ .' ಅಯ್ಯೋ ಶರ್ಮಿಳಾ, ನನ್ನಿಂದ ತಪ್ಪಾಯ್ತು. ನೀನು ನಿಷ್ಪಾಪಿ ಹುಡುಗಿ. ಯಾರು ನಿನ್ನನ್ನು ಹೊಡೆದದ್ದು? ನಿಜವಾಗಿ ನೋಡಿದರೆ ಈ ಹೊಡೆತ ನನಗೆ ಬೀಳಬೇಕು...'–ನೊಂದುಕೊಂಡ ಇರ್ನ ಹೀಗೆನ್ನುತ್ತಿರುವಾಗಲೆ ದೊಡ್ಡ ದನಿಯೊಂದು ಕೇಳಿಬರುತ್ತದೆ.



'....ಹಾಂ...ನಿನಗೂ ಕಾದಿದೆ... ನೀನೇನೂ ಹೊಡೆತಗಳಿಂದ ತಪ್ಪಿಸಿಕೊಳ್ಳುವೆನೆಂದು ಭಾವಿಸಬೇಡ...'– ಹೀಗೆ ಚೀರುತ್ತ ಧಡೂತಿ ಆಸಾಮಿಯೊಂದು ತನ್ನ ಕೆಂಗಣ್ಣುಗಳನ್ನು ತಿರುಗಿಸುತ್ತ, ಇರ್ನಯನ್ನು ದುರುಗುಟ್ಟಿ ನೋಡುತ್ತ ಅವಳ ಎದುರಿಗೇ ಬಂದು ನಿಂತಿದೆ. ಬಹುಶ: ಅವರು ಶರ್ಮಿಳಾಳ ತಂದೆಯೇ ಇರಬೇಕು. "ಶರ್ಮಿಳಾಳನ್ನು ಅಪವಿತ್ರಗೊಳಿಸಿದ್ದು ನೀನೆ ತಾನೆ?... ಹೌದೋ ಅಲ್ಲವೋ....?"
"ಇಲ್ಲ...ಇಲ್ಲ...ಇಲ್ಲ...." "ಇಲ್ಲ ಅನ್ನುತ್ತೀಯಾ?... ನೀನೇ ಮಾಡಿದ್ದಲ್ಲವೇ ಆ ಕೆಲಸವನ್ನು?...

ಹೌದು ನೀನೇ ಮಾಡಿದ್ದು..."- ಎನ್ನುತ್ತ ಆ ಧಡೂತಿ ಮನುಷ್ಯ ತನ್ನ ಕೈಯಲ್ಲಿದ್ದ ಕೋಲನ್ನು ಮೇಲಕ್ಕೆತ್ತಿತು. ಇನ್ನೇನು ತನಗೆ ಹೊಡೆತ ಬೀಳುತ್ತದೆಯೆಂದು ಹೆದರಿದ ಇರ್ನ ಗಂಟಲಲ್ಲಿ ಉಸಿರು ಕಟ್ಟಿದಂತಾಗಿ ಕಿಟಾರನೇ ಚೀರಿಕೊಳ್ಳಲು ಪ್ರಯತ್ನಿಸುತ್ತಾಳೆ. ಆದರೆ... "ಯಾಕೆ ಮಗಳೆ ಏನಾಯ್ತು? ಏನಾದ್ರೂ ಕೆಟ್ಟ ಕನಸು ಬಿತ್ತೆ?"-ತಾಯಿ ಅವಳನ್ನು ಹತ್ತಿರಕ್ಕೆ ಎಳೆದು ಅಪ್ಪಿಕೊಳ್ಳುತ್ತ ಕೇಳಿದಳು. ಇರ್ನ ಜೋರಾಗಿ ಅಳತೊಡಗಿದಳು. "ಏ...ಅದಕ್ಯಾಕಮ್ಮ ಹೆದರ್ತೀ? ಏನೋ ಕೆಟ್ಟ ಕನಸು ಬಿದ್ದಿರಬೇಕು. ಮುಗಿದು ಹೋಯ್ತಲ್ಲ ಈಗ ಅದು. ಏಳು ಒಂದಿಷ್ಟು ನೀರು ಕುಡಿದು ಮಲಗಿಕೋ. ಏನೂ ಆಗೋದಿಲ್ಲ"- ಎಂದು ಸಮಾಧಾನಪಡಿಸಿದಳು ಅವಳ ತಾಯಿ.

ರವಿವಾರ ಇಡೀ ದಿನ ಇರ್ನ ತನ್ನ ಫೋನನ್ನು ಬಂದ್ ಮಾಡಿ ಇಟ್ಟುಬಿಟ್ಟಳು. 'ಶರ್ಮಿಳಾ ತನ್ನನ್ನು ಏನಾದರೂ ಪ್ರಶ್ನಿಸಿದರೆ ಅವಳಿಗೇನು ಉತ್ತರ ಹೇಳುವುದು? ಹೌದು, ನಾಳೆ ಶಾಲೆಯಲ್ಲಿ ಶರ್ಮಿಳಾ ಕಂಡಕೂಡಲೇ ಅವಳಲ್ಲಿ ಕ್ಷಮೆ ಕೇಳಬೇಕು. ಆದರೆ... ಅವಳು ಈಗಲೇ ಇಲ್ಲಿಗೆ ಬಂದರೆ ಏನು ಮಾಡುವುದು? ಅವಳ ತಂದೆ-ತಾಯಿ ಕೂಡ ಅವಳೊಂದಿಗೆ ಬಂದರೆ ಏನು ಗತಿ? ಅವರು ನನ್ನ ತಂದೆ-ತಾಯಿಯರೊಂದಿಗೆ ಹೊಡೆದಾಡಿದರೆ ಹೇಗೆ? ಇಂಥ ಹೊತ್ತಲ್ಲಿ ನಾನು ಹೊರಗೆ ಹೋಗಿ ಸಿಲೇನಾ ಆಂಟಿಯೊಂದಿಗೆ ಇಡೀ ದಿನ ಕಳೆವರೆ ಒಳ್ಳೆಯದಲ್ಲವೆ?.... ಅಯ್ಯೋ ...ನಾನು ಹಾಗೇನಾದರೂ ಮಾಡಿದರೆ ಶರ್ಮಿಳಾಳ ತಂದೆ-ತಾಯಂದಿರನ್ನು ನನ್ನ ಅಪ್ಪ-ಅಮ್ಮ ಮಾತ್ರ ಎದುರಿಸಬೇಕಾಗುತ್ತದೆಯಲ್ಲವೆ?...ಇರಲಿ, ಏನಾಗುತ್ತದೆಯೋ ಆಗಲಿ...'-ಹೀಗೆ ಏನೇನನ್ನೋ ಯೋಚನೆ ಮಾಡುತ್ತ ಇರ್ನ ತನ್ನ ತಾಯಿಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಮಲಗಿಬಿಟ್ಟಳು. ತಾಯಿಯ ಕೈಗಳ ಬಿಸಿಯಪ್ಪುಗೆಯಲ್ಲಿ ಮಲಗಿದ ಅವಳಿಗೆ ಆ ರಾತ್ರಿ ಯಾವ ಕನಸೂ ಬೀಳಲಿಲ್ಲ. ಆದರೆ, ಅವಳಿಗೆ ಒಳ್ಳೆಯ ನಿದ್ದೆಯೇನೂ ಬರಲಿಲ್ಲ.

ಶಾಲೆಯನ್ನು ಬೇಗನೇ ತಲುಪಿದ ಇರ್ನ ಪ್ರಾರ್ಥನಾ ಸಭೆಯ ಸಮಯದವರೆಗೆ ಯಾರಿಗೂ ಕಾಣದಂತೆ ಕುಳಿತಳು.

ಶರ್ಮಿಳಾ ತನಗಾಗಿ ಕಾಯುತ್ತಿರಬಹುದೆಂದು ಊಹಿಸಿದ ಅವಳು, ಅವಳ ಕಣ್ಣಿಗೆ ಬೀಳದ ಹಾಗೆ ದೂರದಿಂದಲೇ ಅವಳನ್ನು ನೋಡುತ್ತಿದ್ದಳು. ಪ್ರಾರ್ಥನೆ ಮುಗಿದ ನಂತರ ಇರ್ನ ಸಾಂದ್ರಾಳೊಂದಿಗೆ ಮಾತನಾಡುತ್ತ ನಡೆಯತೊಡಗಿದಳು. ಶರ್ಮಿಳಾ ತನ್ನನ್ನು ದೂರದಿಂದ ಕರೆಯುತ್ತಿದ್ದರೂ ಅದು ಕೇಳಿಸದವರ ಹಾಗೆ ನಟಿಸುತ್ತ ವರ್ಗದ ಕೋಣೆಯ ಒಳಗೆ ನಡೆದುಬಿಟ್ಟಳು. ಆದರೆ ಅವಳು ಬೆಂಚ್ ಮೇಲೆ ಕುಳಿತುಕೊಳ್ಳಬೇಕೆನ್ನುವಷ್ಟರಲ್ಲಿಯೇ ಶರ್ಮಿಳಾ ಅವಳ ಬಳಿಗೆ ಓಡುತ್ತ ಬಂದು "ಅರೆ, ಇರ್ನ ನಿನ್ನೆ ಮತ್ತು ಮೊನ್ನೆ ನೀನು ಎಲ್ಲಿದ್ದಿಯೇ? ನಾನು ನಿನಗೆ ಅದೆಷ್ಟು ಸಲ ಫೋನ್ ಮಾಡಿದೆ ಗೊತ್ತಾ? ಏನೇ ಯಾಕೆ ಫೋನ್ ತೊಗೊಳ್ಳಿಲ್ಲ? ಹಾಗೇಕೆ ಮಾಡಿದೆ?....ಏ!! ಇದೇನೇ...ನಿನ್ನ ಕಣ್ಣು ನೋಡಿದರೆ ನೀನು ನಿನ್ನೆ ರಾತ್ರಿ ತಡವಾಗಿ ಮಲಗಿದಂತೆ ಕಾಣ್ತವೆ!! ನನಗೆ ಗೊತ್ತು ಒಂದು ಸಲ ನೀನು ಪುಸ್ತಕ ಓದಲು ಸುರೂ ಮಾಡಿದೆಯೆಂದರೆ ಮುಗಿದೇ ಹೋಯ್ತು. ಅದು ಮುಗಿಯುವವರೆಗೂ ಮಲಗುವವಳಲ್ಲ ನೀನು. ನಿನ್ನೆ ಎಷ್ಟೊತ್ತಿಗೆ ಮಲಗಿದೆಯ?

ಆಪುಸ್ತಕವನ್ನು ಓದಿ ಮುಗಿಸಿಯೇ ಬಿಟ್ಟೆಯಾ?....."– ಹೀಗೇ ಬಿಟ್ಟೂಬಿಡದೆ ಪ್ರಶ್ನೆಗಳನ್ನು ಕೇಳುತ್ತಲೇ ಇದ್ದಳು ಶರ್ಮಿಳಾ. ಇನ್ನೇನು ಅವಳ ಪ್ರಶ್ನೆಗಳಿಗೆ ಇರ್ನೆ ಉತ್ತರಿಸಬೇಕೆನ್ನುವಷ್ಟರಲ್ಲಿಯೇ ಟೀಚರ್ ಕ್ಲಾಸ್‌ರೂಮಿನ ಒಳಗೆ ಬಂದು ಬಿಟ್ಟದ್ದರಾದ ಕಾರಣ ಶರ್ಮಿಳಾ ಅಲ್ಲಿಂದ ಹೊರಟು, ತನ್ನ ಜಾಗೆಯಲ್ಲಿ ಕುಳಿತುಕೊಂಡುಬಿಟ್ಟಳು. "ಓ....ದೇವರೆ, ಪುಣ್ಯಕ್ಕೆ ಬರ್ಗರ್‌ನ ವಿಷಯ ಬರಲಿಲ್ಲವಲ್ಲ!!... ನಿನಗೆ ಧನ್ಯವಾದ. ...ಅಂದರೆ, ಶರ್ಮಿಳಾಳ ಮನೆಯಲ್ಲಿ ಅದರ ಬಗ್ಗೆ ಏನೂ ಗದ್ದಲ ನಡೆದಿಲ್ಲ ಎಂದಾಯಿತು....ಅಬ್ಬಾ, ಒಳ್ಳೆಯದೇ ಆಯ್ತು"–ಎಂದುಕೊಳ್ಳುತ್ತ ಇರ್ನೆ ತನ್ನ ಪುಸ್ತಕವನ್ನು ತೆರೆದಳು.

ಮಧ್ಯಾಹ್ನದ ಬಿಡುವಿನ ಸಮಯದಲ್ಲಿ ಇರ್ನೆ ಇನ್ನೇನು ಎದ್ದುನಿಲ್ಲಬೇಕೆನ್ನುವಷ್ಟರಲ್ಲಿಯೇ ಶರ್ಮಿಳಾ ಅವಳ ಹತ್ತಿರವೇ ಓಡಿ ಬಂದಳು. ಅವಳ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, "ಬಾ. ನಿನ್ನೊಂದಿಗೆ ಮಾತಾಡುವುದಿದೆ" ಎನ್ನುತ್ತ ಅವಳನ್ನು ಹೊರಗೆ ಕರದೊಯ್ದಳು. "ಹೇಳು.... ನಿನ್ನಿನ ಆ ಬರ್ಗರ್ ಇತ್ತಲ್ಲ....ಓ...!!" ಇರ್ನೆಯ ಹೃದಯ ಜೋರಾಗಿ ಬಡಿದುಕೊಳ್ಳತೊಡಗಿತು. "ಅದು ನಿನ್ನ ಅಮ್ಮ ತಯ್ಯಾರಿಸಿದ್ದೆ....?" ಶರ್ಮಿಳಾ ಮತ್ತೊಂದು ಪ್ರಶ್ನೆ ಕೇಳಿದಳು. ಏನು ಹೇಳಬೇಕೆಂಬುದೇ ಇರ್ನೆಗೆ ಹೊಳೆಯುತ್ತಲಿಲ್ಲ. ಸುಳ್ಳು ಮಾತ್ರ ಹೇಳಬಾರದೆಂದುಕೊಂಡ ಅವಳು– "ಆಂ...ಹೌದು" ಎಂದಷ್ಟೇ ಉತ್ತರಿಸಿದಳು. "ಆ ಬರ್ಗರ್‌ನ್ನು ಹೇಗೆ ಮಾಡುತ್ತಾರೆ?"– ಶರ್ಮಿಳಾಳ ದನಿಯಲ್ಲಿ ಬರ್ಗರ್‌ನ ವಿವರಗಳನ್ನು ತಿಳಿದುಕೊಳ್ಳುವ ಕುತೂಹಲ ಇತ್ತು.

ಅವಳ ತಾಯಿಗೆ ಸಂಶಯ ಬಂದು, ಅದರ ರಹಸ್ಯವೇನೆಂಬುದನ್ನು ತಿಳಿದುಕೊಳ್ಳಲು ಹೇಳಿದ್ದರೆಂದು ತೋರುತ್ತದೆ. "ಅದನ್ನು ಹೇಗೆ ಮಾಡುತ್ತಾರೋ ಏನೋ.....ನನಗೆ ಗೊತ್ತಿಲ್ಲ...." ಎಂದಷ್ಟೇ ಉತ್ತರಿಸಿದಳು ಇರ್ನೆ. "ಓಹೋ...ಹಾಗಾ?...ಇರಲಿ ಬಿಡು. ನಾನು ನಿನಗೆ ನಂತರ ಫೋನ್ ಮಾಡುತ್ತೇನೆ.



ಬರ್ಗರ್‌ನ ಬಗೆಗೆ ನಿನ್ನ ತಾಯಿಯ ಜೊತೆ ಮಾತಾಡಿ ನನಗೆ ಹೇಳು. ಇದೇ ತರದ ರುಚಿಯ ಬರ್ಗರ್ ತಯ್ಯಾರಿಸಿಕೊಡಲು ನಾನು ನನ್ನ ತಾಯಿಗೆ ಕೇಳಿರುವೆ. ಆ ಬರ್ಗರ್‌ನ್ನು ನಾನು ಎಷ್ಟು ಖುಷಿಪಟ್ಟು ತಿಂದೆ ಗೊತ್ತಾ? ಓಹ್!! ಅದು ತುಂಬಾ ರುಚಿಕರವಾಗಿತ್ತು"-ಶರ್ಮಿಳಾ.

ಸಂಜೆ ಹೇಳಿದ ಸಮಯಕ್ಕೆ ಸರಿಯಾಗಿ ಶರ್ಮಿಳಾ ಫೋನ್ ಮಾಡಿಯೇ ಬಿಟ್ಟಳು. ಇರ್ನೆಗೆ ಸುಳ್ಳು ಹೇಳುವುದು ಇಷ್ಟವಿರಲಿಲ್ಲವಾದರೂ ಅವಳು ಫೋನ್‌ನಲ್ಲಿ- "ಕ್ಷಮಿಸು ಶರ್ಮಿಳಾ. ಅಮ್ಮ ಎಲ್ಲೋ ಹೊರಗೆ ಹೋಗಿದ್ದಾರೆ. ಆದರೆ, ನಾನು ಅವರನ್ನು ಕೇಳಿದಾಗ, ಇದೇ ಬಗೆಯ ರುಚಿಕರ ಬರ್ಗರ್‌ಗಳು ಆಹಾರ ಪದಾರ್ಥ ಮಾರುವ ಯಾವುದೇ ಅಂಗಡಿಗಳಲ್ಲೂ ಸಿಗುತ್ತವೆಯೆಂದು ಹೇಳಿದರು"-ಎಂದು ಸುಳ್ಳು ಹೇಳಿದಳು. " ಹೌದು ಇರ್ನೆ, ಬರ್ಗರ್‌ಗಳು ಯಾವುದೇ ಅಂಗಡಿಗಳಲ್ಲೂ ಸಿಗುತ್ತವೆಯೆಂಬುದು ನನಗೂ ಗೊತ್ತು. ಆದರೆ, ನಿಮ್ಮ ಅಮ್ಮ ಮಾಡಿದ ಆ ಬರ್ಗರ್‌ನ್ನು ಯಾವ ಹೆಸರಿನಿಂದ ಕರೆಯುತ್ತಾರೆ?"-ಶರ್ಮಿಳಾ ಮತ್ತೆ ಕೇಳಿದಳು.

ಇರ್ನೆ ಈಗ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಳು. ಆದರೆ ಆ ಸಮಯಕ್ಕೆ ಏನಾದರೊಂದು ಉತ್ತರ ಹೇಳಲೇಬೇಕಲ್ಲವೆ?

"ಶರ್ಮಿಳಾ , ಖಂಡಿತ ನನಗದು ಗೊತ್ತಿಲ್ಲ. ಒಂದು ಕೆಲಸ ಮಾಡು. ಯಾವುದಾದರೂ ಅಂಗಡಿಗೆ ನೀನೇ ಹೋಗಿ ಕೇಳಿ ಪ್ರಯತ್ನಿಸು"-ಎಂದು ಆ ಸಂಭಾಷಣೆಗೆ ಕೊನೆ ಹೇಳಿದಳು.

ಮರುದಿನ ಇರ್ನೆ, ಶರ್ಮಿಳಾಳ ಪುಸ್ತಕವನ್ನು ವಾಪಸು ಕೊಡುವ ನೆವದಲ್ಲಿ ಆ ಪುಸ್ತಕದ



ಬಗೆಗೇ ಹೆಚ್ಚು ಮಾತಾಡುತ್ತ , –"ನಿನ್ನೆ ನನ್ನ ಅಪ್ಪ,– 'ಏನಮ್ಮ, ಈಗ ಏನು ಓದ್ತಾ ಇದ್ದೀ'– ಎಂದು ಕೇಳಿದರು. ನಾನು 'ಪ್ರೈಡ್ ಅಂಡ್ ಪ್ರಿಜುಡೀಜ್' ಓದ್ತಾ ಇದ್ದೇನೆಂದು ಹೇಳಿದೆ. ಅವರು ಆಶ್ಚರ್ಯಪಟ್ಟು,– 'ನೋಡೋಣ ಆ ಪುಸ್ತಕ ತೋರಿಸು'– ಎಂದರು. ನಾನು ಅವರಿಗೆ ಆ ಪುಸ್ತಕವನ್ನು ತೋರಿಸಿದೆ. ಅವರು ತುಂಬಾ ಖುಷಿಪಟ್ಟು,– 'ಓ, ಗುಡ್, ನೀನು ಇಂಥ ಒಳ್ಳೆಯ ಪುಸ್ತಕಗಳನ್ನೇ ಓದಬೇಕು' –ಎನ್ನುತ್ತ,– 'ನೋಡು ನೀನು ಓದುತ್ತಿರುವುದು ಸಂಗ್ರಹಿತ ಆವೃತ್ತಿ. ಇದು ಓದಲು ತುಂಬಾ ಸುಲಭವಾದುದಾಗಿರುತ್ತದೆ.ಆದರೆ, ದೊಡ್ಡವಳಾದ ಮೇಲೆ ನೀನು ಮೂಲ ಕಾದಂಬರಿಯನ್ನು ಪೂರ್ತಿಯಾಗಿ ಓದಬೇಕು ಎಂದರು"– ಎಂದೆಲ್ಲಾ ವಿವರ ಕೊಡುತ್ತ, ಅವಳು ಬರ್ಗರ್‌ನ ವಿಷಯದ ಪ್ರಸ್ತಾಪ ಬರಲಾರದ ಹಾಗೆ ನೋಡಿಕೊಂಡಳು. "ಹೌದು, ನನ್ನ ತಂದೆ ಕೂಡ ಹಾಗೇ ಹೇಳುತ್ತಾರೆ. ನಾವೀಗ ಚಾರ್ಲಸ್ ಡಿಕನ್ಸ್‌ನ 'ಓಲಿವರ್ ಟ್ವಿಸ್ಟ್' ಓದಿದೆವಲ್ಲವೆ? ಇಂಥ ಎಷ್ಟೋ ಒಳ್ಳೆಯ ಪುಸ್ತಕಗಳಿವೆ. ಅಂಥವುಗಳನ್ನು ನನಗಾಗಿ ತಂದುಕೊಡುತ್ತೇನೆಂದು ಅಪ್ಪ ಹೇಳಿದ್ದಾರೆ"

ಶರ್ಮಿಳಾಳ ಮನೆಯಲ್ಲಿ ಅವಳು ಗೋಮಾಂಸದ ಬರ್ಗರ್ ತಿಂದ ವಿಷಯವೇ ಗೊತ್ತಾಗಿಲ್ಲವೆಂದು ತಿಳಿದ ಇರ್ನೆಗೆ ಒಂದು ಕಡೆ ಸಣ್ಣ ಸಮಾಧಾನವಾದರೂ, ಅವಳೊಳಗಿನ ಅಪರಾಧಿ ಪ್ರಜ್ಞೆ ಕಡಿಮೆಯಾಗಲಿಲ್ಲ. 'ಗೊತ್ತಿದ್ದೋ, ಇಲ್ಲ ಗೊತ್ತಿಲ್ಲದೆಯೋ ಶರ್ಮಿಳಾ ಪಾಪವನ್ನಂತೂ ಮಾಡಿದ್ದಾಳಲ್ಲವೆ?...ಹಾಗಿದ್ದರೆ, ಗೊತ್ತಿಲ್ಲದೆಯೇ ಮಾಡಿದ್ದು ಪಾಪವಾಗಬಲ್ಲುದೆ? ಸದ್ಯದ ಮಾತು ಏನೇ ಇರಲಿ, ಮುಂದೆ ಕೆಲವು ದಿನಗಳ ನಂತರ ಸತ್ಯವೇನೆಂಬುದು ಅವಳಿಗೆ ಗೊತ್ತಾದರೆ ಹೇಗೆ?'– ಇರ್ನೆಯ ತಲೆಯಲ್ಲಿ ಮತ್ತೆ ತಾಕಲಾಟ ಸುರುವಾಯಿತು.

ಇದೆಲ್ಲವನ್ನೂ ತಾಯಿಗೆ ಹೇಳಿದಾಗ ಅವರು– "ಇರ್ನೆ, ನೀನು ಸದ್ಯ ನಿನ್ನ ಗೆಳತಿಯಿಂದ ದೂರ ಇದ್ದುಬಿಡು. ಯಾಕಂದರೆ, ಇಂದಲ್ಲ ನಾಳೆ ಈ ವಿಷಯ ಅವರ ಮನೆಯಲ್ಲಿ ಗೊತ್ತಾಗಿ ಬಿಟ್ಟರೆ, ಅದಕ್ಕೆ ನೀನೇ ಹೊಣೆಗಾರಳಾಗುತ್ತೀ. ಅದಕ್ಕಾಗಿ ನೀನೇ ಅವಳೊಂದಿಗೆ ಒಂದಿಷ್ಟು ಅಂತರವನ್ನು ಕಾಯ್ದುಕೊಂಡು ಬಿಟ್ಟರೆ ಒಳ್ಳೆಯದಲ್ಲವೇ?" –ಎಂದು ಉಪದೇಶ ಮಾಡಿದ್ದರು.

ಆದರೆ ಇರ್ನೆಗೆ ತಾಯಿಯ ಉಪದೇಶ ಹಿಡಿಸಿರಲಿಲ್ಲ. ಆದರೂ ಅವರ ಮಾತಿನಲ್ಲಿಯ ಸತ್ಯಾಂಶ ಮಾತ್ರ ಅವಳಿಗೆ ಅರ್ಥವಾಗಿತ್ತು. ಅದಾದ ನಂತರ ಅವಳು ಶರ್ಮಿಳಾಳನ್ನು ದೂರಪಿಡತೊಡಗಿದಳು. ಅವಳು ತನ್ನ ಹತ್ತಿರ ಬರುವ ಸಂದರ್ಭಗಳಲ್ಲಿ ತಾನು ಮತ್ತೊಬ್ಬರ ಜೊತೆಗೆ ಮಾತಾಡುತ್ತಿರುವಂತೆ ನಟಿಸತೊಡಗಿದಳು. ಮುಖ್ಯವಾಗಿ ಮಧ್ಯಾನ್ಹದ ಊಟದ ಹೊತ್ತಿನಲ್ಲಿ ಅವಳು ಶರ್ಮಿಳಾಳನ್ನು ಸೂಕ್ಷ್ಮವಾಗಿ ಗಮನಿಸತೊಡಗಿದಳು. ಆದರೆ ಅವಳೊಂದಿಗೆ ಮರೆಯಾಗಿ ದೂರ ಇರುವುದು ಇರ್ನೆಗೆ ಸುಲಭದ ಮಾತಾಗಿರಲಿಲ್ಲ. ಏಕೆಂದರೆ, ಅವರು ತುಂಬಾ ಹತ್ತಿರದ ಸ್ನೇಹಿತೆಯರಾಗಿ ಒಬ್ಬರಿಗೊಬ್ಬರು ಹೊಂದಿಕೊಂಡಿದ್ದರು. ಈ ಬಗೆಯ ಗಾಢ ಸ್ನೇಹವೇ ಅವಳನ್ನು ಶರ್ಮಿಳಾಳಿಂದ ದೂರ ಇಡುವಲ್ಲಿ ಅಡ್ಡ ಬಂದಿತ್ತು.

ಮರುದಿನ ಮಧ್ಯಾಹ್ನ ಇರ್ನೆ ತನ್ನ ಟಿಫಿನ್ ಬಾಕ್ಸ್‌ನ್ನು ತೆರೆದು ತಿಂಡಿ ತಿನ್ನುವ ಹೊತ್ತಲ್ಲಿ ಶರ್ಮಿಳಾ ಅವಳ ಹತ್ತಿರ ಬರತೊಡಗಿದಳು. ಅವಳು ಹಾಗೆ ಬರುತ್ತಿರುವುದನ್ನು ಗಮನಿಸಿದ ಇರ್ನೆ ತನ್ನ ಬಾಕ್ಸ್‌ನಲ್ಲಿದ್ದ ಗೋಮಾಂಸದ ತಿಂಡಿಯ ಕೊನೆಯ ತುಂಡನ್ನು ಒಮ್ಮೆಲೇ ಇಡಿಯಾಗಿ ಬಾಯಲ್ಲಿ ತುರುಕಿಕೊಂಡು ಅವಸರವಸರವಾಗಿ ತಿನ್ನತೊಡಗಿದಳು. ಅದನ್ನು ನೋಡಿದಶರ್ಮಿಳಾ– "ಏ..ಆಸೆಬುರುಕ ಗುಡ್ಡೆ...ಹಾಗೇಕೆ ಗಬ ಗಬ ತಿನ್ನುತ್ತಿರುವಿ? ನಿಧಾನವಾಗಿ ತಿನ್ನೇ...ನೋಡಿಲ್ಲಿ; ನನ್ನ ತಾಯಿ ಏನು ಮಾಡಿದ್ದಾರೆ ಗೊತ್ತಾ?... ಕುಂಬಳಕಾಯಿಯ ಕಡಬು!!"– ಎನ್ನುತ್ತಲೇ ಅದರ ಒಂದು ತುಂಡನ್ನು ಮುಷ್ಟಿಯಿಂದ ಇರ್ನೆಯ ಬಾಕ್ಸ್‌ನಲ್ಲಿ ಇಟ್ಟಳು. ಆ ಸಿಹಿಕಡುಬನ್ನು ತಿಂದ ಇರ್ನೆಯ ಕಣ್ಣು ಏಕಾಏಕಿ ತುಂಬಿಬಂದವು. ಅದರ ಕಾರಣವೇನೆಂಬುದನ್ನು ಅವಳಿಗೆ ತಿಳಿಯಲಾಗಲಿಲ್ಲ.

ಮರುದಿನ ಮುಂಜಾನೆ ಶಾಲೆಯಲ್ಲಿ ಶರ್ಮಿಳಾ ಇರ್ನೆಯ ಹತ್ತಿರ ಓಡಿ ಬಂದವಳೇ– "ಇವತ್ತು ನಿನಗೊಂದು ಅಚ್ಚರಿ ಕೊಡುವೆ!! ಮಧ್ಯಾಹ್ನದ ಬಿಡುವಿನಲ್ಲಿ ಭೆಟ್ಟಿಯಾಗೋಣ"– ಎಂದವಳೇ ತಿರುಗಿ ಹೋಗಿಬಿಟ್ಟಳು. ಏನಾದರೂ ಒಳ್ಳೆಯ ಸುದ್ದಿ ಇರಬಹುದೆಂದುಕೊಂಡ ಇರ್ನೆಗೆ ಬಿಡುವಿನ ಸಮಯದ ವರೆಗೆ ಕಾಯಲಾಗದಷ್ಟು ಕುತೂಹಲ!! ಮೊದಲನೆಯ ಪೀರಿಯಡ್ ಮುಗಿದ ಕೂಡಲೇ ಅವಳು ಶರ್ಮಿಳಾಳ ಡೆಸ್ಕ್‌ನ ಹತ್ತಿರ ಹೋಗಿ "ಹೇಳು...ಏನದು ಅಚ್ಚರಿಯ ವಿಷಯ?" ಎಂದು ಕೇಳಿದಳು.



ಶರ್ಮಿಳಾ ಒಮ್ಮೆಲೇ ತನ್ನ ಬ್ಯಾಗನ್ನು ತೆರೆದಳು. ಅದರ ಮೇಲ್ಭಾಗದಲ್ಲಿಯೇ ಪ್ರಾಣಿಗಳು ಗುಂಪುಗೂಡಿ ನಿಂತ ಒಂದು ಚಿತ್ರ ಕಾಣಿಸಿತು. ಅದನ್ನು ನೋಡಬೇಕೆನ್ನುವುದರೊಳಗೇ ಟೀಚರ್ ಒಳಗೆ ಬಂದ ಕಾರಣ ಇರ್ನೆ ಮತ್ತೆ ತಿರುಗಿ ತನ್ನ ಜಾಗೆಯತ್ತ ಹೋಗಿಬಿಟ್ಟಳು. 'ಶರ್ಮಿಳಾ ಕೆಲವು ದಿನಗಳಿಂದ ಯಾವುದೋ ಒಂದು ಪುಸ್ತಕದ ಬಗ್ಗೆ ಮಾತಾಡುತ್ತಲೇ ಇದ್ದಾಳೆ. ಬಹುಶಃ ಅವಳು ತೋರಿಸಿದ ಆ ಚಿತ್ರ, ಹಲವಾರು ಪ್ರಾಣಿಗಳು ಹೊಲದಲ್ಲಿ ಗುಂಪಾಗಿ ಒಂದೇ ಕಡೆ ವಾಸವಿದ್ದ ಕಥೆಯ ಪುಸ್ತಕದ್ದಾಗಿರಬೇಕು. ಒಂದೇ ಕಡೆ ಇದ್ದರೂ ಮಾನವರು ಒಬ್ಬರಿಗೊಬ್ಬರು ಹೊಡೆದಾಡುವ ಹಾಗೂ ವೈರತ್ವದಿಂದ ಒಬ್ಬರು ಇನ್ನೊಬ್ಬರ ಕಾಲನ್ನು ಎಳೆಯುವ ಸ್ಥಿತಿಗೆ ವ್ಯಂಗ್ಯ ಮಾಡುತ್ತಿರುವ ಹಾಗಿರಬೇಕು ಆ ಚಿತ್ರದ ಪುಸ್ತಕ'– ಹೀಗೆಂದು ಊಹಿಸಿದ ಇರ್ನೆಗೆ ಆ ಪುಸ್ತಕವನ್ನು ಓದಬೇಕೆಂಬ ತೀವ್ರ ಹಂಬಲ ಉಂಟಾಯಿತು.

ಊಟದ ಬಿಡುವಿನಲ್ಲಿ ಶರ್ಮಿಳಾ, ಇರ್ನೆಯ ಕೈಯನ್ನು ಗಟ್ಟಿಯಾಗಿ ಹಿಡಿದು ಅವಳನ್ನು ಎಳೆದುಕೊಂಡೇ ಹೊರಗೆ ಬಂದು – "ನೋಡು....ಆಶ್ಚರ್ಯವನ್ನು....."–ಎಂದಳು. "ಇದು ಪ್ರಾಣಿಗಳು ಒಂದೇ ಕಡೆ ವಾಸವಿರುವ ಹೊಲದ ಪುಸ್ತಕ....ಅಲ್ಲವೇ?–ಎಂದಳು ಇರ್ನೆ. "ಊಹೂಂ....ಖಂಡಿತ ಅಲ್ಲ. ಇದು ಬರ್ಗರ್ ಕಣೇ...ನಿಮ್ಮ ಅಮ್ಮ ಮಾಡಿದ್ದರಲ್ಲ; ಅಂಥದ್ದೇ ಬರ್ಗರ್ ಇದು!!"–ಎನ್ನುತ್ತ ಬಾಕ್ಸನ್ನು ಬಿಚ್ಚಿದಳು ಶರ್ಮಿಳಾ. "ನೋಡು ನಮ್ಮ ಮನೆಯ ಹತ್ತಿರವೇ ತಿಂಡಿ–ತಿನಿಸುಗಳ ಒಂದು ಅಂಗಡಿ ಇದೆ. ನಾನು ಕೇಳಿದೆ ಅಂತ ನನ್ನ ತಂದೆ ಮೊನ್ನೆ ಅಲ್ಲಿಗೆ ಹೋಗಿ ನನಗಾಗಿ ಒಂದು ಬರ್ಗರ್‌ನ್ನು ತಂದಿದ್ದರು. ಅದನ್ನು ನೋಡಿದ ನಾನು ಅಪ್ಪ, ನನಗೆ ಬೇಕಾಗಿರುವ ಬರ್ಗರ್ ಇದಲ್ಲ; ಇರ್ನೆ ನನಗೆ ಕೊಟ್ಟಿದ್ದಳಲ್ಲ ಅದು ಇದಕ್ಕಿಂತ ಬೇರೆಯದೇ ಆಗಿತ್ತು–ಎಂದಿದ್ದೆ. ನನ್ನ ಮಾತನ್ನು ಕೇಳಿದ ಅವರು "ಓಹೋ...ಬಹುಶಃ ಅದು ಗೋಮಾಂಸದ ಬರ್ಗರ್ ಅಗಿದ್ದಿರಬೇಕು"–ಎಂದರಷ್ಟೇ ಅಲ್ಲ, ಮತ್ತೆ ಅದೇ ಅಂಗಡಿಗೆ ಹೋಗಿ ಈ ಬರ್ಗರ್‌ಗಳನ್ನು ತಂದರು. ಇವುಗಳಿಗೆ, ನೀನು ಕೊಟ್ಟಿದ್ದೆಯಲ್ಲ ಆ ಬರ್ಗರ್‌ಗಳ ರುಚಿಯೇ ಇದೆ. ಇಲ್ನೋಡು, ನಾನು ಅದರಲ್ಲಿ ಎರಡು ಬರ್ಗರ್‌ಗಳನ್ನು ತಂದಿರುವೆ. ಒಂದು ನಿನಗೆ; ಮತ್ತೊಂದು ನನಗೆ.

ಇರ್ನೆಗೋ ಅತ್ಯಾಶ್ಚರ್ಯ!! ಮುಖದ ಮೇಲೆ ಮುಗುಳ್ನಗೆ ತಂದುಕೊಂಡ ಆಕೆ– "ಅರೆ....!! ಹಾಗಿದ್ದರೆ ನೀವು ಮನೆಯಲ್ಲಿ ಗೋಮಾಂಸದ ಬರ್ಗರ್‌ಗಳನ್ನು ತಿನ್ನುತ್ತೀರಾ?...."– ಎಂದು ಕುತೂಹಲದಿಂದ ಕೇಳಿದಳು. "ಖಂಡಿತವಾಗಿ. ಆದರೆ ನಮ್ಮ ಅಜ್ಜಿ ಮಾತ್ರ ತಿನ್ನುವುದಿಲ್ಲ. ಉಳಿದ ನಾವೆಲ್ಲರೂ ಖುಷಿಯಿಂದ ತಿನ್ನುತ್ತೇವೆ"–ಖಚಿತ ದನಿಯಲ್ಲಿ ಉತ್ತರಿಸಿದಳು ಶರ್ಮಿಳಾ.





# ಪಂಜಾಬ್ ಕವಿ ಅಮೃತಾ ಪ್ರೀತಂ ಅವರ ಎರಡು ಕವನಗಳು :

ಕನ್ನಡಕ್ಕೆ : ಡಾ.ಆರ್.ಲಕ್ಷ್ಮೀನಾರಾಯಣ

## ಓ ನನ್ನ ಗೆಳೆಯ ! ನನ್ನ ಅಪರಿಚಿತ !

ಒಮ್ಮೆ ಇದ್ದಕ್ಕಿದ್ದಂತೆ ನೀನು ಬಂದುಬಿಟ್ಟಾಗ
ಕಾಲ ಬಿಲ್ಕುಲ್ ಹೈರಾಣಾಗಿ ನನ್ನ ಕೋಣೆಗೆ ಬಂದು ನಿಂತುಬಿಟ್ಟಿತು
ಸಂಜೆಯ ಸೂರ್ಯ ಮುಳುಗುವುದರಲ್ಲಿದ್ದ
ಆದರೆ ಮುಳುಗಲಾಗಲಿಲ್ಲ.
ಮುಳುಗುವ ಭಾಗ್ಯವನ್ನು ಅವನು ಮರೆತಂತಿತ್ತು
ಮತ್ತೆ ಸಾಪಿನ  ನಿಯಮ ಒಂದು ಘೋಷಣೆ ಸಾರಿತು
ಕಾಲ ನಿಂತ ಆ ಕ್ಷಣಗಳನ್ನು ನೋಡಿತು
ಕಿಟಕಿಯ ಮಾರ್ಗವಾಗಿ ಆಚೆಗೋಡಿತು
ಕಳೆದ ಮತ್ತು ತಂಗಿದ ಆಕ್ಷಣಗಳ ಘಟನೆ
ನಿನಗೂ ಸೋಜಿಗವೆ ಎನಿಸುವುದು
ನನಗು ಕೂಡ ಭಾರೀ ಸೋಜಿಗವೆ ದಿಟ
ಇನ್ನು ಕಾಲಕ್ಕೂ ಆ ತಪ್ಪು ಮತ್ತೆ ಸಹ್ಯವಾಗಲಿಲ್ಲ

ಈಗಲಾದರೊ ಸೂರ್ಯ ಸಮಯಕ್ಕೆ ಸರಿಯಾಗಿ ಮುಳುಗಿಬಿಡುತ್ತಾನೆ
ಕತ್ತಲೆಯಂತೂ ನನ್ನ ಎದೆಗೆ ಇಳಿದುಬರುತ್ತದೆ.
ಆದರೆ ಕಳೆದ ಮತ್ತು ತಂಗಿದ ಕ್ಷಣಗಳ ಸತ್ಯವೊಂದಿದೆ
ನಾನು ಮತ್ತು ನೀನು ಅದನ್ನು ಒಪ್ಪುತ್ತೇವೋ ಬಿಡುತ್ತೇವೋ
ಆ ಮಾತು ಬೇರೆ
ಆದರೆ ಅಂದು ಕಾಲ ಕಿಟಕಿಯ ಮಾರ್ಗವಾಗಿ ಹೊರಗೋಡಿದಾಗ
ಅದರ ಮೊಳಕಾಲಿಂದ ಹರಿಯಿತಲ್ಲ
ಆ ರಕ್ತ ನನ್ನ ಕಿಟಕಿಯ ಕೆಳಗೆ ಈಗಲೂ ಮಡುಗಟ್ಟಿ ನಿಂತಿದೆ.



## ಒಂದು ಭೇಟಿ

ನಾನು ಮೌನವಾಗಿ, ಶಾಂತಳಾಗಿ ನಿಶ್ಚಲಳಾಗಿ ನಿಂತಿದ್ದೆ
ಪಕ್ಕದ ಉಕ್ಕುವ ಕಡಲಿನಲ್ಲಿ ಮಾತ್ರ ಬಿರುಗಾಳಿ ಎದ್ದಿತ್ತು
ಮತ್ತೆ ಕಡಲಿಗೆ ಅದೇನೆನಿಸಿತೋ ಏನೋ ದೇವರೇ ಬಲ್ಲ
ಬಿರುಗಾಳಿಯನೊಂದು ಪೊಟ್ಟಣದ ಹಾಗೆ ಕಟ್ಟಿ
ನನ್ನ ಕೈಗಳಲಿ ತುರುಕಿ ನಗುತ್ತ  ಸ್ವಲ್ಪ ದೂರಹೋಗಿಬಿಟ್ಟಿತು

ಅಪ್ರತಿಭಳಾಗಿದ್ದರೂ ಅದರ ಮಜಾ ತೆಗೆದುಕೊಂಡೆ
ಇಂಥದೊಂದು ಘಟನೆ ಎಲ್ಲೋ ಶತಮಾನಕ್ಕೊಮ್ಮೆ ಮಾತ್ರ
ಘಟಿಸುತ್ತದೆಂದು ತಿಳಿದಿತ್ತು.......

ಲಕ್ಷ ಲಕ್ಷ ಯೋಚನೆ
ಮಸ್ತಕದಲಿ ಮಿಂಚಿ ಹರಿದಾಡಿದವು

ಇದ ಹೊತ್ತು ನನ್ನ ನಗರದಲಿ
ಎಂತು ಸಾಗುವುದೆಂದು ನಿಂತುಬಿಟ್ಟೆ
ನನ್ನ ನಗರದ ಜೀದಿ ಜೀದಿಯೂ ಕಿಷ್ಕಿಂಥ
ನನ್ನ ನಗರದ ಮನೆಮನೆಯ ಮಾಡೂ ತಗ್ಗೇ
ನನ್ನ ನಗರದ ಒಂದೊಂದು ಗೋಡೆಯೂ ಚಾಡಿಕೋರ
ನೀನೆಲ್ಲಾದರೂ ಒಮ್ಮೆ ಸಿಕ್ಕಿದ್ದರೆ
ಸಮುದ್ರದ ಹಾಗೆ ಇದ ಎದೆಯ ಮೇಲಿಟ್ಟುಕೊಂಡು
ಎರಡು ತೀರಗಳ ಹಾಗೆ ನಾವು ನಗಬಹುದಿತ್ತೇನೋ
ಎಂದು ಅಂದುಕೊಂಡೆ ಹಾಗೂ

ತಗ್ಗಿನ ಮಾಡುಗಳ ಮತ್ತು ಕಿಷ್ಕಿಂಥದಂಥ
ಜೀದಿಗಳ ನಗರದಲ್ಲಿ ನೆಲಸಬಹುದಿತ್ತು ನಾವು

ಆದರೆ ನಿನ್ನ ಹುಡುಕುತ್ತ ಹುಡುಕುತ್ತ
ಇಡೀ ಮಧ್ಯಾಹ್ನ ಕಳೆದು ಹೋಯಿತು
ನನ್ನ ಬೆಂಕಿಯನು ನಾನೇ ನುಂಗಿಬಿಟ್ಟೆ
ನಾನೊಂದು ಒಂಟಿ ತೀರ. ತೀರವನು ನಾನು ಮೀಯಿಸಿದೆ
ಹಗಲು ಇನ್ನೇನು ಮುಗಿಯಿತೆನ್ನುವಾಗ
ಕಡಲ ಬಿರುಗಾಳಿಯನು ಕಡಲಿಗೇ ಮರಳಿಸಿದೆ...

ಈಗ ರಾತ್ರಿಯಾಗುತ್ತಿದ್ದಂತೆ ನೀನು ಸಿಕ್ಕಿದೆ
ನೀನು ಕೂಡಾ ದುಃಖಿ. ಮೌನಿ ಶಾಂತ ನಿಶ್ಚಲ
ನಾನು ಕೂಡಾ ದುಃಖಿ. ಮೌನಿ. ಶಾಂತ ನಿಶ್ಚಲ
ದೂರದ ಸಾಗರದಲ್ಲಿ ಮಾತ್ರ ಬಿರುಗಾಳಿ ಇದೆ...





# ಅತ್ಯಂತ ದಯಾವಂತ ಚೀಟಿ

ಇಂಗ್ಲಿಷ್ ಮೂಲ : ರೂಪ ಮೆನನ್
ಕನ್ನಡಕ್ಕೆ : ಮ.ಸು. ಮನ್ನಾರ್ ಕೃಷ್ಣರಾವ್

**ರೂಪ ಮೆನನ್‌ರವರ 'The Kindest Piece of Paper' ಎಂಬ ಕವನ ಮೇ 31, 2006ರ 'ಭವನ್ಸ್‌ಜರ್ನಲ್' ಸಂಚಿಕೆಯ 83-84ನೆ ಪುಟದಲ್ಲಿ ಪ್ರಕಟವಾಗಿದೆ.**

ಬೀದಿ ಬೀದಿಯಲ್ಲಿ ನಡೆದು
ಪ್ರತಿ ಮನೆಯಕದವ ಬಡಿದು
ಮೆದು ಅಥವ ಕಟು ಉತ್ತರವ ಪಡೆದು
ಮಾರಾಟವಾಗದೆ ಉಳಿದ ಸರಕನು ಹೊತ್ತು
ಹಸಿದ ಹೊಟ್ಟೆಯ ಬಡ ಮಾರಾಟದ ಹುಡುಗ ನಡೆದ
ಕಾಲೆಳೆಯುತ್ತ ತಲುಪಿದ ಮತ್ತೊಂದು ಮನೆಯ.
ಯುವತಿಯೋರ್ವಳು ಕದವ ತೆರೆದಳು
ಅವಳ ಕೇಳಲು ಆ ಸಂಕೋಚದ ಹುಡುಗನಿಗೆ
ಸಾಧ್ಯವಾದುದು ಕುಡಿಯುವ ನೀರಷ್ಟೇ.
ಆದರವಳವನ ಮುಖದಲಿ ಹಸಿವ ಕಂಡಳು
ಕಣ್ಗಳಂಚಿನಲಿ ಇಣುಕುತಿಹ ಕಣ್ಣೀರ ಕಂಡಳು
ಒಳ ನಡೆದು ತಂದಳು

ನೀರಿನ ಜೊತೆಗೆ ಲೋಟದಲಿ ಹಾಲನು.
ಕುಡಿದನದನು ಘಟಘಟನೆ ಹಸಿದ ಹುಡುಗ
ವಂದಿಸಿದನಾದೇವತೆಗೆ ಮನಸಾರ
ಅಲ್ಲಿಂದ ಹೊರಡುವಾ ಮುನ್ನ.

ಉರುಳಿತು ಕಾಲ, ಸರಿದವು ವರ್ಷಗಳು
ನಿಶ್ಶಬ್ದ ಪಿಸುನುಡಿಗಳಂತೆ.
ಆ ದಯಾವಂತ ಮಹಿಳೆ ಈಗ
ಒಬ್ಬ ವೃದ್ಧೆ ಮತ್ತು ರೋಗಿ
ಯಾವ ವೈದ್ಯನಿಂದಲೂ ಗುಣವಾಗಲಿಲ್ಲ
ಅವಳ ವ್ಯಾಧಿ.
ಕೊನೆಗೊಬ್ಬ ವೈದ್ಯ ಬಂದ ಮುಂದೆ
ನಿಂತವಳ ಬೆನ್ನ ಹಿಂದೆ
ಚಿಕಿತ್ಸೆ ನೀಡಿ ಉಪಚರಿಸಿದನವಳ
ಹಗಲು ಇರುಳು.
ಪಡೆದಳವಳು ಹೊಸ ಜೀವ ಹೊಸ ಭಾವ
ಮರಳಿತವಳಿಗೆ ಹೋದ ಪ್ರಾಣ ಮತ್ತು ತ್ರಾಣ.
ಬಯಸಿತವಳ ಕೃತಜ್ಞತಾ ನಯನ
ಆ ದಯಾವಂತ ವೈದ್ಯನ ನೋಡಲು.
ಆದರದಕುತ್ತರವಾಗಿ ಬಂದಿತವಳ ಹಸ್ತಕೆ
ವೈದ್ಯನ ಶುಲ್ಕದ ಮಡಿಚಿದ ಚೀಟಿ.
ಅಂಜುತಂಜುತ ಬಿಡಿಸಿ ಓದಿದವಳದನು ವೃದ್ಧೆ
ಒಡನೆ ಹರಿಯಿತವಳ ಕಣ್ಗಳಿಂದ ಆನಂದಭಾಷ್ಪ.
ದಯಾವಂತ ಮಹಿಳೆಯ ಕೈಲಿತ್ತು ದಯಾವಂತ ಚೀಟಿ
ಅದರಲ್ಲಿದ್ದ ಬರಹಇಂತಿತ್ತು:
'ಸಂದಿದೆ ಹಣ ಪೂರ್ತಿಒಂದು ಲೋಟ ಹಾಲಿನ ಮೂಲಕ.'





# ಶಿವನಹಳ್ಳಿಯ ಅಜ್ಜಿ

**ಡಾ॥ ತಸ್ನೀಮ್ ತಾಜ್**

**ಸು**ಮಾರು ರಾತ್ರಿ 7.30 ಗಂಟೆಯ ಸಮಯ. ಕ್ಲಿನಿಕ್‌ನಲ್ಲಿ ಕುಳಿತು ಡಾಕ್ಟರ್ ಇನ್ನು ಯಾಕೋ ಬಂದಿಲ್ಲ, ರಿಸೆಪ್ಷನಿಸ್ಟ್‌ಗೆ ಕೇಳಿದೆ, ಯಾವಾಗ ಬರುತ್ತಾರಮ್ಮ? ಸರ್ಜರಿ ಇತ್ತಂತ್ತೆ ಹೊರಟಿದ್ದಾರೆ, ಈಗಾಗಲೇ ಬರುತ್ತಾರೆ ಎಂದಳು. ಅತ್ತಿಂದಿತ್ತ ಇತ್ತಿಂದತ್ತಾ ಸರಿದಾಡುತ್ತಿರುವ ಅದೆಷ್ಟೋ ರೋಗಿಗಳು ಆತಂಕದ ನಿರೀಕ್ಷೆಯ ಹೆಜ್ಜೆ ಸದ್ದುಗಳು, ಕಾತುರದ ನೋಟಗಳು. ಟಿ.ವಿ.ಯಲ್ಲಿ UPSC toppersಗಳ ಬ್ರೇಕಿಂಗ್ ನ್ಯೂಸ್, stone blast ಮಾಡುತ್ತಿರುವ ಟಿಪ್-ಟಪ್ ಸದ್ದುಗಳು. ಕೆಲವರು ಬಲಗೈಯಲ್ಲಿ ಫೈಲು, ಎಡಗೈಯಲ್ಲಿ ಹೊಟ್ಟೆಯನ್ನು ಹಿಡಿದು ನೋವಿನಿಂದ ನರಳುತ್ತಿರುವುದು, ಹಿಂಡಿಹಿಪ್ಪೆ ಮಾಡುವ ಸನ್ನಿವೇಶ ಎನಿಸಿ ಬಿಡುತ್ತಿತ್ತು. ಪಕ್ಕದಲ್ಲಿ ಕುಳಿತ ಅಜ್ಜಿಯ ಜೊತೆ ಹರಟೆ ಹೊಡೆಯುತ್ತಾ ಕುಳಿತೆ. ಮಾತು ಕೇಳಬೇಕಾ! ಅದರಲ್ಲೂ ವಯಸ್ಸಾದ ಮೇಲೆ, ಯಾರು ಮಾತನಾಡುವುದಕ್ಕೆ ಸಿಕ್ಕದೇ ಹೋದಾಗ ಸಿಕ್ಕಿದ ಅವಕಾಶ ಬಿಡುತ್ತದೆಯೋ ಅಜ್ಜಿ, ಶುರು ಮಾಡಿಕೋತು.

ಏನು ಪ್ರಾಬ್ಲಮ್ ಅಜ್ಜಿ ಎಂದೆ. ಏನು ನೋವೊ ತಾಯಿ ಪ್ರಾಣ ಹಿಂಡದಂಗಾಗ್ತದೆ, ಎಲ್ಲಾ ಜೋಪಾನವಹಿಸುತ್ತೇನೆ. ಏನೋ Kidney Stone ಅಂತೆ, ಎಂತದೊ ಏನೋ, ಜೊತೆ ಯಾರಿದ್ದಾರೆ ಅಜ್ಜಿ ಎಂದೆ. ಯಾರಿರುತ್ತಾರೆ ಹೇಳು, ಯಾರು ಇಲ್ಲಾ! ತುಂಬಾ ಆಶ್ಚರ್ಯವಾಯಿತು. ಯಾಕೆ ಅಜ್ಜಿ? ಮಕ್ಕಳು ಯಾರು ಇಲ್ಲವೇ? ಇದ್ದಾರೆ ಎಲ್ಲಾ ಇದ್ದಾರೆ, ಆದರೆ ನನ್ನ ಪಾಲಿಗೆ ಯಾರು ಇಲ್ಲ. ಈ ಮಾತು ಕೇಳಿ ನನ್ನ ಸೆಳೆತ ಅಜ್ಜಿಯ ಕಡೆ ಉಕ್ಕಿ ಹರಿಯಲಾರಂಭಿಸಿತು. ಪಕ್ಕದಲ್ಲಿ ನನ್ನ ಫೈಲು ಹಿಡಿದು ಕುಳಿತ ನನ್ನ

ಮನೆಯುವರನ್ನು ನೋಡಿದೆ. ಹೊರಗೆ ನನ್ನ ಪರಿಸ್ಥಿತಿಯ ಬಗ್ಗೆ ಆತಂಕದಿಂದ ಚಡಪಡಿಸುತ್ತಿದ್ದ ನನ್ನ ಮಗನನ್ನು ನೋಡಿ ಮನಸ್ಸಿನ ಆಳದಲ್ಲಿ ಒಂದು ರೀತಿಯ ಸಂತೋಷವು ಆಯಿತು. ನಾನು ಎಷ್ಟು ಲಕ್ಕಿ ಎನಿಸಿತು. ಈ ಲಕ್ಕಿತನ ಶಾಶ್ವತನಾ? ದಿಢೀರ್ ಅಂತ ಮನದ ಆಳದಲ್ಲಿ ಹಲವಾರು ಪ್ರಶ್ನೆಗಳು ಹುಟ್ಟಿ ಉತ್ತರ ಕಾಣದೆ ಮಾಯವಾಯಿತು. ಈ ಮುಪ್ಪಿನ ವಯಸ್ಸಿನಲ್ಲಿ ರಾತ್ರಿಯ 8 ಗಂಟೆಯ ಸಮಯ ಒಂಟಿ ಅಜ್ಜಿ, ಅದರಲ್ಲೂ ಕಿವಿಗೆ ಫಳ ಫಳ ಹೊಳೆಯುವ ಓಲೆ. ಕತ್ತಿಗೆ ಸರ. ಅಯ್ಯೋ ಹೇಗೆ ಬಂದೆ ಅಜ್ಜಿ ಎಂದಾಗ, ಆಟೋ ಹಿಡಿದುಕೊಂಡು ಬಂದೆ. ತುಂಬಾ ಏನು ದೂರಾ ಇಲ್ಲಾ ಎಂದಿತು. ಎಷ್ಟು ಮಕ್ಕಳು ಎಂದೆ. ಮೂರು ಜನ. ಎರಡು ಗಂಡು ಒಂದು ಹೆಣ್ಣು. ದೊಡ್ಡವನು ಎಂದಿಗೂ ತಿರುಗಿಯೂ ಸಹ ನೋಡಲ್ಲ. ಚಿಕ್ಕವನ ಜೊತೆ ಇದ್ದೀನಿ. ಮಗಳು ಎಂದೆ? ಅಯ್ಯೋ ಯಾವ ಮಗಳು. ಯಾವ ಮಗ ಬಿಡು ತಾಯಿ. ಕಟ್ಟಿಕೊಂಡ ಗಂಡಾನೇ ಹೆಂಡತಿಯೆಂದು ಏನು ಇಟ್ಟು ಹೋಗಿಲ್ಲ. ಯಾರು ನೋಡಿಕೋತಾರೆ ಹೇಳು. ಮಗಳು ಸಹ ಜೊತೆಗೆ ಬರುವುದಿಲ್ಲಾವಾ ಎಂದೆ. ಅವಳಿಗೆ ಮದುವೆ ವಯಸ್ಸಿಗೆ ಬಂದ ಮಗ ಇದ್ದಾನೆ. ಅವನು ಕೆಲಸಕ್ಕೆ ಹೋಗುತ್ತಾನೆ. ಅವನಿಗೆ ಡಬ್ಬಿ ಕಟ್ಟಬೇಕು. ನನಗೆ ಟೈಮ್ ಇಲ್ಲಾ ಅಂತಾಳೆ. ಅಯ್ಯೋ ದೇವರೇ ಮಗಳನ್ನು ಹೆತ್ತವರಿಗೂ ಇದೇ ಗತೀನಾ? ಎಂದು ನಾನು ಚಿಂತಿಸಿದೆ. ಮಾತು ಶುರು ಮಾಡಿಕೊಂಡ ಅಜ್ಜಿ ಸುಮ್ಮನಿರುತ್ತಾಳೆಯೇ. ನನ್ನ ಮಗಳ ಗಂಡನಿಗೆ ದುಬಾಯಿಯಲ್ಲಿ ಕೆಲಸ. ಏನೋ ಸ್ವಲ್ಪ ದಿವಸದ ನಂತರ ಇವಳನ್ನು ಕರೆದೊಯ್ಯುತ್ತಾನಂತೆ. ಅಯ್ಯೋ ಸಹಿತ್ ನೋವು. ಅಬ್ಬಾ! ಎಂದಳು. ನೋವಿನ ತೀವ್ರತೆ ಅರಿತಿದ್ದ ನಾನು –ಅಜ್ಜಿ ಬಾಳೆ ದಿಂಡಿನ ಜ್ಯೂಸ್ ಮಾಡಿ ಕುಡಿಬೇಕಾಗಿತ್ತು ಎಂದೆ. ಆ! ಜ್ಯೂಸ್ ಎಂದಳು. ನಾನು ಒಂದು ಬಾರಿ ಪಲ್ಯ ಮಾಡಿ ತಿಂದೆ, ಬಾಯಲ್ಲಾ. ನಾಲಗೇ ಎಲ್ಲಾ ಅದರ ನಾರು ಸುತ್ತಿ ಹಾಕಿಕೊಂಡಿತು. ಉಗಿದು ಉಗಿದು ಸಾಕಾಯಿತು ಎಂದಳು. ಇಲ್ಲಾ ಕೇಳಿ ಅಜ್ಜಿ ಬಾಳೆದಿಂಡಿನ ಮಧ್ಯಭಾಗದ ಸ್ವಲ್ಪ ಭಾಗವನ್ನು ಮಿಕ್ಸಿಗೆ ಹಾಕಿ ಸ್ವಲ್ಪ ನೀರನ್ನು ಬೆರೆಸಿ ಜ್ಯೂಸ್ ತರಹ ಮಾಡಿ, ಒಂದು ವಾರ ಖಾಲಿ ಹೊಟ್ಟೆಯಲ್ಲಿ ಕುಡಿ ಎಂದೆ. ಹೌದಾ! ಇದು ಗೊತ್ತೇ ಇರಲಿಲ್ಲ ನೋಡು. ಆದರೇ ಅದು ತುಂಬಾ ಉಷ್ಣ ಜಾಸ್ತಿ, ಅದರ ಜೊತೆ ಬಾರ್ಲಿ ಅಕ್ಕಿ ಗಂಜಿ ತರಹ ಮಾಡಿ ಕುಡಿ ಎಂದೆ. ಡೈಲಿ ಬೆಳಗ್ಗೆ ಒಂದು ಲೋಟ ಮತ್ತು ರಾತ್ರಿ ಒಂದು ಲೋಟ. ಮಜ್ಜಿಗೆ ಕುಡಿಯುತ್ತೇನೆ. ಜೋಪಾನ ಮಾಡಿಕೊತೇನೆ ಇಲ್ಲವಾದರೇ ಯಾರು ನೋಡಿಕೋತಾರೆ ಹೇಳು. ಹುಷಾರಿಲ್ಲ ಎಂದಾಗಲೂ ನನಗಾಗಲಿಲ್ಲ ನನ್ನ ಗಂಡ. ಮಕ್ಕಳಾಗುತ್ತಾರಾ? ಜೋಪಾನಾ ಮಾಡಿಕೋಬೇಕು ಎಂದಳು. ಸರಿಯಾಗಿ ಕೇಳಿಸಿಕೋ ಉಪ್ಪು ಆದಷ್ಟು ಕಡಿಮೆ, ಪಾಲಕ್ಕು, ಸೌತೆಕಾಯಿ, ಬದನೆಕಾಯಿ, ಟೊಮ್ಯಾಟೋ, ಸಪೋಟ, ದ್ರಾಕ್ಷಿ, ಮಟನ್, ಎಲ್ಲಾ ಕಡಿಮೆ ಮಾಡಿಕೋ. ವಾರಕ್ಕೆ ಕನಿಷ್ಟ ಮೂರು ಬಾರಿಯಾದರೂ ವಾಕಿಂಗ್ ಮಾಡು ಅಜ್ಜಿ ಎಂದೆ. ಅಯ್ಯೋ ನೋಡೋಣ ಬಿಡು ತಾಯಿ, ನೋವು ಜಾಸ್ತಿ, ಆಗ–ಆಗ ಬರ್ತಾನೆ ಇರುತ್ತೆ. ತುಂಬಾ ಸುಸ್ತು ಹೊಡೆಸುತ್ತೆ ಎಂದಳು.

ನೀನು ಯಾರ ಜೊತೆ ಬಂದಿದ್ದೀಯಾ ಎಂದಳು ಅಜ್ಜಿ. ನನ್ನ ಮನೆಯುವರ ಜೊತೆ. ಪಾಪಾ ಅವರಿಗೂ ನೋವಾ ಎಂದಳು. ಛೇ ಛೇ ಸದ್ಯ ಅವರಿಗೆ ಇಲ್ಲಾ ನನಗೆ. ನೀನೇ

ಇಷ್ಟೆಲ್ಲಾ ಹೇಳುತ್ತೀಯಾ, ಆದರೆ ನೀನೇ ಜೋಪಾನ ಮಾಡಿಕೊಳ್ಳಲಿಲ್ಲವಾ ಎಂದಳು. ನಿಜ, ಅದೇನೋ ಹೇಳುತ್ತಾರಲ್ಲ, "ವೇದ ಹೇಳೋಕ್ಕೆ ಬದನೆಕಾಯಿ ತಿನ್ನೋಕ್ಕೆ" ಅನ್ನುವ ಹಾಗೆ, ಈ ಸಾರಿ ನೋವು ಎಲ್ಲಾ ಕಲಿಸಿ ಬಿಟ್ಟಿದೆ ಅಜ್ಜಿ, ಎಲ್ಲಾ ಜೋಪಾನ ಮಾಡಿಕೊಳ್ಳುತ್ತೀನಿ. ಇನ್ನು ಮುಂದೆ ಸೊಸೆ ಅಥವಾ ಮೊಮ್ಮಕ್ಕಳ ಜೊತೆ ಬಾ. ಒಂಟಿ ಬರಬೇಡ ಎಂದೆ. ಅಬ್ಬಾ, ಅಬ್ಬಾ ಸದ್ಯ ಹಿಂದೆ ಒಂದು ಬಾರಿ ನನ್ನ ಮೊಮ್ಮಗನ ಜೊತೆ ಬಂದೆ – ಸದ್ಯ ಬೇಡ ತಾಯಿ, ತಲೆ ಚಿಟ್ಟು ಹಿಡಿಸಿಬಿಟ್ಟ. "ಎಷ್ಟು ಹೊತ್ತು ನಡಿ, ನನಗೆ ಬೇಜಾರು ಕಾಯೋಕ್ಕೆ ಆಗಲ್ಲ. ಡಾಕ್ಟರ್ ಯಾವಾಗ ಬರುತ್ತಾರೆ, ನಾಳೆ ಬಾ, ಈಗ ಮನೆಗೆ ಹೋಗೋಣ" ಎಂದು ತಲೆ ತಿಂದು ಬಿಟ್ಟ, ಸೊಸೆ ಎಂದೆ? ಅವಳಾ... ಮಕ್ಕಳಿಗೆ Home work ಮಾಡಿಸಬೇಕು ಗಂಡ ಬಂದರೆ ಊಟಕ್ಕೆ ತಟ್ಟೆ ಹಾಕಬೇಕು ಎನ್ನುತ್ತಾಳೆ.

ಮಗ ಬೆಳಿಗ್ಗೆ 8.30ಕ್ಕೆ ಹೋಗಿ, ರಾತ್ರಿ 8.30ಕ್ಕೆ ಬರುವುದು. ನನ್ನ ಗಂಡ ಏನು ಜಾಸ್ತಿ ಓದಿಸ್‌ಬಿಟ್ಟಿದ್ದಾನೆ. ಹೊಟ್ಟೆ ಪಾಡಿಗೆ ಬೆಳಿಗ್ಗೆ ಹೋಗಿ ರಾತ್ರಿ ಬರುತ್ತಾನೆ. ಅವನಿಗೆ ಏನು ಹೇಳುವುದು. ಏನಾದರೂ ಜಾಸ್ತಿ ಮಾತಾಡಿದರೆ, "ಅಮ್ಮ ನನಗೆ ನಿನ್ನ ಜೊತೆ ಬರಲಿಕ್ಕೆ ಆಗುವುದಿಲ್ಲ, ರಜೆ ಕೊಡುವುದಿಲ್ಲ ನೀನು ಯಾವಾಗಲೂ ಬೇಜಾರು ಎಂದು ಹೇಳಬೇಡ. ಕೆಲಸ ಬಿಟ್ಟು ನಿನ್ನ ಹಿಂದೆ ಓಡಾಡಲಿಕ್ಕೆ ಆಗುವುದಿಲ್ಲ. ಸುಮ್ಮನೇ ನನನ್ನು ಪೀಡಿಸಬೇಡ. ಮನೆಗೆ ಬಂದ ತಕ್ಷಣ ಮನೆಯ ರಗಳೆ, "ಒಂದು ಕೆಲಸ ಮಾಡು ನಿನಗೆ ಎಲ್ಲಿ ಸುಖವೋ ಅಲ್ಲಿ ಹೋಗಿ ಇರು" ಎನ್ನುವುದು ಅವನಿಗೆ ಬಾಯಿ ಪಾಠವಾಗಿ ಬಿಟ್ಟಿದೆ. ಈ ರೀತಿ ಹೇಳಿದರೆ ರಸ್ತೇಲಿ ಹೋಗಿ ಇರ್ಲಾ, ನನ್ನ ಗಂಡ ಟೈಲರ್ ಕೆಲಸ ಮಾಡ್ತಾ ಇದ್ದ, ಕೊನೆ ಕೊನೆಗೆ ಹೊಟ್ಟೆ ನೋವು ಎಂದು ಪರದಾಡಿ ಖಾಯಿಲೆ ಆಗಿ, ಇದ್ದಿದ್ದು, ಕೊಡಿಟ್ಟಿದ್ದು ಎಲ್ಲಾ ಹಣ ಖರ್ಚಾಯಿತು. 35 ಸಾವಿರ ಉಳಿದಿತ್ತು. ಅವನು ಹೋದ ನಂತರ ನನ್ನ ಈ ಕೊನೆಯ ಮಗನಿಗೆ ಕೊಟ್ಟೆ, ಅದಕ್ಕಿಂತ ಜಾಸ್ತಿನೇ ಖರ್ಚು ಮಾಡಿದ್ದಾನೆ. ಸದ್ಯ scan ಏನು ಅಂತ ಹೇಳಿ ಬಿಟ್ಟರೆ 3 ಸಾವಿರ ಚಿಲ್ಲರೆ ಹಣ ಎಲ್ಲಿಂದ ತರೋದಂತ ದಿಗಿಲು. ಹೋದ ವರ್ಷ ತಾನೆ ನೇತ್ರಾಲಯದಲ್ಲಿ ಕಣ್ಣಿನ ಆಪ್ರೇಶನ್‌ಗೆ ಸುಮಾರು 40 ಸಾವಿರ ಖರ್ಚು ಮಾಡಿದ್ದಾನೆ. ಇವನೇ ಪರವಾಗಿಲ್ಲ ದೊಡ್ಡವನು ತಿರುಗಿ ನೋಡಿಲ್ಲ.

ಅವನು ತನ್ನ ಮಕ್ಕಳ ಮದುವೆ, ಮುಂಜಿ ಎಂದು ಗೊಣಗುತ್ತಾನೆ. ಎಲ್ಲಾ ಕಾರ್ಯಗಳಿಗೆ ಹೊರಗಿನವರ ತರಹ ನಾನು ಹೋಗಿ ಬಂದಿದ್ದುಂಟು. ಹೋಗಲಿ ಬಿಡು ಬಾಳೆ ದಿಂಡಿನ ಜೂಸ್ ಮಾಡಿ ಕುಡಿ ಆಯ್ತಾ. ಒಳ್ಳೆಯ ಉಪಾಯ ಹೇಳಿದ್ದೀಯಾ ತಾಯಿ, ಪಲ್ಯ ಮಾಡಿ ಯಾರು ತಿನ್ನುತ್ತಾರೆ ಹೇಳು, ಎಂದಳು. ಯಾಕೋ ಡಾಕ್ಟರ್ ಇನ್ನೂ ಬರಲೇ ಇಲ್ಲ. ಬೆಂಗಳೂರಿನಲ್ಲಿ Traffic ಕಡಿಮೆ ಇದೆಯೊ ಎಂದೆ. ಪರವಾಗಿಲ್ಲ, ಏನಾದರೂ ನೋವು ಕಡಿಮೆ ಆಗುವ ಮಾತ್ರೆ ಕೊಟ್ಟರೆ ಸರಿ, ಮನೆ ಮುಂದೇನೆ Medical shop ಇದೆ. ಜೋಪಾನ ಮಾಡಿಕೋತೀನಿ, ಎಂದಳು.

ಅಜ್ಜಿಯ ಆತ್ಮವಿಶ್ವಾಸ ಕಂಡು ಖುಷಿಯಾಯಿತು. ಸರಿ ಎಂದೆ. ನೋವು ತಾಯಿ ಎಂದಳು. ಅಜ್ಜಿ ಸಮಾಧಾನ ಮಾಡಿಕೊ. ಭಯ ಬೀಳಬೇಡ, Lab ಟೆಕ್ನಿಶಿಯನ್‌ಗೆ ಹೇಳಿದೆ. ಅಜ್ಜಿಗೆ ಏನಾದ್ರೂ ನೋವು ಕಡಿಮೆ ಆಗುವ ಇಂಜೆಕ್ಷನ್ ಕೊಡಿ, ಡಾಕ್ಟರ್ ಬರುತ್ತಾರೆ

ಮೇಡಮ್ ಎಂದು ಹೇಳಿದ. ಎಲ್ಲಾ ಸರಿ ಹೋಗುತ್ತೆ ಎಂದೆ. ಏನ್ ಸರಿ ಹೋಗುತ್ತೋ ಏನೋ. scan ಮಾಡ್ಸಿ ಅಂದ್ರೆ 3 ಸಾವಿರ ಆಗ್ತೋದು... ಅಬ್ಬಾ! ಅಜ್ಜಿ ವಿಕ್ಟೋರಿಯಾ ಹಾಸ್ಪಿಟಲ್‌ನಲ್ಲಿ ಎಲ್ಲ free ಆಗಿ ಮಾಡಿಸ್ತಾರಂತೆ ನೋಡು. ಅಯ್ಯೋ ತುಂಬಾ ದೂರಾ, ಏನು ಗೊತ್ತಾಗೋದಿಲ್ಲಾ. ಇಲ್ಲಾದರೂ ಕಡಿಮೆ ಜನ ಸರಿಯಾಗಿ ನೋಡಿಕೋತಾರೆ. ಏನೋ ಕಳೆದ ಬಾರಿ ನೋಡಿದ ಡಾಕ್ಟರ್ ಇಲ್ಲವಂತೆ. ಯಾರೋ ಬೇರೆ ರಾಜು ಅನ್ನೋರು ಅಂತೆ, ಅಂದಳು. ನಾನು ರಿಸೆಪ್ಷನಿಸ್ಟ್ ಹತ್ತಿರ ವಿಚಾರಿಸಿದೆ. ಅವರು ನನ್ನ ನೋಡಿದ ಡಾಕ್ಟರ್ ಆಗಿದ್ದರು. ಅಷ್ಟರಲ್ಲಿ ಡಾಕ್ಟರ್ ಒಳಗೆ ಬಂದರು. ತುಂಬಾ ಖುಷಿಯಾಯಿತು. ಅಜ್ಜಿ ಏನು ಭಯ ಬೇಳಬೇಡ ತುಂಬಾ ಒಳ್ಳೆಯ ಡಾಕ್ಟರ್ ಎಂದೆ. ಗಾಬರಿ ಆಗದೆ ನಿನ್ನ ಎಲ್ಲಾ ನೋವು ಬಗ್ಗೆ ವಿವರವಾಗಿ ಹೇಳು ಎಂದೆ. ಅಷ್ಟರಲ್ಲಿ ಅಜ್ಜಿಗೆ ರಿಸೆಪ್ಷನಿಸ್ಟ್ ಸಂಜ್ಞೆ ಮಾಡಿ ಡಾಕ್ಟರ್ ಹತ್ತಿರ ಹೋಗಲಿಕ್ಕೆ ಹೇಳಿದಳು. ಸುಮಾರು 10–15 ನಿಮಿಷಗಳ ನಂತರ ಹೊರಗೆ ಬಂದಳು. ಏನ್ ಅಜ್ಜಿ ಎಂದೆ? ಮಾತ್ರೆ ಬರೆದು ಕೊಟ್ಟಿದ್ದಾರೆ. ನೋವು ಕಡಿಮೆ ಆಗುತ್ತಂತೆ. ಜೋಪಾನ ಎಂದು ಹೇಳಿದ್ದಾರೆ. scan ಎಲ್ಲೋ Kanvaದಲ್ಲಿ ಅಂತೆ. ಅಲ್ಲಿಯೇ ಮಾಡಿಸ್ಕೋಬೇಕಂತೆ ಎನ್ನುತ್ತಾ, ಏನು ಬಂದರು ಎದುರಿಸಿಯೇ ತೀರುತ್ತೇನೆ. ಎಂದು ಗಟ್ಟಿ ಮನಸ್ಸು ಮಾಡಿ ಬಾರದ ನಗುವನ್ನು ಮುಖದ ಮೇಲೆಳೆದುಕೊಂಡು ಬರುತ್ತೇನೆ ಎಂದು ಅಜ್ಜಿ ತನ್ನ ಕಂಬನಿ ತುಂಬಿದ ಕಣ್ಣುಗಳಿಂದ ಸಂಜ್ಞೆ ಮಾಡಿ ಹೊರಟೇ ಬಿಟ್ಟಳು. ಬದುಕಲೇಬೇಕಾದ ಅನಿವಾರ್ಯತೆಗೆ ಒಳಗಾದ ಈ ಅಜ್ಜಿಯ ಬದುಕು ಎಂತಹಾ ಅಭದ್ರ ಬದುಕು! ನಮ್ಮ ಕಣ್ಣೆದುರು ಕಂಡಿದ್ದನ್ನೇ ಕಾಣದಂತೆ ನಿರ್ಲಕ್ಷಿಸಬೇಕಾದ್ದೇ ನಮ್ಮ ಬದುಕು ಎಂದು ನಾವೇ ಅರ್ಥೈಸಿಕೊಂಡ ರೀತಿಯಲ್ಲಿ ನಾವು ಅರಿತಂತೆ ಬದುಕುವುದು ಎಷ್ಟು ಅಸಹಾಯಕತೆ.

ನನ್ನ ಅಮ್ಮನ ಮನೆ ಹತ್ತಿರ ಇರುವ ಪಕ್ಕದ ಮನೆ ಅಜ್ಜಿಯ ನೆನಪು ಕಣ್ಣ ಮುಂದೆ ಕಟ್ಟು ಹಾಕಿದಂತಿತ್ತು. ರಾತ್ರಿ 9.30ಕ್ಕೆ ಗ್ಲಾಸಿನ ಕಿಟಕಿಯ ಮೂಲಕ ನೋಡುತ್ತಿದ್ದ ಆ ದೃಶ್ಯ, ವಾರ್ತೆ ಮುಗಿದ ನಂತರ News Reader ನಮಸ್ಕರಿಸಿದರೆ, ಆ ಅಜ್ಜಿ ಕೈ ಜೋಡಿಸುತ್ತಾ, ನಗುತ್ತಾ ನಮಸ್ಕರಿಸುವ ಪ್ರತಿಕ್ರಿಯೆ ನನ್ನ ಮನಸ್ಸಿಗೆ ತುಂಬಾ ಸಂಕಟವಾದ ಸಂಗತಿಯಾಗಿತ್ತು. ಕಾಲ ಯಾವುದೇ ಇರಲಿ, ಸಂದರ್ಭಗಳು ಏನೇ ಇರಲಿ, ಆಳದಲ್ಲಿ ಮನುಷ್ಯ ಒಂಟಿಯೇ ಎನ್ನುವ ಸತ್ಯದ ಜೊತೆಗೆ, ಮುಪ್ಪಿನ ಅವಸ್ಥೆಯ ಅಜ್ಜಿಯ ಈ ದುರ್ಗತಿ ಎಷ್ಟು ಶೋಚನೀಯ ಎನಿಸದೇ ಇರಲಿಲ್ಲ.

ಅಜ್ಜಿಯ ಈ ದುರಂತಕ್ಕೆ ಪೂರಕವಾದಂತೆ ನನ್ನ ಸ್ನೇಹಿತೆ ಹೇಳಿದ ಮತ್ತೊಂದು ಘಟನೆ ನೆನಪಿಗೆ ಬಂತು. ಇದು ಒಂದು ಮೂಕ ಅಜ್ಜಿಯ ಅವಸ್ಥೆ. ನನ್ನ ಸ್ನೇಹಿತೆಯ ಸಂಬಂಧಿಕರಲ್ಲಿ ನವ ದಂಪತಿಗಳ ಜೊತೆ ಹುಡುಗನ ತಾಯಿ ವಾಸಿಸುತ್ತಿದ್ದಳು. ಇಬ್ಬರೂ ಕೆಲಸಕ್ಕೆ ಹೋಗುವವರು. ಬೆಳಗ್ಗೆ 8ಕ್ಕೆ ಮನೆ ಬಿಟ್ಟರೆ ರಾತ್ರಿ 7ಕ್ಕೆ ಹಿಂತಿರುಗುವುದಂತೆ. cookಗೆ ಹೇಳಿ ಅತ್ತೆಗೆ ಗಂಜಿ, ಮುದ್ದೆ ಮಾಡಿಕೊಡಿ, ನಮ್ಮ ಅಮ್ಮನಿಗೆ ಮಾತು ಬರುವುದಿಲ್ಲ ಅವರಿಗೆ ಮಧ್ಯಾಹ್ನ 12.30ಕ್ಕೆ ಊಟ ಕೊಟ್ಟು ಹೋಗಿ. ನಂತರ ಒಂದು ಗಂಟೆಯಿಂದ

ಆರು ಗಂಟೆಯವರೆಗೆ ಬೇರೆ ಹುಡುಗನನ್ನು ಏರ್ಪಾಡು ಮಾಡಿದ್ದೇವೆ, 6 ಗಂಟೆಗೆ ಮತ್ತೆ ಬಂದು ನೀವೇ ಅಡಿಗೆ ಮಾಡುವುದು ಎಂದಿದ್ದಾರಂತೆ.

ಅಜ್ಜಿ ದಿನೇದಿನೇ ಬಡವಾಗುತ್ತಿತ್ತು. ಕೊನೆಗೆ ಸಿ.ಸಿ. ಕ್ಯಾಮರಾ ಅಳವಡಿಕೆ ಮಾಡಿ ನೋಡಿದಾಗ ದೇವರೇ! ಆ ಹುಡುಗ ಅಜ್ಜಿಯ ಚೀರಾಟದಿಂದ ತಲೆ ಕೆಡಿಸಿಕೊಳ್ಳದೆ ಅಜ್ಜಿಯ ಮುಂದೆನೆ ದಿನನಿತ್ಯ Blue films ನೋಡುವುದನ್ನು ಕ್ಯಾಮರಾ ಸೆರೆ ಹಿಡಿದಿತ್ತು. ಅಜ್ಜಿ ಕಣ್ಣು ಮುಚ್ಚಿಕೊಂಡು ಅಳುತ್ತಿರುವುದು ನೋಡಿದ ಮಗ ಸೊಸೆ ಸಧ್ಯ, ಆ ಅನಿಷ್ಟ ಹುಡುಗ ಅಜ್ಜಿಗೆ ಏನು ಮಾಡಲಿಲ್ಲ ಎಂದು ಸಮಾಧಾನ ಮಾಡಿಕೊಂಡರು. ಪೊಲೀಸ್ ಕಂಪ್ಲೆಂಟ್ ನೀಡಿ ಅವನನ್ನು ಮನೆಯಿಂದ ಆಚೆ ಹಾಕಿದರು.

ಗಂಡನ ಸುಖವನ್ನು ಕಾಣಲಿಲ್ಲ. ಈ ಅಜ್ಜಿ, ಲೆಕ್ಕ ತಪ್ಪಿ ಬಸರಾದ ಒಂದೇ ಒಂದು ಮಗನನ್ನು ಹಡೆದು ಹಾಗೂ ಹೀಗೂ ಇಂಜಿನಿಯರ್ ಮಾಡಿದ್ದುಂಟು. ಗಂಡ ತನ್ನಿಷ್ಟಕ್ಕೆ ತಾನೇ ಎಂದೂ ಇರುವವನು. ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ. ಹೆಂಡತಿಯ ಪೀಡೆ ತಪ್ಪಿದರೆ ಸಾಕೆಂದು ಇದ್ದ ಇವಳ ಗಂಡ ಆಟಕ್ಕುಂಟು ಲೆಕ್ಕಕ್ಕಿಲ್ಲ. ತಾವರೆ ಎಲೆಯ ಮೇಲಿನ ನೀರಿನಂತೆ ಜೀವನ ಸಾಗಿಸಿ ಎಲ್ಲಾ ಗೋಜಲುಗಳಿಂದ ಬಿಡುಗಡೆಗೆ ಪ್ರಯತ್ನಿಸಿದ ಕೊನೆಯ ಹಂತದ ಅವಸ್ಥೆ ಇದು. ಅತ್ತ ಒಡಹುಟ್ಟಿದವರಾಗಲೀ ಇತ್ತ ಗಂಡನ ಪ್ರೀತಿಯಾಗಲೀ ಎರಡು ಇರದ ಬರಡು ಬಾಳಲ್ಲಿ ತಲೆ ಕೆಡದೆ ಮಗನಿಗೆ ಒಂದು ಸುಸಜ್ಜಿತ ಬಾಳನ್ನು ಕೊಟ್ಟ ಅಜ್ಜಿಯ ಬರಡು ಬಾಳಿನ ಕೊನೆಯ ಹಂತ ಹೀಗಾಗಬೇಕೆ?... ಬದುಕಲೇಬೇಕಾದ ಅನಿವಾರ್ಯಕ್ಕೆ ಒಳಗಾದ ಹಲವಾರು ಜೀವಿಗಳ ಪಾಡು ಇದು.

ಇದೇ ರೀತಿ ಮನೆಯ ಪಕ್ಕದಲ್ಲಿ ಇದ್ದ ಅರ್ಶದ್ ತಾಯಿಯ ಕಥೆ. ಅದು ಕಥೇನಾ?! ಅನಾಥ ಬದುಕು ಇದು. ಛೀ ಬದುಕು, ಅಲ್ಲ ಅಯ್ಯೋ ಬಿಡಿ ಇದು ಸಾವಿನ ಸತ್ಯ. ನಿಮಗೆ ಹೇಳುತ್ತೇನೆ ಕೇಳಿ. ಇತ್ತೀಚಿಗೆ ತೀವ್ರವಾಗಿ ಗಮನಿಸಿದರೆ, ಅರೇ, ತೀವ್ರವಾಗಿ ಯಾಕೆ, ಸಹಜವಾಗಿ ಗಮನಿಸಿದರೆ ತಾಯಿಯ ಸಾವು, ಸ್ವಲ್ಪ ನೋವು ಇಲ್ಲದೇ ಒಪ್ಪಿಕೊಳ್ಳುವುದು ಸಾಮಾನ್ಯ ಸಂಗತಿಯಾಗಿಬಿಟ್ಟಿದೆ. ತಾಯಿಯ ನಿಧನಕ್ಕೆ ಶ್ರದ್ಧಾಂಜಲಿ ಸಲ್ಲಿಸಿದರೆ, "ವಯಸ್ಸಾಗಿತ್ತು, ಏನ್ ಮಾಡುವುದು ಎನ್ನುತ್ತಾರೆ. ಭಗವಂತನ ಈ ಆಟಕ್ಕೆ, ಏಕೈಕ ಕಾರ್ಯಕ್ಕೆ ಬಯ್ಯದೇ ಸಮಾಧಾನವಾಗಿ ಒಪ್ಪಿಕೊಳ್ಳುವುದು ಸಾಮಾನ್ಯ ಸಂಗತಿಯಾಗಿಯೇಬಿಟ್ಟಿದೆ. ಆದರೆ ಅರ್ಶದ್ ತಾಯಿಗೆ ಸಾವಿನ ಸಂತಾಪವು ಸಿಗದೇ ಹೋಯಿತು. ಅವರ ಮೂವರು ಗಂಡು ಮಕ್ಕಳು, ಇಬ್ಬರು ಡಾಕ್ಟರ್‌ಗಳು ವಿದೇಶದಲ್ಲಿ ರಿಯಾಲ್ಸ್ ಮತ್ತು ಡಾಲರ್ಸ್‌ನ ಸಂಪಾದನೆ ಮಾಡುವವರು. ಕೊನೆ ಮಗ ಆರ್ಶದ್ ಓದಲೇ ಇಲ್ಲ. ಅವನು ಬಾಲ್ಯದಲ್ಲಿ ಬೈಕ್ ಹಿಡಿದು ಗಲ್ಲಿ ಗಲ್ಲಿ ಸುತ್ತುವುದೇ ಕೆಲಸವಾಗಿತ್ತು. ಒಂದು ದಿನ ಯಾವುದೋ ರಾಜಕೀಯ ಪಕ್ಷದ ಸದಸ್ಯರನ್ನು ಹಿಡಿದು, ಹೊಡೆದು ಜೈಲಿನ ಕಂಬಿ ಎಣಿಸಲಿಕ್ಕೆ ಹೋಗಿದ್ದ ಸಂದರ್ಭದಲ್ಲಿ ಅರ್ಶದ್ ಅಮ್ಮ, ಅಪ್ಪನನ್ನು ಸಮಾಧಾನ ಮಾಡಿದ ಅಕ್ಕಪಕ್ಕದ ಮನೆಯವರು ಈ ವೃದ್ಧ ದಂಪತಿಯನ್ನು ಎಲ್ಲರು ಸ್ವಲ್ಪವೂ ಭೇದವಿಲ್ಲದೆ ಸಂತೈಸಿದರು. ಅರ್ಶದ್ ಸೆರೆಮನೆಯಿಂದ ಬಂದ ನಂತರ party

ticket ಸಿಕ್ಕಿತು. ಜಿಂದಾಸಾಗಿ ಬಂದ ಇವನಿಗೆ ಮಾತ್ರವಲ್ಲ ಎರಡು-ಮೂರು ಕೊಲೆ ಮಾಡಿದ ಅಥವಾ ಜೈಲಿಗೆ ಹೋಗಿ ಬಂದ ನಂತರ ತಾನೇ party ticket ಕೊಡುವುದು ಎಂದು ಹೇಳಿದ ಮಾತು ಸತ್ಯ ಎನಿಸಿತು.

ಸಲಾಮತ್ ಆಂಟಿ, ಅಕ್ಕಪಕ್ಕದ ಮನೆಯಲ್ಲಿದ್ದ ಎಲ್ಲಾ ಪರಿಚಿತರು ಒಬ್ಬೊಬ್ಬರಾಗಿ ಮನೆ ಖಾಲಿ ಮಾಡಿದ್ದು, ಲೋಕಬಿಟ್ಟೇ ಹೋಗಿದ್ದುಂಟು. ಗಂಡನೂ ತೀರಿಕೊಂಡಾಗ ಅವಳು ತನ್ನ ಮೂವರು ಮಕ್ಕಳಿಂದ ಆಣೆ ಮಾಡಿಸಿದ್ದುಂಟು, ನನ್ನ ಅಂತಿಮ ಕಾರ್ಯ ನೀವೇ ನಿರ್ವಹಿಸಬೇಕು ಎಂದು. ಅವಳ ಈ ಮುಗ್ಧ ಆಸೆ ತೀರಿತೇ! ಇಲ್ಲವೇ? ಖತೀಜ್ ಬೂವಾಳ ಟೆಲಿಫೋನ್‌ನ ಶಾಕ್ ಹೊಡೆದಂಥ ಮಾತು ಕೇಳಿ ಮೂರು ಮಕ್ಕಳು ಅಮ್ಮ ಕೊನೆ ಉಸಿರೆಳೆದಿರುವಳು ಎಂದು ಎಲ್ಲರೂ ಮನೆಗೆ ಬಂದರು. ಆದರೇ ಮೂರು ದಿವಸವಾದರೂ ಸಲಾಮತ್ ಆಂಟಿಯನ್ನು ಸಾವು ಆಲಂಗಿಸಿಕೊಳ್ಳಲೇ ಇಲ್ಲ. ಆಗಾಗ ಕಣ್ಣು ತೆರೆದು ಸಲಾಮತ್ ಆಂಟಿ ನೋಡುತ್ತಿದ್ದುದ್ದರಿಂದ ಸುಮ್ಮನಿದ್ದರು. ಇಲ್ಲದಿದ್ದರೆ ತಾಯಿಯ ಮುಖಕ್ಕೆ ಬಿಳಿಯ ಬಟ್ಟೆ ಎಳೆದೇ ಬಿಡುವರೇನೋ?! ಬಾಲ್ಯದಲ್ಲಿ ಕುತ್ತಿಗೆಗೆ ಜೋತು ಬೀಳುತ್ತಿದ್ದ ಈ ಮಕ್ಕಳ ಬಾಲ್ಯದ ನೆನಪು ಅವರ ನೆನಪಿನ ಬುತ್ತಿಯಿಂದ ಮಾಸಿ ಹೋಗಿತ್ತು.

ಪಕ್ಕದ ಕೋಣೆಗೆ ಹೋಗಿ ಮೊದಲನೇ ಮಗ U.S ರಿಟರ್ನ್, ಅನ್ವರ್ ಹೇಳಿದ್ದು "ನನ್ನ ಹೆಂಡತಿಗೆ ಇಲ್ಲಿನ ಬಿಸಿಲು ಆಗೋದಿಲ್ಲ. ಮಕ್ಕಳು ಸಹ ಬೇಜಾರಾಗಿದ್ದಾರೆ. ನಾನು ಒಂದೇ ವಾರ ರಜೆ ತೆಗೆದುಕೊಂಡು ಬಂದಿರುವುದು. Flight ticket book ಮಾಡಿಸಿ ಬಂದಿದ್ದೇನೆ, ನಾಳೆ ಹೊರಡುತ್ತೇವೆ. ಎರಡನೇಯವನು ಅಲ್ತಾಫ್- ನಾನು ದೆಹಲಿಯಲ್ಲಿ ಸೆಮಿನಾರ್ ಇದೆ, ಇದು-ಅದು Adjust ಮಾಡಿಕೊಂಡು ಬಂದಿದ್ದೇನೆ, ನಾಳೆ ಹೊರಟು ಬಿಡುತ್ತೇನೆ ಎಂದ. ಅಷ್ಟರಲ್ಲಿ ಅರ್ಶದ್ ದೆಹಲಿಯಿಂದ ಫೋನ್ ಮಾಡಿ ಅಮ್ಮ ಹೆಂಗಿದ್ದಾರೆ ನನಗೆ ಬರುವುದಕ್ಕೆ ಆಗುವುದಿಲ್ಲ. ನಾಳೆ ನನ್ನ ಅಧಿಕಾರದ ಕೊನೆ ದಿನ ಎಂದು ಅನ್ವರ್‌ಗೆ ಹೇಳುತ್ತಾ, ಬಾಭಿಗೆ ಫೋನ್ ಕೊಡು ಎಂದ. ಆಕೆ ಹೇಳಿ ಬಯ್ಯಾ ಎಂದಳು. ಅಮ್ಮ ಹೇಗಿದ್ದಾರೇ ನೋಡಿ ಬಾಭಿ, ಒಳ್ಳೆ ಆಸ್ಪತ್ರೆಗೆ ಸೇರಿಸಿ, ಮೀಡಿಯಾ ಕವರೇಜ್ ಇರುತ್ತದೆ. ಅಮ್ಮ ನಾಳೆನೇ ಹೋಗಿ ಬಿಟ್ಟರೆ, CM ಮನೆಗೆ ಬರುತ್ತಾರೆ! ಬಂದೇ ಬರುತ್ತಾರೆ. ಬಾಭಿ ನೋಡಿ, ಎಲ್ಲಾ ಅರೇಂಜ್‌ಮೆಂಟ್ ಚೆನ್ನಾಗಿ ಮಾಡಬೇಕು. CM ಜೊತೆಗೆ ಎಲ್ಲಾ ಗಣ್ಯರು ಬರುತ್ತಾರೆ. ಲಿಕ್ಕರ್ ಬ್ಯಾರನ್ ಮಲ್ಲೇಶಪ್ಪನವರೂ ಬರುತ್ತಾರೆ. ನಾಳೆ ಒಂದೇ ದಿವಸ ಇರುವುದು. ಡಾಕ್ಟರ್ ಏನ್ ಹೇಳುತ್ತಿದ್ದಾರೆ. ನೀವು ಯಾವ ಯೋಚನೆ ಮಾಡಬೇಡಿ, ಎಲ್ಲಾ ನನಗೆ ಬಿಡಿ. ಮಿಡೀಯಾ ಜೋರು ಇರುತ್ತೆ ತಾನೆ ಎಂದಳು ಬಾಭಿ. ಅಮ್ಮನ ಸಾವು ಶೀಘ್ರದಲ್ಲೇ ಆದರೆ, ಇವನಿಗೆ media mileage!. ಆಹಾ ಎಂತಹ ರಾಜಕಾರಣಿ.

ಅರ್ಶದ್ ಬರಲೇ ಇಲ್ಲ. ಅವನ ಬಗ್ಗೆ ಸಲಾಮತ್ ಆಂಟಿ ಮತ್ತು ಅವಳ ದಿವಂಗತ ಯಜಮಾನನಿಗೆ ತುಂಬಾ ಪ್ರೀತಿ ಇತ್ತು. ಎಲ್ಲರೂ ರೂಪಾಯಿ, ಡಾಲರ್ಸ್ ಮತ್ತು ರಿಯಲ್‌ಗಳು ಖತೀಜ ಬೂವಾ ಮತ್ತು ಅವಳ ಕುಂಟ ಮಗನಿಗೆ ಕೊಟ್ಟು ಸಾಯುತ್ತಿರುವ

ತಾಯಿಯನ್ನು ಬಿಟ್ಟು ತೆರಳಿಬಿಟ್ಟರು. ಅಂತೂ "ರಾಜಕಾರಣಿ ಮಗ" ಸಹ ಬಂದಿಲ್ಲ. ಹೇಗೆ ತಾನೇ ಬರುತ್ತಾನೆ ಹೇಳಿ? Party full messನಲ್ಲಿದ್ದಾಗ ಬಂದರೂ ಅಮ್ಮ ಬೇಗ ಸಾಯುವುದಿಲ್ಲ. ಸಾವಿನಲ್ಲಾದರೂ ನೆಮ್ಮದಿಯಿಂದ ಸಾಯಲಿಕ್ಕೆ ಬಿಡದ ಈ ಮಕ್ಕಳಿಗೆ ಈ ಸಲಾಮತ್ ತಾಯಿ ಈ ಮಕ್ಕಳ ಅಳು-ನಗು, ಸಂಭ್ರಮ ನಲಿದಾಟ, ಕೇಕೆ ಎಲ್ಲವನ್ನು ಹಂಚಿಕೊಂಡು ಅಂದು ತೊಳೆಯುತ್ತಾ, ಕಕ್ಕಾ ಬಾಚುತ್ತಾ, ಒಳ ಒಳಗೆ ಕುಸಿಯುತ್ತಿದ್ದ ತನ್ನ ನೀರಸ ಬದುಕಿನ ಕೊನೆಯ ಆಸೆ ಇದ್ದಿದ್ದು, ಕೊನೆ ಉಸಿರು ಎಳೆಯುವಾಗ ತನ್ನ ಮೂವರು ಮಕ್ಕಳು ಸಮೀಪದಲ್ಲಿರಬೇಕೆಂಬುದು ಅಷ್ಟೇ. ಅವಳ ಈ ಮುಗ್ಧ ಆಸೆ ತೀರಲೇ ಇಲ್ಲ. ಈ ಆಸೆ ತಾಯಿಗೆ ಭ್ರಮೆಯಾಗಿಯೇ ಉಳಿದುಬಿಟ್ಟಿತು. ಎಲ್ಲರೂ plane ಹತ್ತಿದ ಎರಡು ಗಂಟೆ ನಂತರ ಸಲಾಮತ್ ಆಂಟಿ ಪರದಾಡಿದ್ದುಂಟು.

ನಡುರಾತ್ರಿಯಲ್ಲಿ ಡಾಕ್ಟರ್ ಸಾವನ್ನು ಘೋಷಿಸಿದಾಗ ಒಂದು ನರಪಿಳ್ಳೆಯೂ ಇಲ್ಲದ ಕೋಣೆಯಲ್ಲಿ ಸಲಾಮತ್ ಆಂಟಿ ಕೊನೆ ಉಸಿರೆಳೆದಳು. ಖತೀಜ್ ಬೂವಾ ಸಲಾಮತ್ ಆಂಟಿಯ ಹಿಮದ ಗಡ್ಡೆಯಂತಾದ ದೇಹವನ್ನು ಮುಟ್ಟಿ van ಮತ್ತು ನಾಲ್ಕು ಹುಡುಗರನ್ನು ಕಳುಹಿಸಿ ಎಂದು phone ಹಚ್ಚಿದಳು. ಅಂತಹ ಕಠೋರ ಸ್ಥಿತಿಯ ಗಂಭೀರತೆ ಕೂಡಾ ಅರ್ಥವಾಗದಷ್ಟು ಬದುಕು ನಮ್ಮನ್ನು ಕಸಿದುಕೊಂಡಿತೆ...?







ಉರ್ದು ಮೂಲ ಕವಿ

# ಗುಲ್ಜಾರ್ ಅವರ ಎರಡು ಕವನಗಳು

ಕನ್ನಡಕ್ಕೆ : ಗಿರೀಶ.ಜಿ.ಜಕಾಪುರೆ

## ಕನಸು

ಬೆಳ್ಳಂಬೆಳಿಗ್ಗೆ ಬಾಗಿಲು ತಟ್ಟಿತು ಒಂದು ಕನಸು
ಬಡಿತ ಕೇಳಿ ಎದ್ದು ಬಾಗಿಲು ತೆರೆದೆ... ನೋಡಿದೆ
ಕೆಲವು ಅತಿಥಿಗಳು ಬಂದಿದ್ದಾರೆ ಗಡಿಯಾಚೆಯಿಂದ
ಅವರ ಕಣ್ಣುಗಳೆಲ್ಲ ನಿದ್ದೆಗೆಟ್ಟಿವೆ...!
ಮುದುರಿವೆ ಮುಖಗಳೆಲ್ಲವೂ...!
ಕಾಲು–ಕೈತೊಳೆಸಿದೆ
ಅಂಗಳದಲ್ಲಿ ಆಸನ ಹಾಕಿಸಿದೆ
ಮತ್ತೆ... ತಂದೂರಿಯಲ್ಲಿ ಮೆಕ್ಕೆಜೋಳದ
ದಪ್ಪನೆಯ ರೊಟ್ಟಿ ಮಾಡಿಸಿದೆ
ನನ್ನ ಅತಿಥಿಗಳು ಗಂಟಿನಲ್ಲಿ ಹಿಂದಿನ
ಬೆಳೆಯ ಹಳೆಬೆಲ್ಲ ತಂದಿದ್ದರು
ಎಚ್ಚರವಾಯ್ತು...

ಕಣ್ಣು ತೆರೆದೆ... ನೋಡಿದೆ...
ಮನೆಯಲ್ಲಿ ಯಾರೂ ಇಲ್ಲ...
ಮುಟ್ಟಿ ನೋಡಿದೆ... ತಂದೂರಿಯ ಒಲೆ ಇನ್ನೂ ಆರಿಲ್ಲ...!
ಇನ್ನೂ ಮೆತ್ತುತ್ತಿದೆ...
ತುಟಿಯ ಮೇಲಿದ್ದ ಸಿಹಿಬೆಲ್ಲದ ಸವಿ

ಕನಸಿತ್ತೇನೋ?
ಹೌದು... ಕನಸೇ ಇರಬಹುದು...!
ನಿನ್ನೆಯ ರಾತ್ರಿ ಕೇಳಿದ್ದೆ :
ಗರಡಿಯಲ್ಲಿ ಮತ್ತೆ ಗುಂಡಿನ ದಾಳಿಯಾಗಿದೆಯಂತೆ...
ನಿನ್ನೆಯ ರಾತ್ರಿ ಕೇಳಿದ್ದೆ :
ಗಡಿಯಲ್ಲಿ ಕೆಲವು ಕನಸುಗಳ ಕೊಲೆಯಾಗಿದೆಯಂತೆ...

## ಮಾಯದ ಜಿಂಕೆ

ಹಗಲುರುಳಿ ಇರುಳಿಳಿದಿದೆ
ಈ ಜಿಂಕೆ ನನಗೆ ಮೋಸ ಮಾಡುತ್ತ
ಕಾಡನ್ನಿಡೀ ಸುತ್ತುತ್ತಿದೆ ನನಗೆ ಕಾಡುತ್ತ

ಹಾಯ್ದಿವೆ ನನ್ನ ಹಲವಾರು ಬಿಲ್ಲುಗಳು
ಅದರ ಕುತ್ತಿಗೆಯ ಬಲು ಹತ್ತಿರದಿಂದ

ಅದೂ ಈಗಷ್ಟೇ ಚತುರವಾಗಿದೆ
ಎಷ್ಟು ನಾನು ಚಾಣಾಕ್ಷನಾಗಿರುವೆನೋ

ಕಳೆದು ಹೋಗುತ್ತದೆ ಮರಗಳಲಿ
ಒಂದೊಮ್ಮೆ ಒಂದಿಷ್ಟು ಕಾಣಿಸಿ
ನಾನು ಅಲ್ಲಿ ತಲುಪುವಷ್ಟರಲ್ಲಿ
ಬೆಟ್ಟದ ಮೇಲೆ ಕಾಣುತ್ತದೆ
ನನ್ನ ಕನ್ನಡಕದಾಚೆ ದೂರದಲಿ

## ಅನಿಕೇತನ ೩೮

ಒಂದು ಕಣ್ಣಿಟ್ಟಿರುತ್ತದೆ ಅದು ಸದಾ ನನ್ನ ಮೇಲೆ
ನಾನೂ ಕಣ್ಣಿಂದ ಮರೆಯಾಗಲು ಬಿಡುವುದಿಲ್ಲ ಅದನ್ನು

ಯಾರು ಯಾರನ್ನು ಅಟ್ಟಾಡಿಸುತ್ತಿದ್ದಾರೋ?
ಈಗ ಯಾರು ಯಾರ ಬೇಟೆಗಾರರೆಂಬುದು
ತಿಳಿಯದಾಗಿದೆ...?

ದಿನ ಕರಗಿ ರಾತ್ರಿಯತ್ತ ಹೊರಟಿದೆ...
ಆದರೆ ಈ ಮಾಯದ ಜಿಂಕೆ
ನನ್ನೊಡನೆ ಕಪಟದಾಟವಾಡುತ್ತ
ಇನ್ನೂ... ಅಡವಿಯೆಲ್ಲ ಅಲೆಯುತ್ತಿದೆ

ಮುಂಜಾನೆ ಕಾಡಿಗಿಳಿದಾಗ ಯೋಚಿಸಿದ್ದೆ
ಈ ಚಂಚಲ ಜಿಂಕೆಯನ್ನು
ಬಾಣದ ತುದಿಗೆ ಧ್ವಜದಂತೆ ಬಿಗಿದು
ಊರೊಳಗೆ ಧಿಮಾಕಿನಿಂದ ಕಾಲಿಡುವೆ ಎಂದು
ಆದರೆ ಈಗ ಹಗಲು ಸೊರಗುತ್ತಿದೆ
ಆದರೆ, ಈ ಬೆಳಕು ಅಳಿಯುತ್ತಿರುವಾಗ
ಎದೆಹೊಕ್ಕಿದೆ ಭಯ 'ಈ ಜಿಂಕೆಯೇ...
ಎದೆಯ ಮೇಲೆ ನನ್ನ ಹೊತ್ತುಕೊಂಡು
ಕಾಡು–ಮೇಡು ಸೇರುತ್ತದೇನೋ...?'





# 'ಡೋಗ್ರಿ' ಪದ್ಯಗಳು

ಡಾ.ಕೆ.ಎಸ್.ವೈಶಾಲಿ

## ನನ್ನ ಹುಡುಗಿ, ಹೀಗೇನಾದರೂ ಆಗಿದ್ದರೆ!



ನನ್ನ ಹುಡುಗಿ, ನಾನೇನಾದರೂ ಉಳುವ
ರೈತನಾಗಿದ್ದರೆ
ಉಳುವವರಲ್ಲಿ ಮೊದಲಿಗನಾಗಲು ನಾನು
ಸಂಕೋಚ ಪಡುತ್ತಿರಲಿಲ್ಲ,
ನನ್ನ ನಾಡಿನಲ್ಲಿ ಹಸಿವನ್ನು ನಿರ್ಮೂಲನ
ಮಾಡಲು
ನಾನು ರಾಶಿ-ರಾಶಿಗಳಷ್ಟು ದವಸ ಧಾನ್ಯಗಳನ್ನು
ಬೆಳೆಯುತ್ತಿದ್ದೆ,
ನೀನು ಮಧುರವಾಗಿ ಗೆಜ್ಜೆ ಸಪ್ಪಳ ಮಾಡುತ್ತ
ನನಗೆ ಉಣ್ಣಲು ಕುಡಿಯಲು ಬುತ್ತಿ ಹೊತ್ತು
ತರುತ್ತಿದ್ದೆ
ನೀನು ಹಿರಿಯರೆದುರು ನಾಚಿಕೆಯಿಂದ
ಬಿಗುವಾಗಿರುತ್ತಿದ್ದೆ,
ಆದರೆ ಕಿರಿಯರೊಡನೆ ಉಲ್ಲಾಸದಿಂದ
ಸಂತೋಷದಿಂದಿರುತ್ತಿದ್ದೆ,

ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ, ಒಂದು ಹೊಲದಿಂದ ಮತ್ತೊಂದು
ಹೊಲಕ್ಕೆ,
ಪ್ರತಿಯೊಂದು ಮನೆ, ಪ್ರತಿಯೊಂದು ಉಗ್ರಾಣದಲ್ಲಿಯೂ
ಎಲ್ಲರ ಕಣ್ಣುಗಳೂ ನಮ್ಮ ಮೇಲಿರುತ್ತಿದ್ದವು.
ನನ್ನ ಹುಡುಗಿ, ನಾನೇನಾದರೂ ಉಳುವ ರೈತನಾಗಿದ್ದರೆ!

ನನ್ನ ಹುಡುಗಿ, ನಾನೇನಾದರೂ ಸೈನಿಕನಾಗಿದ್ದರೆ,
ದೇಶದ ರಕ್ಷಣೆಗಾಗಿ ನಾನು ಹೋರಾಡಲು ಸಿದ್ಧನಾಗಿರುತ್ತಿದ್ದೆ
ಶತ್ರುವಿನ ಧೂರ್ತ ಯೋಜನೆಗಳನ್ನು ಹಿಮ್ಮೆಟ್ಟಿಸಿ
ನನ್ನದೇಶಕ್ಕಾಗಿ ಬಾಳುತ್ತಿದ್ದೆ, ದೇಶಕ್ಕಾಗಿ ಮಡಿಯುತ್ತಿದ್ದೆ
ದಿನವೂ ನಿನಗೊಂದು ಪತ್ರವನ್ನು ಬರೆಯುತ್ತಿದ್ದೆ
ನಿನ್ನ ಪತ್ರವನ್ನು ಬುಡದಿಂದ ತುದಿಯವರೆಗೂ ಓದುತ್ತಿದ್ದೆ
ನಾವು ಕಳೆದ ಆತ್ಮೀಯ ಕ್ಷಣಗಳನ್ನು ಮತ್ತೆ ಮತ್ತೆ ಮೆಲುಕು ಹಾಕುತ್ತಿದ್ದೆ
ನೀನು ನನ್ನ ಒಳಿತಿಗಾಗಿ ಯಾವಾಗಲೂ ಪ್ರಾರ್ಥಿಸುತ್ತಿದ್ದೆ
ಪ್ರಣಯೋಲ್ಲಾಸದ ದೃಷ್ಟಿಯನ್ನು ನನ್ನೆಡೆಗೆ ಬೀರುತ್ತ
ನೀನು ನನಗಾಗಿ ಹಂಬಲಿಸುತ್ತಿದ್ದೆ
ನನ್ನ ಹುಡುಗಿ, ನಾನೇನಾದರೂ ಸೈನಿಕನಾಗಿದ್ದರೆ!

ನನ್ನ ಹುಡುಗಿ, ನಾನೇನಾದರೂ ತೋಟಗಾರನಾಗಿದ್ದರೆ
ನಾನು ಬಗೆ ಬಗೆಯ ಹೂವುಗಳನ್ನು ಬೆಳೆಸಲು ಪ್ರಯತ್ನಿಸುತ್ತಿದ್ದೆ.



ನೆಲದಲ್ಲಿ ಬಗೆ ಬಗೆಯ ಬಣ್ಣದೋಕುಳಿ ಚೆಲ್ಲಿ,
ಅವುಗಳಿಗೆ ಸರಿಸಾಟಿಯಾದ ಪರಿಮಳ ಪಸರಿಸುತ್ತಿದ್ದೆ,
ಪ್ರೀತಿಯಿಂದ ಪುಷ್ಪಗಳನ್ನು ನಿನ್ನ ಮುಡಿಗೇರಿಸಿ ನಿನ್ನನ್ನು ಅಲಂಕರಿಸುತ್ತಿದ್ದೆ,
ನಿನ್ನ ಮಡಿಲನ್ನು ಮುಂಜಾನೆಯಲ್ಲಿ ಅರಳುವ ಪುಷ್ಪಗಳಿಂದ ತುಂಬುತ್ತಿದ್ದೆ,
ಗುದ್ದಲಿ ಹಿಡಿದು ಪ್ರತಿಯೊಂದು ಗಿಡವನ್ನೂ ಆರೈಕೆ ಮಾಡುತ್ತಿದ್ದೆ,
ನೀನು ನಿನ್ನ ಸಂತೋಷವನ್ನು ನನಗೆ ನೀಡುತ್ತಿದ್ದೆ,
ಪರಸ್ಪರ ಪ್ರೀತಿಯಲ್ಲಿ ನಾವು ನಲಿಯುತ್ತಿದ್ದೆವು,
ಉಲ್ಲಾಸಮಯ ನೃತ್ಯದಲ್ಲಿ ಜೀವನ ಸಂಭ್ರಮವನ್ನಾಚರಿಸುತ್ತಿದ್ದೆವು,
ನಮ್ಮ ಬದುಕಿನಲ್ಲೆಷ್ಟು ಹೊಳಪಿರುತ್ತಿತ್ತು,
ನನ್ನ ಹುಡುಗಿ, ನಾನೇನಾದರೂ ತೋಟಗಾರನಾಗಿದ್ದರೆ!

ನನ್ನ ಹುಡುಗಿ, ನಾನೇನಾದರೂ ಒಂದು ಮೋಡವಾಗಿದ್ದರೆ,
ನಾನು ಯಾವ ಬಂಜರು ಭೂಮಿಯನ್ನೂ ಒಣಗಿ ಹೋಗಲು ಬಿಡುತ್ತಿರಲಿಲ್ಲ,
ಕಾಲ ಕಾಲಕ್ಕೆ ಮಳೆಯಾಗುವಂತೆ ಮಾಡುತ್ತಿದ್ದೆ,
ಎಲ್ಲ ಜೀವಿಗಳ ಬಾಯಾರಿಕೆಯನ್ನು ತಣಿಸುತ್ತಿದ್ದೆ,
ಬದುಕಿನ ಕೊಂಡಿಯನ್ನು ಪುನಃ ನಿರ್ಮಾಣ ಮಾಡುತ್ತಿದ್ದೆ,
ನನ್ನುಸಿರಾದ ನೀನು ನನ್ನ ಗಾಳಿಯಾಗಿ
ನನ್ನನ್ನು ಬೇಗನೆ ಎತ್ತಿಕೊಂಡು ಕರೆದೊಯ್ಯುತ್ತಿದ್ದೆ,
ನಾವಿಬ್ಬರೂ ಜಾಗದಿಂದ ಜಾಗಕ್ಕೆ ಅಲೆದಾಡುತ್ತಿದ್ದೆವು,
ನಿನ್ನಅಣತಿಯ ಮೇರೆಗೆ ನಾನು ನಿಲ್ಲುತ್ತಿದ್ದೆ ಮತ್ತು ಚಲಿಸುತ್ತಿದ್ದೆ;
ದಿಟವಾಗಿಯೂ ನಮ್ಮ ಪಯಣ ಕೊನೆಯಿಲ್ಲದ ಪಯಣವಾಗಿರುತ್ತಿತ್ತು!
ನಮಗಾಗಿ ಹಂಬಲಿಸುವವರನ್ನು ಎಂದೆಂದಿಗೂ ಅರಸುವ
ಆ ಪಯಣ ಒಂದು ವರವಾಗಿ ಪರಿಣಮಿಸುತ್ತಿತ್ತು,
ನನ್ನ ಹುಡುಗಿ, ನಾನೇನಾದರೂ ಒಂದು ಮೋಡವಾಗಿದ್ದರೆ!

ಆಹ್! ಆದರೆ ನಾನೊಬ್ಬ ರೈತನಲ್ಲ, ಸೈನಿಕನಲ್ಲ, ತೋಟಗಾರನಲ್ಲ,
ಒಂದು ಮೋಡವೂ ಅಲ್ಲ;
ಕೇವಲ ಒಬ್ಬ ಕವಿ, ಒಬ್ಬ ಲೇಖಕ, ಒಬ್ಬ ನಟ ಮತ್ತು ಒಬ್ಬ ನಾಟಕಕಾರ
ಈ ಹೆಸರುಗಳಿಂದ ನೀನು ನನ್ನನ್ನು ಕರೆಯಬಹುದು;
ನನ್ನ ಖಯಾಲಿಗಳನ್ನು ಬೆಂಬೆತ್ತಿ ಹೋಗಲು ನಾನು ನಾಚುವುದಿಲ್ಲ
ಯಾವಾಗಲೂ ನನ್ನ ಕನಸಿನ ಕೋಟೆಯಲ್ಲಿ ವಿರಮಿಸುವ ನಾನು
ತಕರಾರು ಮಾಡದೇ ಪಾದಚಾರಿ ಮಾರ್ಗದಲ್ಲಾದರೂ ಮಲಗುವೆ
ಲೇಖನಿಯೇ ನನ್ನ ಮೊದಲ ಒಲವು,
ನನ್ನ ಕೊನೆಯ ಒಲವೂ ಲೇಖನಿಯೇ

ನನ್ನನ್ನೇ ಪ್ರೀತಿಸಲಾಗದ ನಾನು, ನಿನ್ನ ಪ್ರಿಯಕರನಾಗಬಲ್ಲೆ ಹೇಗೆ?
ಬರಬೇಡ ನನ್ನೆಡೆಗೆ ಪ್ರೀತಿಯನ್ನರಸಿ!

## ಸೊನ್ನೆಯೊಳಗೊಂದು ಸೊನ್ನೆ

ಆತ ನನಗೆ ದುಡಿತದ ಕಟ್ಟಳೆಯನ್ನು ವಿಧಿಸಿದ್ದ
ಕೇವಲ ದುಡಿತ
ಕಠಿಣ ದುಡಿತ
ನಂತರ ಮುಂದೆ ಹೋಗಿ
ವರ್ಗೀಕರಣದ ಭಾಗಾಕಾರದ ವಿಧಿ ಲಿಖಿತವನ್ನೂ ಬರೆದ
ಕೇವಲ ಭಾಗಾಕಾರ
ಆತ ನನಗೆ ಯಾವ ಪರೀಕ್ಷೆಯನ್ನೂ ವಿಧಿಸಲಿಲ್ಲ.
ಕೇವಲ ದುಡಿತ
ದುಡಿತವಷ್ಟೇ ವಿಧಿಸಿದ್ದ;
ಆತ ನನಗೆ ಕೀರ್ತಿಯನ್ನು ಬರೆದಿದ್ದ,
ಎಲ್ಲೆಯಿಲ್ಲದ ಕೀರ್ತಿ
ದೊಡ್ಡ ಮಟ್ಟದ ಕೀರ್ತಿ;
ಆತ ನನಗೆ ಸಂಪತ್ತನ್ನು ಬರೆಯಲಿಲ್ಲ,
ಆತ ನನಗೆ ಕೇವಲ ಕೀರ್ತಿಯನ್ನು ಮಾತ್ರ ಬರೆದ!
ಅನಂತರ ಆತ ಅದರ ಎದುರು ಕಳೆಯುವ ಚಿಹ್ನೆಯನ್ನು ಹಾಕಿದ.
ಸ್ಪಷ್ಟವಾಗಿ ಎದ್ದು ಕಾಣುತ್ತಿದ್ದ ಕಳೆಯುವ ಚಿಹ್ನೆ.
ಆತ ನನಗೆ ಕೀರ್ತಿಯನ್ನು ಬರೆದ
ಉನ್ನತವಾದಕೀರ್ತಿ
ಸೀಮಾತೀತವಾದ ಕೀರ್ತಿಯನ್ನು ಬರೆದ;
ಅನಂತರ ಆತ ಅಪಕೀರ್ತಿಯನ್ನೂ ಬರೆದ



ಯಶಸ್ಸನ್ನು ಆತ ನನ್ನ ಪಾಲಿಗೆ ಬರೆಯಲಿಲ್ಲ,
ಕೇವಲ ಅಪಖ್ಯಾತಿಯನ್ನಷ್ಟೇ ಆತ ನನಗೆ ಬರೆದ!
ನನ್ನ ಅಪಖ್ಯಾತಿಯ ಎದುರಿಗೆ ಆತ ಕೂಡುವ ಹಾಗೂ
ಗುಣಿಸುವ ಚಿಹ್ನೆಗಳನ್ನು ಹಾಕಿದ
ಅಲ್ಲಿಯಾವ ಸಂಖ್ಯೆಗಳೂ ಇರಲಿಲ್ಲ,
ಆತ ನನಗೆ ಯಶಸ್ಸನ್ನು ಬರೆಯಲಿಲ್ಲ,
ಕೇವಲ ಅಪಖ್ಯಾತಿಯನ್ನೇ ಬರೆದ.
ಆತ ನನಗೆ ಅಪಖ್ಯಾತಿಯನ್ನು ಬಿಟ್ಟು ಬೇರೇನನ್ನೂ ಬರೆಯಲಿಲ್ಲ.
ಷರಾ ಬರೆಯುವ ಉದ್ದ ಸಾಲನ್ನು ಆತ ಖಾಲಿ ಬಿಟ್ಟದ್ದ
ಅದನ್ನು ಆತ ಯಾವ ರೀತಿಯಲ್ಲಿ ವಿನ್ಯಾಸಗೊಳಿಸಿದ್ದನೆಂದರೆ
ಅದರಲ್ಲಿ ಏನನ್ನೂ ಸೇರಿಸುವಂತಿರಲಿಲ್ಲ
ಅದು ಎಂದೆಂದಿಗೂ ಖಾಲಿಯಾಗಿಯೇ ಉಳಿಯಬೇಕಿತ್ತು
ಸೊನ್ನೆಯೊಳಗೊಂದು ಸೊನ್ನೆಯಾಗಿ!

## ಕೇವಲ ಅಷ್ಟೇ

ವಿಮಾನದಲ್ಲಿ ಹಾರುತ್ತಿದ್ದಾಗ ಬರೆದ ಒಂದು ಭೂಲೋಕದ ಕವನ
ದುಬಾರಿ ಬಾರ್‌ವೊಂದರಲ್ಲಿ ಹಾಯಾಗಿ
ಒರಗಿರುವಾಗ ಸ್ಫುರಿಸಿದ ವೆಲ್ವೆಟ್‌ನಂಥ ಗಜಲ್;
ಯಾವುದೋ ಗಿರಿಧಾಮದ ಪರ್ಣಕುಟಿಯೊಂದರಲ್ಲಿ
ಕಲ್ಪಿಸಿಕೊಂಡ ಒಂದು ದುಃಖದ ಕತೆ;
ಆಕಾಶವನ್ನೇ ದಿಟ್ಟಿಸಿ ನೋಡುತ್ತಿರುವ ಹತಭಾಗ್ಯರೈತರು;
ಅಳಿದುಳಿದಿದ್ದ ಆಹಾರದ ಮೇಲೆ ಎರಗಿರುವ ಹಸಿದು ಕಂಗೆಟ್ಟ ಮಕ್ಕಳು;
ಬಲವಂತಕ್ಕೆ ಕುರಿಗಳು ಹಾಗೂ ಮೇಕೆಗಳ ಕ್ರಯಕ್ಕೆ
ಬಿಕರಿಯಾದ ಆಗಷ್ಟೇ ಅರಳಿದ ಯೌವನ;
ಆರಾಧಿಸುವ ಪ್ರವೃತ್ತಿ, ಷೋಕಿ;
ಪ್ರಶಂಸೆ, ಮನ್ನಣೆ ಗಳಿಸಬೇಕೆನ್ನುವ ಉತ್ಸುಕತೆ;
ಆರಾಮ ಜೀವನಕ್ಕಾಗಿ, ಅಧಿಕಾರದ ಮೊಗಸಾಲೆಗಳ
ಸಂಪರ್ಕಕ್ಕಾಗಿ ಹಾತೊರೆಯುವಿಕೆ;
ಕೇವಲ ಅದೊಂದೇ ಬಾಂಧವ್ಯ. ಕೇವಲ ಅದಷ್ಟೇ.
ಅಸಹಾಯಕತೆಯೊಡನೆ, ಕಂಗೆಟ್ಟ ಹಸಿವಿನೊಡನೆ,
ಬಲವಂತದಿಂದ ಬಿಕರಿಯಾಗುವ ಅರಳಿದ ಯೌವನದೊಡನೆ
ಬೆಸೆದ ನಂಟು ಕೇವಲ ಅಷ್ಟೇ!





# ಅನಾ ಆಹ್ಮತೋವ

ಆರನಕಟ್ಟೆ ರಂಗನಾಥ

ಅನಾ ಆಹ್ಮತೋವ : ರಷ್ಯಾದ ಕವಯಿತ್ರಿ 1989 ಆನಾಳಿಗೆ ನೂರು ತುಂಬಿದ ವರ್ಷ (ಅನಾ ತನ್ನ 77 ನೇ ವಯಸ್ಸಿನಲ್ಲಿ ತೀರಿಕೊಂಡಳು) ಈ ವರ್ಷವನ್ನು ಯುನೆಸ್ಕೊ "ಆಹ್ಮತೋವಳ ವರ್ಷ" ವೆಂದು ಘೋಷಿಸಿತ್ತು. ಅನಾಳ ಕವಿತೆಗಳನ್ನು 1990 ರಲ್ಲಿ ಶಾ.ಬಾಲುರಾವ್ ಕನ್ನಡಕ್ಕೆ ಅನುವಾದಿಸಿದ್ದಾರೆ. ಅಕ್ಷರ ಪ್ರಕಾಶನ ಈ ಹೊತ್ತಿಗೆಯನ್ನು ಪ್ರಕಟಿಸಿದೆ.
ಸ್ತೀಖ್ : ರಷ್ಯನ್ ಭಾಷೆಯಲ್ಲಿ ಕವಿತೆಗೆ ಸಮಾನ ಪದ. ಇದಕ್ಕೆ ಕವಿತೆಯಲ್ಲದೆ ಭಾವನೆ, ಮನಃಸ್ಥಿತಿ ಎಂಬ ಅರ್ಥವೂ ಇದೆ.

ತುಟಿಯಂಚಿನಲ್ಲಿ ಅಲುಗುವ
ನಿನ್ನ ಹೆಸರಿಗೆ
ಪದಗಳನಷ್ಟೇ ಅರ್ಪಿಸುತ್ತಿರುವಾಗ
ನಡುರಾತ್ರಿ ಫೋನಿನಲ್ಲಿ ಸುರಿದ
ಮಾತುಗಳೀಗ ಏಕಾಂತವನ್ನು ಚೆಲ್ಲಾಡುತ್ತಿದೆ.
ಇರಿಯುತ್ತಿದೆ ಕತ್ತಲ ಕಿರಣಗಳು
ಸಂಕೋಚವಿಲ್ಲದೆ
ಈಗ
ಮನಸ್ಸನ್ನು ಅಗ್ಗಿಷ್ಟಿಕೆಯಲ್ಲಿರಿಸಿ
ಜೀವ ಪಡೆಯಲು ತಾಳಿದ
ಕುತೂಹಲದ ಪರಿಭಾಷೆಗಳೆಲ್ಲವು

ದಟ್ಟೈಸಿರುವ ಎದೆಯ ರೋಮದಂತೆ ನವಿರಾಗಿದೆ.
ಜೊಲ್ಲು ಮಾತಿನ ಕೂಸು ಮನದ
ನಿರಾಳವಾಗಿರದ ಸ್ವಪ್ನದಾಚೆ ಈಗಲೇ
ಮುಕ್ಕಿಬಿಡುವಂತೆ ಕಾದುವ ಕನವರಿಕೆ
ನೀವಿಕೊಳ್ಳಲೇಳುವಾಗ ಸ್ಪರ್ಶದ ನೇವರಿಕೆಗೆ
ಸಿಂಬೆ ಸುತ್ತಿಕೊಳ್ಳತ್ತಿವೆ ಇರುಳ ಜೀವ.
ಪಿಸು ಮಾತುಗಳಿಗೇಕೆ ತೆಕ್ಕೆಬಿದ್ದ
ಕರುಳ ಹೆಸರಿಡಿದು ಜಕ್ಕಿಸಿ
ಮೀಯಲೇಳುವ ಭಾವಗಳಲ್ಲಿ ಹುದುಗಿದ
ಚಪ್ಪಡಿಕಲ್ಲುಗಳ ಹೊತ್ತು ಮಾರುವ ಹೊತ್ತಿನ
ನಟ್ಟಿರುಳ ಸಂಗಾತ ಅನಾ ಅಹ್ಮತೋವ.

ಉಗುರುಗಳಿರದೆ ಸಂತೈಯಿಸಿಕೊಂಡ ದೇಹದ
ಮಗ್ಗುಲು ಬದಲಾದ ಶೂನ್ಯದಲ್ಲಿ
ಅಕ್ಷರದ ಅರಿವಳಿಕೆಯ ಕವಿತೆಗಳಾಗಿ
ತಾಸುಗಟ್ಟಲೆ ಓದಿಸಿಕೊಂಡ ಅನಾಳ ಎದೆಯ
ಸಂಗತಿಗಳೇ ಸೋದಾಹರಣವಾಗಿ ಬರೆದ
ನನ್ನೆದೆಯ ಬಯಲೊಳಗೆ ಆಡುತ್ತಿದೆ.

ಪಿಸುಮಾತುಗಳು ಬೆವರುವ ಸಮಯ
ಗಂಟಲೊಳಗಿಳಿಯದ ಎಂಜಲು ಈಗ
ಅವಿಶ್ರಾಂತ ವೇದನೆಗೆ ಜೀವವಾಗಿ
ಉಸಿರಿನ ಉಚ್ವಾಸದಲ್ಲಿ ಉರಿದು
ಉದುರುವ ಕೂದಲ ನಿರ್ವಾಣದಲ್ಲಿ
ಅರಳುವಂತೆ ಮೈ ತಡವಿ ಹಾಸಿದ
ಅನಾಳ ಸ್ತೀಖ್‌ಗಳೊಳಗೆ ದಹಿಸಿದೆ.
■





# ಕ್ರಾಂತಿಯ ಕರೆ

ಕತೆ: ಲಿಯೋನಿಡ್ ಆಂದ್ರೆಯೆವ್
ರಂಗರೂಪ: ವಾಲ್ಟರ್ ವೈಕ್ಸ್
ಅನುವಾದ: ತಾ.ಶ್ರೀ. ಗುರುರಾಜ್

ಪಾತ್ರಗಳು :

ಗಂಡಸು

ಹೆಂಗಸು

(ತೀರಾ ಸಾಧಾರಣವಾಗಿ ಸಜ್ಜುಗೊಂಡ ಬಡತನದ ಮನೆ. ತೆರೆದ ಕಿಟಕಿಯಿಂದ ಬೆಳದಿಂಗಳು ಹರಿಬಿದ್ದು ಬೇರಾವ ಬೆಳಕೂ ಇಲ್ಲದ ಕೋಣೆಯನ್ನು ಬೆಳಗುತ್ತಿದೆ. ಒಬ್ಬ ಹೆಂಗಸು ಕಿಟಕಿಯ ಬಳಿ ನಿಶ್ಚಲವಾಗಿ ಆಚಿನ ಕತ್ತಲಿಗೆ ಕಣ್ಣುನೆಟ್ಟು ನಿಂತಿದ್ದಾಳೆ. ಅವಳ ಕೈಯೊಳಗೊಂದು ಮೊಂಬತ್ತಿ ತೋಯ್ದಾಡುತ್ತಾ ಹೊಳೆಯುತ್ತಿದೆ. ಅವಳು ನಡುಗುತ್ತಿದ್ದಾಳೆ. ಕೆಲ ಕ್ಷಣಗಳ ನಂತರ ಒಬ್ಬ ಗಂಡಸು ನಡುಮನೆ ಕಡೆಯಿಂದ ಬರುತ್ತಾನೆ)

**ಹೆಂಗಸು** ಕೇಳಿಸಿತೇ?

**ಗಂಡಸು** ಮಲಗು ಬಾ.

ಹೆಂಗಸು ಕೇಳಿಸ್ಲಿಲ್ವಾ?

ಗಂಡಸು ಏನು?

ಹೆಂಗಸು ಹೊರಗೆ, ಅವರು ತಡೆಗಳನ್ನು ಕಟ್ಟಾ ಇದಾರೆ.

ಗಂಡಸು ಎಲ್ಲಿ?

ಹೆಂಗಸು ಇಲ್ಲಿ. ನಮ್ಮ ಬೀದಿಯಲ್ಲಿ.

**(ಒಬ್ಬರನ್ನೊಬ್ಬರು ದಿಟ್ಟಿಸಿ ನೋಡುತ್ತಾರೆ. ಗಂಡಸಿನ ಮುಖ ಬಿಳಿಚಿಕೊಳ್ಳುತ್ತದೆ. ಅವನು ಕಿಟಕಿಯ ಬಳಿಗೆ ಹೋಗುತ್ತಾನೆ. ಹೆಂಗಸು ನಡುಗುತ್ತಲೇ ಇದ್ದಾಳೆ. ಅವಳ ಕಣ್ಣುಗಳು ಇನ್ನೂ ಗಂಡಸಿನ ಮೇಲೆ ನೆಟ್ಟಿವೆ, ಅವನ ಪ್ರತಿಕ್ರಿಯೆಗಾಗಿ ಕಾಯುತ್ತಿದ್ದಾಳೆ.)**

ಗಂಡಸು ಎಷ್ಟು ಹೊತ್ತಿನಿಂದ?

ಹೆಂಗಸು ಸುಮಾರು ಒಂದು ಗಂಟೆಯಿಂದ.

**(ವಿರಾಮ)**

ಗಂಡಸು ನನ್ನ ತಮ್ಮ?

ಹೆಂಗಸು ಹೋದ. ನೀವು ತಡೆಯುತ್ತೀರಿ ಅಂತ ಅವನಿಗೆ ಗೊತ್ತಿತ್ತು. ಅದಕ್ಕೇ ಅದು ಶುರುವಾದ ತಕ್ಷಣವೇ ಹೊರಟು ಹೋದ. ಅವನು ಹೋದದ್ದನ್ನು ನಾನು ನೋಡಿದೆ.

ಗಂಡಸು ನಿನ್ಯಾಕೆ ನನ್ನ ಏಳಿಸ್ಲಿಲ್ಲ?

ಹೆಂಗಸು ಏನು ಮಾಡ್ತಿದ್ರಿ? (ನಿಶ್ಶಬ್ದ)

ಗಂಡಸು ಅದು ನಿಜಕ್ಕೂ ಆಗ್ತಾ ಇದೆ. ನನಗೆ ನಂಬೋಕೇ ಆಗ್ತಿಲ್ಲ. **(ಹೆಂಗಸು ಅವನ ಕೈ ಹಿಡಿದುಕೊಳ್ಳುತ್ತಾಳೆ)**

ಹೆಂಗಸು ನಿಮಗೆ ಭಯ ಆಗ್ತಿದೆಯಾ?

ಗಂಡಸು ನಿನಗೆ?

**(ಅವಳು 'ಇಲ್ಲ' ಎನ್ನುವಂತೆ ತಲೆ ಆಡಿಸುತ್ತಾಳೆ. ಆದರೆ ನಡುಗುವುದನ್ನು ನಿಲ್ಲಿಸಲು ಅವಳಿಗೆ ಸಾಧ್ಯವಾಗುತ್ತಿಲ್ಲ)** ಅದು ಆಗುತ್ತೆ ಅಂತ ನನ್ಗೆ ಅನ್ನಿಸ್ತಾ ಇತ್ತು. ಅದೇನೋ ಒಂದು ಮುನ್ಸೂಚನೆ. ಏನೂ ಸದ್ದು-ಸುದ್ದಿಯೇ ಇರಲಿಲ್ಲ. ಈಚೆಗೆ ಅಂತದ್ದೇನೂ ಇರಲೇ ಇಲ್ಲ. ಕಾರ್ಖಾನೆಗಳೆಲ್ಲಾ ಮುಚ್ಚಲ್ಪಟ್ಟಿವೆ. ರಸ್ತೆಗಳು ಬಹುತೇಕ ಖಾಲಿ ಖಾಲಿ ಇದ್ದವು. ಗಾಳಿಯೂ



ಶುದ್ಧವಾಗಿದೆ ಅನ್ನಿಸ್ತಿತ್ತು. ರಾತ್ರಿ ಹೊರಗೆ ಹೋಗಿದ್ದೆ... ಬೀದಿ ದೀಪಗಳಿರಲಿಲ್ಲ. ಕಾರುಗಳಿಲ್ಲ. ಏನೂ ಇಲ್ಲ. ನಗರದ ಯಾವ ಸದ್ದೂ ಇರಲಿಲ್ಲ... ಬರೀ ನಿಶ್ಶಬ್ದ. ಹಾಗೇ ಕಣ್ಣನ್ನೇನಾದರೂ ಮುಚ್ಚಿದರೆ ಎಲ್ಲೋ ದೂರದ ಹಳ್ಳಿಗಾಡಿನಲ್ಲಿ ಇದ್ದ ಹಾಗೇ ಅನ್ನಿಸ್ತಿತ್ತು. ನನಗೆ ಅದರ ವಾಸನೆ ಕೂಡ ಬಂತು. ಗೊತ್ತಾ?! ಅದೇನಾದರೂ ಆಗಿರಲಿ – ವಸಂತದ ರಾತ್ರಿಗಳ ಆ ಹೊಲಗಳು. ಹೂವುಗಳು ಆ ಇಬ್ಬನಿಯ ಪರಿಮಳ... ನಾಯಿ ಬೊಗಳಿದ್ದೂ ಕೇಳಿಸಿತು – ಅದೂ ಎಷ್ಟು ಸ್ಪಷ್ಟವಾಗಿ ಕೇಳಿಸ್ತು ಅಂತೀಯಾ: ಮನಸ್ಸಿಗೆ ತಟ್ಟಿದಂತಾಯ್ತು – ಇವೆಲ್ಲ ನಗರದಲ್ಲಿ ಎಲ್ಲಿ ನೋಡೋಕೆ ಸಿಗುತ್ತೆ? ಏನೇನೋ ಆಗ್ತಾ ಇದೆ. ನನಗೆ ನಿಜಕ್ಕೂ ನಗು ಬಂತು. (ನಾಯಿ ಬೊಗಳಿದ ಸದ್ದು) ಕೇಳಿಸ್ಕೋ. ನಾಯಿ ಬೊಗಳ್ತಾ ಇದೆ ನೋಡು.

**(ಎಲ್ಲೋ ಭಾರವಾದ ಸುತ್ತಿಗೆಗಳಿಂದ ಬಡಿಯುತ್ತಿರುವ ಸದ್ದು. ಹೆಂಗಸು ಕಿಟಕಿಯ ಬಳಿಗೆ ಓಡಿ ಆಚೆಗೆ ಕೈ ಗುರಿಯಿಟ್ಟು ತೋರಿಸುತ್ತಾಳೆ)**

**ಹೆಂಗಸು** ಅಗೋ ಅಲ್ಲಿದ್ದಾರೆ ಅವರು ಮತ್ತೆ! ಆ ಮೂಲೆಯಲ್ಲಿ. (ಅವರು ಒಬ್ಬರ ಕೈಯನ್ನೊಬ್ಬರು ಹಿಡಿದು ಕತ್ತಲಿನೊಳಕ್ಕೆ ಕಣ್ಣು ನೆಡುತ್ತಾರೆ.

ಸುತ್ತಿಗೆಗಳ ಬಡಿತದ ಜೊತೆಗೆ ಕೊಡಲಿಯ ಸದ್ದೂ ಸೇರಿಕೊಳ್ಳುತ್ತದೆ.) ಆ ಶಬ್ದ ಕೇಳಿಸಿಕೊಳ್ಳುವುದೇ ಒಂದು ಆನಂದ, ಎಡೆಬಿಡದ ಸದ್ದು, ಕಾಡಿನಲ್ಲೋ, ನದಿ ತೀರದಲ್ಲೋ ದೋಣಿಯನ್ನು ಸರಿಮಾಡುವಂತೆ ಅಥವಾ ಜಲಾಶಯ ಕಟ್ಟುತ್ತಿರುವಂತೆ; ಸಂತೋಷದಾಯಕ, ಮಧುರವಾದ ಕೆಲಸ.

ಗಂಡಸು ಅದು ಭವಿಷ್ಯದ ಸದ್ದು. (ನಿಶ್ಶಬ್ದ) ನಾನೂ ಹೋಗಬೇಕು, ಗೊತ್ತಲ್ಲ.

ಹೆಂಗಸು ನನಗೆ ಗೊತ್ತಿತ್ತು ನೀವು ಹೋಗ್ತೀರಾ ಅಂತ.

ಗಂಡಸು ನಿನಗೆ ಅರ್ಥ ಆಗುತ್ತೆ ಹಾಗಿದ್ರೆ?

ಹೆಂಗಸು ಖಂಡಿತ.

ಗಂಡಸು ಅದು ನನ್ನ ಕರ್ತವ್ಯ.

ಹೆಂಗಸು ಮತ್ತೆ ಮಕ್ಕಳು?

ಗಂಡಸು ಅವರ ಜೊತೆ ನೀನಿರ್ತೀಯಲ್ಲ. ಅವರಿಗೆ ತಾಯಿ ಇರ್ತಾಳೆ – ಅಷ್ಟು ಸಾಕು. ನಾನು ಉಳಿದುಕೊಳ್ಳೋದು ಸಾಧ್ಯವಿಲ್ಲ.

ಹೆಂಗಸು ಮತ್ತೆ ನಾನು? ನಾನೂ . . . ಕೂಡ?

ಗಂಡಸು ಏನೂ?!

**(ಆಶ್ಚರ್ಯಗೊಂಡು ತನ್ನ ಬಾಹುಗಳನ್ನು ಚಾಚುತ್ತಾನೆ. ಆದರೆ ಅವಳು ಅವನ್ನು ಪಕ್ಕಕ್ಕೆ ಸರಿಸುತ್ತಾಳೆ.)**

ಹೆಂಗಸು ಈ ತರದ್ದು ಏನೋ ಒಂದು ಆಗುತ್ತೆ ಬಹಳ ಕಾಲಕ್ಕೊಮ್ಮೆ . . . ನೂರು ವರ್ಷಕ್ಕೋ? ಸಾವಿರ ವರ್ಷಕ್ಕೋ? ನಾನು ಇಲ್ಲೇ ಇದ್ದು ಮಕ್ಕಳ ಲಂಗೋಟಿ ಬದಲಿಸ್ತಾ ಇರ್ಬೇಕು ಅಂತೀರೇನು?

ಗಂಡಸು ನಿನಗೆ ಸಾಯೋದಕ್ಕೆ ಆಸೆಯೇನು? ನನ್ನನ್ನು ಸಾಯಿಸುವಷ್ಟೇ ಬೇಗ ನಿನ್ನನ್ನೂ ಸಾಯಿಸುತ್ತಾರೆ. ನೀನು ಹೆಂಗಸು ಅಂತ ಅವರೇನು ಹಿಂದುಮುಂದು ನೋಡೋಲ್ಲ.

ಹೆಂಗಸು (ಇನ್ನೂ ನಡುಗುತ್ತಾ) ನನಗೇನೂ ಭಯವಿಲ್ಲ.

ಗಂಡಸು ಮತ್ತೆ ಮಕ್ಕಳ ಗತಿ? ನೀನಿಲ್ಲಾಂದ್ರೆ ಅವನ್ನ ನೋಡಿಕೋಳ್ಳೋರು ಯಾರು? ಅವರಿಗೇನು ದಾರಿ?

ಹೆಂಗಸು ಇದು ಮಕ್ಕಳಿಗಿತಂಲೂ ದೊಡ್ಡದು.

ಗಂಡಸು ಅವರು ಸತ್ತುಹೋದರೆ?

ಹೆಂಗಸು ಅವರು ಸತ್ತೇ ಹೋದ್ರೆ ಏನಾಯ್ತು? ಒಂದು ಒಳ್ಳೆಯ ಉದ್ದೇಶಕ್ಕೆ ತಾನೇ?

ಗಂಡಸು ನೀನು ನಿಜವಾಗ್ಲೂ ಈ ಮಾತು ಹೇಳ್ತಿದೀಯಾ ಇವು ನಿನ್ನ ಬಾಯಿಂದ ಬರ್ತಿರೋ ಮಾತೇನು? ನೀನು ಮಕ್ಕಳಿಗೋಸ್ಕರವೇ ಬದುಕಿದಂತವಳು!? ಅವರಿಗೋಸ್ಕರ ಹಗಲು ರಾತ್ರಿ ಆತಂಕದಲ್ಲಿ ಒದ್ದಾಡಿದವಳು!

ಹೆಂಗಸು ಅದು ಹಿಂದಿನ ಮಾತು.

ಗಂಡಸು ಏನಾಗಿದೆ ನನಗೆ?

ಹೆಂಗಸು ನಿಮಗೇನಾಗಿದೆಯೋ ಅದೇ ನನಗೂ ಆಗಿರೋದು. ನನಗೆ ಭವಿಷ್ಯ ಕಾಣಿಸ್ತಿದೆ.

ಗಂಡಸು ನೀನೂ ನನ್ನ ಜೊತೆ ಬರಬೇಕೇನು?

ಹೆಂಗಸು ಹೌದು. (ವಿರಾಮ) ದಯವಿಟ್ಟು ಕೋಪಿಸ್ಕೋಬೇಡಿ... ಆ ಸದ್ದು ಆರಂಭವಾದಾಗ... ಆ ಸುತ್ತಿಗೆಗಳು, ಕೊಡಲಿಗಳು ಕೆಡವಲು ಆರಂಭಿಸಿದಾಗ... ನೀವಿನ್ನೂ ನಿದ್ದೆಯಲ್ಲಿದ್ರಿ... ನನಗೆ ಇದ್ದಕ್ಕಿದ್ದ ಹಾಗೆ ಈ ಗಂಡ, ಮಕ್ಕಳು – ಇವೆಲ್ಲಾ ಶಾಶ್ವತ ಅಲ್ಲ ಅಂತ ಅರ್ಥ ಆಯ್ತು... ಆದರೆ... ನೀವಂದ್ರೆ ನನಗೆ ತುಂಬಾ ಪ್ರೀತಿ... (ಮತ್ತೆ ಅವನ ಕೈ ಹಿಡಿದುಕೊಳ್ಳುವಳು.)...

ಆದರೆ ಅವರು ಅಲ್ಲಿ ಸುತ್ತಿಗೆಗಳಿಂದ ಒಡೆಯುತ್ತಿರುವುದು ನಿಮಗೆ ಕೇಳಿಸ್ತಿಲ್ವೇನು? ಚಚ್ಚಿ ಜಿಸಾಡುತ್ತಿದ್ದಾರೆ. ಏನೋ ಜೀಳ್ತಾ ಇರೋ ತರ ಇದೆ. ಎಂಥದೋ ಗೋಡೆ ಉರುಳ್ತಿರೋ ತರ ಇದೆ – ಭೂಮಿ ಬದಲಾಗ್ತಿದೆ – ಓ ಅದೆಷ್ಟು ಅಗಾಧ, ವಿಶಾಲ ಮತ್ತೆ ಸ್ವಚ್ಛಂದ! ಇದೀಗ ರಾತ್ರಿ, ಆದರೆ ಸೂರ್ಯ ಹೊಳೀತಿರೋ ತರ ಅನ್ನಿಸ್ತಿದೆ ನನಗೆ! ನಾನು ಮುವ್ವತ್ತು ವರ್ಷದವಳು ಆದರೆ ನನಗೀಗ ಹದಿನೇಳು ವರ್ಷವೇನೋ ಅನ್ನಿಸ್ತಾ ಇದೆ. ನನಗೆ ಗೊತ್ತು, ನನ್ನ ಮುಖದಲ್ಲಿ ನೀವದನ್ನು ಕಾಣಬಹುದು. ಆದರೂ. . . ಈ ರಾತ್ರಿಗೆ ನಾನು ಹದಿನೇಳು ವರ್ಷದವಳೇನೋ ಅನ್ನಿಸ್ತಿದೆ – ನಾನು ಮೊದಲ ಬಾರಿಗೆ ಪ್ರೇಮದಲ್ಲಿ ಬಿದ್ದಂತೆ ಅನ್ನಿಸ್ತಿದೆ – ಇದೊಂದು ರೀತಿ ಆಕಾಶವನ್ನೆಲ್ಲಾ ಬೆಳಗಿಸುವಂತ ಅಗಾಧ, ಮೇರೆಯಿರದ ಪ್ರೀತಿ!

ಗಂಡಸು ನಗರವೆಲ್ಲಾ ಸತ್ತು ಹೋಗಿದೆಯೇನೋ ಎನ್ನುವಂತಿದೆ, ನೀನು ಹೇಳಿದ್ದು ಸರಿ. ನಾನೂ ಕೂಡ ಮಗುವಾಗಿ ಬಿಟ್ಟಿದ್ದೇನೇನೋ ಅನ್ನಿಸ್ತಿದೆ.

ಹೆಂಗಸು ಅವರು ಒಡೆಯುತ್ತಿದ್ದಾರೆ, ಆ ಸದ್ದು ಸಂಗೀತದಂತೆ ಕೇಳಿಸ್ತಿದೆ ನನಗೆ, ನಾನು ಸದಾ ಕನವರಿಸುತ್ತಿದ್ದ ಸಂಗೀತದ ಹಾಗೆ – ಇದೇ ಜೀವನದುದ್ದಕ್ಕೂ– ನನಗೆ ಗೊತ್ತೇ ಇರಲಿಲ್ಲ, ಅಷ್ಟೊಂದು ಅಗಾಧ ಪ್ರೀತಿ ಯಾರ ಮೇಲೆ – ಅದಾವ ಪ್ರೀತಿ ನನ್ನನ್ನು ಅಳುವಂತೆ, ನಗುವಂತೆ, ಹಾಡುವಂತೆ ಮಾಡ್ತಿದೆ ಅಂತ! ಇದು ಸ್ವಾತಂತ್ರ್ಯ! ನನಗೆ ನನ್ನ ಜಾಗ ನಿರಾಕರಿಸಬೇಡಿ – ಅಲ್ಲಿ ಹೊರಗೆ ಕೆಲಸ ಮಾಡ್ತಾ ಇರೋರ ಜೊತೆ ನನ್ನನ್ನು ಸಾಯಲು ಬಿಡಿ –ಭವಿಷ್ಯವನ್ನು ಧೈರ್ಯದಿಂದ ಕರೆದು ಸತ್ತ ಭೂತಕಾಲವನ್ನು ಅದರ ಸಮಾಧಿಯಿಂದ ಏಳಿಸ್ತಾ ಇರೋ ಜನದ ಜೊತೆ ಸಾಯಬೇಕು ನಾನು

ಗಂಡಸು (ವಿಚಿತ್ರವಾಗಿ) ಸಮಯದಂಥ ಮಾಂತ್ರಿಕವಾದದ್ದು ಬೇರೇನೂ ಇಲ್ಲ.

ಹೆಂಗಸು ಏನು?

ಗಂಡಸು ಸೂರ್ಯ ಹುಟ್ಟುತ್ತಾನೆ ಮುಳುಗುತ್ತಾನೆ, ಗಡಿಯಾರದ ಮುಳ್ಳು ತಿರುಗುತ್ತವೆ . . . ಆದರೆ ಸಮಯ ಅನ್ನೋದು ಅಸ್ತಿತ್ವದಲ್ಲೇ ಇಲ್ಲ. ಅದೊಂದು ಭ್ರಮೆ. . . ನೀನಾರು? ನೀನು ಮನುಷ್ಯ ಜೀವಿಯೇ?

(ಹೆಂಗಸು ತಾನು ಹದಿನೇಳು ವರ್ಷದ ಹುಡುಗಿಯೋ ಎಂಬಂತೆ ಜೋರಾಗಿ ನಗಲಾರಂಭಿಸುತ್ತಾಳೆ.)

ಹೆಂಗಸು ನನಗೂ ಅಷ್ಟೇ! ನೀವಾರು ಎಂದು ಗೊತ್ತಿಲ್ಲ! ನೀವೂ ಮನುಷ್ಯ ಜೀವಿಯೇ? ಎಂಥ ವಿಚಿತ್ರ! ಎಷ್ಟೊಂದು ಸುಂದರ . . . ಎರಡು ಮನುಷ್ಯ ಜೀವಿಗಳು!

ಗಂಡಸು ನಾನೀಗ ಹೊರಡಬೇಕು. ಇನ್ನು ಕಾಯೋದು ನನ್ನಿಂದ ಸಾಧ್ಯವೇ ಇಲ್ಲ.

ಹೆಂಗಸು ಇರಿ, ತಿನ್ನಲು ಏನಾದರೂ ಸ್ವಲ್ಪ ಕೊಡ್ತೇನೆ. ಮೊದಲು ನೀವು ಏನಾದರೂ ತಿನ್ನಬೇಕು. ಕೆಲ ನಿಮಿಷಗಳಲ್ಲಿಆಗಿ ಹೋಗುವುದೇನೂ ಇಲ್ಲ... ನೋಡಿ, ಎಷ್ಟೊಂದು ವಿವೇಚನೆ ನನಗೆ. ನಾನು ನಾಳೆ ಬರುತ್ತೇನೆ. ಈ ಮಕ್ಕಳನ್ನು ಯಾರಿಗಾದರೂ ಕೊಟ್ಟು ನಾನೂ ನಿಮ್ಮ ಜೊತೆ ಬಂದು ಸೇರಿಕೊಳ್ತೇನೆ.

ಗಂಡಸು ಕಾಮ್ರೇಡ್.

ಹೆಂಗಸು ಹೇಳಿ, 'ಕಾಮ್ರೇಡ್'. (ತೆರೆದ ಕಿಟಕಿಯಿಂದ ಕೊಡಲಿಗಳ ಹೊಡೆತದ ಸದ್ದು ಕೇಳಿಸುತ್ತದೆ. ಅವಳು ಅವನಿಗೆ ತಿನ್ನಲು ಒಂದಿಷ್ಟು ರೊಟ್ಟಿಯನ್ನು ತಂದು ಮೇಜಿನ ಮೇಲೆ ಇಡುತ್ತಾಳೆ. ಅವನು ಅದನ್ನು ತಿನ್ನದೆ ಅದನ್ನೇ ದುರುಗುಟ್ಟಿ ನೋಡುತ್ತಿರುತ್ತಾನೆ.) ಯಾಕೆ? ತಿನ್ನಬಾರದೇ?

**ಗಂಡಸು** ರೊಟ್ಟಿ . . . ಅದೆಷ್ಟು ವಿಚಿತ್ರ! ಎಲ್ಲವೂ ನಿಗೂಢ ಮತ್ತು ಹೊಚ್ಚ ಹೊಸತು! ನನಗೆ ನಗಬೇಕೆನಿಸುತ್ತಿದೆ. ಗೋಡೆಗಳನ್ನು ನೋಡಿದರೆ ಅವೆಷ್ಟು ಅಪ್ರಸ್ತುತ . . . ಅಶಾಶ್ವತ ಎನಿಸುತ್ತದೆ. ಅವು ಬಹುತೇಕ ಅಗೋಚರ. ಅವುಗಳನ್ನು ಕಟ್ಟಿದ್ದು ಹೇಗೆ ಎಂದು ನನಗೆ ಗೊತ್ತು... ಅವುಗಳನ್ನು ಉರುಳಿಸುವುದೂ ಗೊತ್ತು. ಎಲ್ಲವೂ ಸರಿಹೋಗುತ್ತವೆ. ಮೇಜು. ಅದರ ಮೇಲಿನ ಆಹಾರ. . . ನೀನು. . . ನಾನು. . . ಈ ನಗರ. ಎಲ್ಲವೂ ಪಾರದರ್ಶಕವಾಗಿ ಹೊಳೆಯುವಂತೆ ಕಾಣುತ್ತಿದೆ. (ಹೆಂಗಸು ಮೇಜಿನ ಮೇಲಿನ ಹಳಸಲು ಒಣರೊಟ್ಟಿಯತ್ತ ಕಣ್ಣಾಡಿಸುತ್ತಾಳೆ. ಮಕ್ಕಳು ಮಲಗಿರುವ ಕಡೆಗೆ ತನ್ನ ದೃಷ್ಟಿಯನ್ನು ಸ್ವಲ್ಪವೇ ತಿರುಗಿಸಿ ನಿಧಾನವಾಗಿ ತಲೆಯಾಡಿಸುತ್ತಾಳೆ.) ಅವರ ಬಗ್ಗೆ ನಿನಗೆ 'ಅಯ್ಯೋ ಪಾಪ!' ಅನ್ನುತ್ತೇನು? ಮಕ್ಕಳ ಬಗ್ಗೆ? ಅವು ಈ ಸಮಯದಲ್ಲಿ ಈ ಜಗತ್ತಿಗೆ ಬಂದ ಬಗ್ಗೆ? ಎಲ್ಲ ಬಿಟ್ಟು ಅದೂ ಈ ಸಮಯದಲ್ಲಿ ಬಂದದ್ದಕ್ಕೆ?

(ಅವಳು ರೊಟ್ಟಿಯ ಮೇಲೆ ನೆಟ್ಟ ಕಣ್ಣನ್ನು ಕದಲಿಸದೆ ತಲೆ ಆಡಿಸುತ್ತಾಳೆ.)

**ಹೆಂಗಸು** ಇಲ್ಲ . . . ನಾನು ನಮ್ಮ ಕಳೆದ ಜೀವನದ ಬಗ್ಗೆ ಯೋಚಿಸುತ್ತಿದ್ದೆ. (ವಿರಾಮ) ಇದೆಂಥ ನಿಗೂಢ. ವಿ ಚಿ ತ್ರ! ಬ ಂ ಥ ರ ಸುದೀರ್ಘಸ್ವಪ್ನದಿಂದ ಎಚ್ಚೆತ್ತ ಹಾಗೆ. (ಕೊಠಡಿಯ ಉದ್ದಗಲಕ್ಕೂ ಹಾಗೇ ಕಣ್ಣಾಡಿಸುತ್ತಾಳೆ.) ನಾವು ಬದುಕಿದ್ದ ಜಾಗ ನಿಜಕ್ಕೂ ಇದೇನಾ?!

**ಗಂಡಸು** ನೀನು ನನ್ನ ಜೀವವಾಗಿದ್ದೆ.

**ಹೆಂಗಸು** ಮತ್ತವರು ನಮ್ಮ ಮಕ್ಕಳು.

**ಗಂಡಸು** ನಾವು ದುಡಿದೆವು.

**ಹೆಂಗಸು** ನಾವು ಪ್ರೀತಿಸಿದೆವು.

**ಗಂಡಸು** ಇದೇ ಮೇಜಿನ ಮುಂದೆ ನಮ್ಮ ಸಾಲದ ಬಾಕಿಗಳನ್ನು ತೀರಿಸಿದೆವು.

**ಹೆಂಗಸು** ಓಹ್! ಆ ಸಾಲಗಳಿಗಾಗಿ ಅದೆಷ್ಟು ಬೆವರು ಹರಿಸಬೇಕಾಯ್ತು!

**ಗಂಡಸು** ಅವೆಲ್ಲ ಅಪ್ರಸ್ತುತ ಅನ್ನಿಸ್ತಿದೆ ಈಗ – ಅಲ್ವಾ? ಅದೆಲ್ಲ ಎರಡು ಮೂರು ಕಾಸಿನ ಕುರಿತಾದ ಅಲ್ಲಿಲ್ಲಿನ ಚಿಂತೆ.

**ಹೆಂಗಸು** ಮತ್ತೆ ಇಲ್ಲಿ, ಈ ಗೋಡೆಯಾಚೆ ನಿಮ್ಮಪ್ಪ ತೀರಿಕೊಂಡರು.

**ಗಂಡಸು** ಹೌದು. ನಿದ್ದೆಯಲ್ಲಿದ್ದಾಗಲೇ ತೀರಿಕೊಂಡರು. ಇಂಥದೊಂದು ದಿನ ಬರುತ್ತೆಂದು ಅವರು ಯಾವಾಗಲೂ ಹೇಳ್ತಿದ್ದರು – ಆದರೆ ಅದನ್ನು

ನೋಡಲು ಅವರಿಲ್ಲ. (ಇದ್ದಕ್ಕಿದ್ದಂತೆ ನಡುಮನೆಯ ಕಡೆಯಿಂದ ಮಗು ಅಳುವ ಧ್ವನಿ ಕೇಳಿಬರುತ್ತದೆ.) ಅವಳ ಅಳು ಅದೆಷ್ಟು ವಿಚಿತ್ರ ಅನ್ನಿಸ್ತಿದೆ ಈಗ . . . ಈ ದೈತ್ಯ ಗೋಡೆಗಳ ನಡುವೆ. ಅದೇ ಅಲ್ಲಿ . . . ಕೆಳಗೆ ಅವರು ತಡೆಗಳನ್ನು ಕಟ್ಟುತ್ತಿದ್ದಾರೆ.

**(ಹೆಂಗಸು ಕನಸಿನಿಂದ ಇದ್ದಕ್ಕಿದ್ದಂತೆ ಎಚ್ಚರಗೊಂಡು ಅಳುವಿನ ದನಿ ಬಂದ ಕಡೆಗೆ ಹೋಗಲಾರಂಭಿಸುತ್ತಾಳೆ.)**

**ಹೆಂಗಸು** ಸರಿ, ಹೊರಡಿ ಮತ್ತೆ!

**ಗಂಡಸು** ಇರು, ಒಂದ್ಸಲ ಮಕ್ಕಳನ್ನು ಮುದ್ದಿಸಬೇಕು.

**ಹೆಂಗಸು** ಅವರನ್ನು ಎಚ್ಚರಿಸಿಬಿಡ್ತೀರಿ ನೀವು.

**ಗಂಡಸು** ನೀನು ಹೇಳೋದು ಸರಿ.

**(ಹೆಂಗಸು ನಡುಮನೆಯತ್ತ ನಡೆದು ಮರೆಯಾಗುತ್ತಾಳೆ. ಗಂಡಸು ಕಿಟಕಿಯ ಬಳಿಗೆ ಹೋಗಿ ಆಚಿನ ಕತ್ತಲೊಳಗೆ ಇಣುಕಿ ನೋಡುತ್ತಾನೆ. ಹೊಡೆತದ ಸದ್ದು ಮುಂದುವರಿದಿದೆ. ಮಗುವಿನ ಅಳು ನಿಧಾನವಾಗಿ ಕಡಿಮೆಯಾಗುತ್ತದೆ. ಕೆಲ ಕ್ಷಣಗಳ ನಂತರ ಹೆಂಗಸು ಹಿಂತಿರುಗುತ್ತಾಳೆ.)**



**ಹೆಂಗಸು** ನೀವು ಬಂದೂಕನ್ನು ತೆಗೆದುಕೊಳ್ತೀರೇನು?

**ಗಂಡಸು** ಹೌದು.

**ಹೆಂಗಸು** ಅದು ಅಲ್ಲಿ

ಸ್ಟೌವ್‌ನ ಹಿಂದೆ ಇದೆ. (ಅವನು ಬಂದೂಕನ್ನು ತೆಗೆದುಕೊಳ್ಳುತ್ತಾನೆ.)

ಗಂಡಸು ಹ್ಞಾ ಆಯಿತು . . . (ಅವಳು ಅವನನ್ನು ಚುಂಬಿಸುತ್ತಾಳೆ.) ಎಷ್ಟೊಂದು ಅಪರಿಚಿತ . . . ಎಷ್ಟೊಂದು ವಿಚಿತ್ರ ಕಣ್ಣುಗಳು! ಹತ್ತು ವರ್ಷ ನಾನು ಈ ಕಣ್ಣುಗಳನ್ನು ನೋಡಿದ್ದೇನೆ – ನನ್ನ ಕಣ್ಣುಗಳಿಗಿಂತ ಬಹಳ ಚೆನ್ನಾಗಿ ಅರಿತಿದ್ದೆ ಅಂದುಕೊಂಡಿದ್ದೆ – ಈಗ . . . ಅವುಗಳನ್ನೇನೋ ಹೊಸತಿದೆ . . . ಏನೋ ಸಂಪೂರ್ಣ ಹೊಸತು . . . ಏನು ಎಂದು ಹೇಳಲಾಗದ ಹೊಚ್ಚ ಹೊಸತು!

ಹೆಂಗಸು ನಾನು ನಿಮ್ಮ ನೆನಪಿನಲ್ಲಿ ಇರ್ತೀನೇನು?

ಗಂಡಸು ಖಂಡಿತ.

ಹೆಂಗಸು ಅಷ್ಟೊಂದು ವಿಚಿತವಾಗಿ ಹೇಗೆ ಹೇಳ್ತೀರಿ? ಇನ್ನು ಎಲ್ಲವೂ ಬೇರೆಯೇ ಅಗಿರುತ್ತೆ.

ಗಂಡಸು ನೆನಪಿಟ್ಟುಕೊಳ್ತೇನೆ.

ಹೆಂಗಸು ನೀವು ತೀರಿಹೋದರೆ?

ಗಂಡಸು ಗೊತ್ತಿಲ್ಲ. (ಸುತ್ತಲಿನ ಗೋಡೆಗಳತ್ತ, ರೊಟ್ಟಿಯತ್ತ, ಮೊಂಬತ್ತಿಯತ್ತ ಕಣ್ಣಾಡಿಸುತ್ತಾನೆ. ಹೆಂಡತಿಯ ಕೈಹಿಡಿದು ಬಾಗಿಲಿನತ್ತ ಚಲಿಸುತ್ತಾನೆ. ವಿರಾಮ) ಸರಿ . . . ಮತ್ತೆ ಭೇಟಿಯಾಗೋಣ!

ಹೆಂಗಸು ಹ್ಞಾ . . . ಮತ್ತೆ ಸಿಗೋಣ!

(ಅವನು ಆಚೆ ಕತ್ತಲಿನೊಳಕ್ಕೆ ಹೋಗುತ್ತಾನೆ. ಅವಳು ಅವನು ಹೋದ ದಿಕ್ಕಿನತ್ತಲೇ ನೋಡುತ್ತಿರುತ್ತಾಳೆ. ಸುತ್ತಿಗೆಗಳು, ಕೊಡಲಿಗಳ ಬಡಿತದ ಸದ್ದು ಗಾಳಿಯ ತುಂಬಾ ತುಂಬಿಕೊಳ್ಳುತ್ತದೆ.)

■



ಅಸ್ಸಾಮಿ ಕಥೆ

# ಕರುಣಾಧರ್ ಬರುವಾ ಅವರೂ, ಅವರ ಸ್ಮರಣ ಸಂಚಿಕೆಯೂ...

ಮೂಲ : ಮನೋರಮಾ ದಾಸ್ ಮೇಧಿ

ಕನ್ನಡಕ್ಕೆ : ಡಿ.ಎನ್.ಶ್ರೀನಾಥ್

ವಿಶಿಷ್ಟ ವ್ಯಕ್ತಿಯೊಬ್ಬರ ಹೆಸರಿನಲ್ಲಿ ಕಾಲೇಜಿನ ನಾಮಕರಣ ಮಾಡಲಾಯಿತು. ಕೆ.ಡಿ.ಬಿ. ಕಾಲೇಜ್! ಬಿಡಿಸಿ ಹೇಳಬೇಕೆಂದರೆ – 'ಕರುಣಾಧರ್ ಬರುವಾ ಕಾಲೇಜ್.' 'ಸಂದಿಕೈ ಕಾಲೇಜ್' ಅಥವಾ 'ಬಾಪೂಜಿ ಕಾಲೇಜ್'ಗಳಿಗೆ ಇರುವಂಥ ಕಾರಣಗಳು ಖಂಡಿತ ಇದಕ್ಕಿಲ್ಲ. ಕರುಣಾಧರ್ ಬರುವಾ ಅವರ ಪುತ್ರ ಬೈಕುಂಠ ಬರುವಾ ಅವರು ತಮ್ಮ ತಂದೆಯ ನೆನಪಿಗೆ ಕಾಲೇಜು ಕಟ್ಟಲು ಈ ಭೂಮಿಯನ್ನು ದಾನವಾಗಿ ಕೊಟ್ಟಿದ್ದರು. ಬೈಕುಂಠ ಬರುವಾ ಅವರ ಕಾರ್ಯಕ್ಷೇತ್ರ ಸಹ ಗುವಾಹಾಟಿ. ಅವರು ಇಲ್ಲಿಯೇ ತಮ್ಮ ಕುಟುಂಬ ಸಮೇತರಾಗಿ ನೆಲೆಸಿದ್ದಾರೆ. ನಗರದ ಮೂಲೆಯೊಂದರಲ್ಲಿ ಹತ್ತು ಬಿಘೆಯ ಪ್ಲಾಟೊಂದು ಖಾಲಿಯಿತ್ತು. ಅಲ್ಲಿ ಸ್ವರ್ಗಸ್ಥರಾಗಿದ್ದ ತಂದೆಯವರು ಕಿತ್ತಲೆ ಹಣ್ಣಿನ ತೋಟ ಮಾಡಿಸಿದ್ದರು. ಆದರೆ ಅವರು ಇಹಲೋಕ ತ್ಯಜಿಸಿದ ಮೇಲೆ ನೆರೆಹೊರೆಯ ಮಕ್ಕಳು ಮಂಗಗಳ ಸೈನ್ಯದಂತೆ, ಕಿತ್ತಲೆಯ ಕಾಯಿಗಳನ್ನೇ ಹಾಳುಮಾಡುತ್ತಿದ್ದರು. ಆದರೆ ಬೈಕುಂಠ ಬರುವಾ ಗುವಾಹಾಟಿಗೆ ಬಂದಾಗ ಮಂಗಗಳ ಸೈನ್ಯ ಮಾತ್ರವಲ್ಲ, ಅಲ್ಲಿ ಸೌದೆ ಅರಸುವವರು,

ಪ್ರೇಮಿಗಳು, ಅತ್ಯಾಚಾರಿಗಳು, ಪಶು-ಕುರಿಗಳು, ಕಳ್ಳಕಾಕರು, ದರೋಡೆಖೋರರು ಮುಂತಾದವರಿಗೆ ಆಶ್ರಯಧಾಮವಾಗಿ ಪರಿವರ್ತನೆಗೊಂಡಿತ್ತು. ಬೈಕುಂಠರು ಅದನ್ನು ಚಿಕ್ಕ-ಚಿಕ್ಕ ಪ್ಲಾಟ್ ಮಾಡಿ ಮಾರಲು ಯೋಚಿಸುತ್ತಿದ್ದರು. ಅಂಥ ಸಂದರ್ಭದಲ್ಲಿ ಕಾಲೇಜು ನಿರ್ಮಿಸುವ ಬಗ್ಗೆ ಪ್ರಸ್ತಾಪವೊಂದು ಬಂದಿತು. ಅವರು ಒಪ್ಪಿದರು ಆದರೆ ಒಂದು ಶರತ್ತನ್ನು ಹಾಕಿದರು. ಕಾಲೇಜಿಗೆ ತಮ್ಮ ಹೆಸರನ್ನಿಡಬೇಕು ಎಂಬುದೇ ಆ ಶರತ್ತಾಗಿತ್ತು.

ಇಪ್ಪತ್ತೈದು ವರ್ಷಗಳೇ ಗತಿಸಿತು. ಕಾಲೇಜಿನವರು ರಜತ ಜಯಂತಿಯನ್ನು ಆಚರಿಸಲು ಅಣಿಮಾಡಿ-ಕೊಳ್ಳುವಲ್ಲಿ ತಮ್ಮನ್ನು ತೊಡಗಿಸಿಕೊಂಡರು. ದುರ್ಗಾ ಪೂಜೆಯ ಸಮಾರಂಭದಲ್ಲಿ ಮಹಿಳೆಯರು ಹೊಸ-ಹೊಸ ಬಣ್ಣದ ಸೀರೆಗಳನ್ನು ಧರಿಸಿ ಭಾಗವಹಿಸುವಂತೆ ಕಾಲೇಜನ್ನು ಹೊಸ-ಹೊಸ ಬಣ್ಣಗಳಿಂದ ಶೃಂಗರಿಸಲಾಯಿತು. ಎಲ್ಲರೂ ತಮ್ಮ-ತಮ್ಮ ಕೆಲಸ-ಕಾರ್ಯಗಳಲ್ಲಿ ಮಗ್ನರಾಗಿದ್ದರು. ಕೆಲವರು ಚಂದಾ ವಸೂಲು ಮಾಡುತ್ತಿದ್ದರೆ , ಇನ್ನು ಕೆಲವರು ಸಂಗೀತದ ಬಗ್ಗೆ ಚರ್ಚೆ ಮಾಡುತ್ತಿದ್ದರು. ಒಂದು ಸ್ಮರಣ ಸಂಚಿಕೆಯನ್ನೂ ಪ್ರಕಟಿಸುವುದಕ್ಕೆ ಸಿದ್ಧತೆಗಳು ನಡೆಯುತ್ತಿದ್ದವು.

ಈ ಸ್ಮರಣ ಸಂಚಿಕೆಗೆ ಸಂಪಾದಕರು ನನಗೆ ಒಂದು ಲೇಖನ ಬರೆದುಕೊಡುವಂತೆ ಪದೇ-ಪದೇ ಒತ್ತಾಯಿಸಿದರು. ನಾನು ಕರುಣಾಧರ್ ಬರುವಾರವರ ಜೀವನ ಮತ್ತು ಅವರ ಕಾರ್ಯಕ್ಷೇತ್ರದ ಬಗ್ಗೆ ಲೇಖನ ಬರೆಯಬೇಕಿತ್ತು. ಈ ಬಗ್ಗೆ ಬರೆಯಲು ನನಗೆ ಧೈರ್ಯವಾಗುತ್ತಿರಲಿಲ್ಲ. ಯಾಕೆಂದರೆ ವಿಷಯಗಳನ್ನು ಎಲ್ಲಿಂದ ಸಂಗ್ರಹಿಸುವುದೆಂದು ತಿಳಿಯುತ್ತಿರಲಿಲ್ಲ. ಕೈ ಒಡ್ಡುತ್ತಲೇ ಪುಸ್ತಕಗಳು ಸಿಗಲು ಕರುಣಾಧರ್ ಬರುವಾ ಅವರು ಗಾಂಧೀಜಿ, ಶ್ರೀಮಂತ್ ಶಂಕರದೇವ್ ಅಥವಾ ಬೆಜಬರುವಾ ಅವರಂತೆ ಜನಪ್ರಿಯ ವ್ಯಕ್ತಿಗಳಾಗಿರಲಿಲ್ಲ ಅಥವಾ ಅವರ ಬಗ್ಗೆ ಎಲ್ಲಿಂದಲಾದರೂ ವಿಷಯ ಸಂಗ್ರಹಿಸುವಂಥ ವ್ಯಕ್ತಿಗಳೂ ಆಗಿರಲಿಲ್ಲ. ಕರುಣಾಧರ್ ಬರುವಾರವರ ಬಗ್ಗೆ ಯಾರೂ ಸಹ ಏನನ್ನೂ ಬರೆದಿಲ್ಲ. ಒಂದು ವೇಳೆ ನಮ್ಮ ಕಾಲೇಜಿನ ಸ್ಥಾಪನೆಯು ಅವರು ಕೊಟ್ಟ ಜಾಗದಲ್ಲಾಗದಿದ್ದರೆ ನಾನು ಸಹ ಅವರ ಬಗ್ಗೆ ಬರೆಯಲು ಬಾಧ್ಯನಾಗುತ್ತಿರಲಿಲ್ಲ . ಬೈಕುಂಠ ಬರುವಾರವರು ಕೆಲವು ಮಾಹಿತಿಗಳನ್ನು ಕೊಟ್ಟಿದ್ದಾರೆ, ಆದರೆ ಅದು ಸಾಲದಾಗುತ್ತದೆ.

ಸಂಪಾದಕರು ತುಂಬಾ ದಕ್ಷರು, ಸದಾ ಕೆಲಸದಲ್ಲಿ ತೊಡಗಿಸಿಕೊಂಡಿರುವವರು. ಅವರು ಮೊದ-ಮೊದಲು ನನಗೆ ಬೇಗ ಬರೆದುಕೊಡುವಂತೆ ಹೇಳುತ್ತಿದ್ದರು, ಅದರೆ ಸಮಾರಂಭ ಸಮೀಪಿಸುತ್ತಿರುವಂತೆ ಮತ್ತೂ ಆಗ್ರಹಿಸಿದರು. ನಾನೂ ಸಹ ವಿಧಿ ಇಲ್ಲದೆ ಈಗೀಗ ಕರುಣಾಧರ್ ಬರುವಾರವರ ಬಗ್ಗೆಯೇ ಯೋಚಿಸುತ್ತಿದ್ದೆ. ಯಾರೇ ನನ್ನೆದುರು ಸುಳಿದರೂ ಅವರನ್ನು ಅನಾಯಾಸವಾಗಿ ಪ್ರಶ್ನಿಸುತ್ತಿದ್ದೆ:

"ನಿಮಗೆ ಕರುಣಾಧರ್ ಬರುವಾ ಬಗ್ಗೆ ಏನಾದರೂ ವಿಷಯ ತಿಳಿದಿದೆಯೇ?"
"ಹೂಂ, ಅವರು ತುಂಬಾ ಶ್ರೀಮಂತರಾಗಿದ್ದರು. ಬೇಳೆ-ಕಾಳುಗಳ ಮಿಲ್‌ಗಳು, ಇಟ್ಟಿಗೆ ಕಾರ್ಖಾನೆ, ಗದ್ದೆ-ಜಮೀನುಗಳ ಮಾಲೀಕರು..." "ಹೌದೌದು ಅವರಿಗೆ ತುಂಬಾ

ಆಸ್ತಿಯಿತ್ತು. ಅವರ ಬಾಲ್ಯದ ಬಗ್ಗೆ ಸ್ವಲ್ಪ ಹೇಳಬಹುದು. ಅವರು ಈ ಊರಿನಲ್ಲಿ ಹುಟ್ಟಿರಲಿಲ್ಲ. ಅವರು ಕಾಮರೂಪದ ಒಂದು ಹಳ್ಳಿಯಿಂದ ಬಂದಿದ್ದರು. ಅವರ ಬಾಲ್ಯ ಹಳ್ಳಿಯೊಂದರಲ್ಲಿ ಕಳೆದಿತ್ತು."

"ಆ ಹಳ್ಳಿ ಹೆಸರೇನು?"

"ಅದು ನನಗೆ ಗೊತ್ತಿಲ್ಲ . ಆದರೆ ನೀವು ಒಬ್ಬರಿಂದ ಈ ಮಾಹಿತಿ ಪಡೆಯಬಹುದು. ಕಾಲೇಜಿನ ಪೂರ್ವ ದಿಕ್ಕಿಗೆ ಸುಮಾರು ಎರಡು ಕಿ.ಮೀ. ದೂರದಲ್ಲಿ ಮೂರು ದಾರಿಗಳಿರುವ ಒಂದು ಸರ್ಕಲ್ ಇದೆ. ಅಲ್ಲಿ ಸೈಕಲ್ ರಿಪೇರಿ ಮರುವ ಅಂಗಡಿಯೊಂದು ಸಿಗುತ್ತದೆ. ಅದು ಮೋಹನನ ಅಂಗಡಿ. ಅದರ ಹಿಂದಿದ್ದ ಗುಡಿಸಿಲಿನಲ್ಲಿ ಒಬ್ಬ ಹಿರಿಯ ವೃದ್ಧ ವಾಸಿಸಿತ್ತಾನೆ, ಅವನಿಗೆ ಸಾಕಷ್ಟು ವಯಸ್ಸಾಗಿದ್ದು ಅವನ ಸೊಂಟ ಬಗ್ಗಿದೆ."

"ಅವನ ಹೆಸರೇನು?"



"ಹೆಸರು..."

"ಹೆಸರೇನೂ ಅಂತ ಗೊತ್ತಿಲ್ಲ. ಆದರೆ ಅವನು ಮೋಹನನ ಅಪ್ಪ ಎಂಬುದು ಎಲ್ಲರಿಗೂ ಗೊತ್ತಿದೆ. ತಾನು ಕರುಣಾಧರ್ ಬದುವಾರವರ ಕಡೆಯವನು. ತಾವಿಬ್ಬರು ಇಲ್ಲಿಗೆ ಒಟ್ಟಿಗೆ ಬಂದಿದ್ದೆವು ಎಂದು ಅವನು ಹೇಳಿಕೊಳ್ಳುತ್ತಾನೆ. ಅವನಿಂದ ಕೆಲವು ವಿಷಯಗಳು ಸಿಗಬಹುದು."

"ಸರಿ, ಥ್ಯಾಂಕ್ಸ್!"

ನಾನು ಅವನ ಬಳಿಗೆ ಹೋಗಿ ವಿಚಾರಿಸಿದೆ.

"ನೋಡಪ್ಪ, ನಾವಿಬ್ಬರು ಒಂದೇ ಹಳ್ಳಿಯವರಾಗಿದ್ದೆವು. ಇಬ್ಬರು ಒಟ್ಟಿಗೆ ಮಾವಿನ ಹಣ್ಣು, ನೇರಳೆ ಹಣ್ಣು, ಬೇಲದ ಹಣ್ಣು, ಹುಣಸೆ ಹಣ್ಣು–ಇವುಗಳನ್ನೆಲ್ಲಾ ಹುಡುಕ್ತಾ ಹೋಗ್ತಿದ್ದೆವು. ಮೀನನ್ನೂ ಹಿಡೀತಿದ್ದೆವು, ಭಾವೋನಾ [ಅಸ್ಸಾಮಿ ನಾಟಕ] ನೋಡ್ತಿದ್ದೆವು, ನದಿಯಲ್ಲಿ ಈಜುತ್ತಿದ್ದೆವು. ನಮ್ಮಿಬ್ಬರ ಜೋಡಿ ಚೆನ್ನಾಗಿತ್ತು." ಎಂದ ವೃದ್ಧ.

"ನೀವಿಬ್ಬರು ನಿಮ್ಮ ಹಳ್ಳಿಯ ಶಾಲೆಯಲ್ಲಿ ಓದುತ್ತಿದ್ದಿರ?"

"ಇಲ್ಲಪ್ಪ ಇಲ್ಲ. ನಿಜ ಹೇಳ್ತೀನಿ. ಹಳ್ಳಿಯಿಂದ ಎರಡು ಮೈಲಿ ದೂರದಲ್ಲಿ ಒಂದು ಶಾಲೆಯಿತ್ತು. ಅಲ್ಲಿ ನಾವು ಎರಡನೆ ತರಗತಿವರೆಗೆ ಮಾತ್ರ ಓದಿದ್ದೆವು. ಆಮೇಲೆ ಶಾಲೆಗೆ ಹೋಗುವುದನ್ನು ಬಿಟ್ಟು ಬಿಟ್ಟೆವು."

"ಆಮೇಲೆ ಏನು ಮಾಡಿದಿರಿ?"

"ಆಮೇಲೆ ಇಬ್ಬರು ಸೇರಿ ದನಗಳನ್ನು ಮೇಯಿಸುವ ಕೆಲಸ ಮಾಡಿದೆವು."

"ಏನೆಂದಿರಿ?"

"ದನಗಳನ್ನು ಮೇಯಿಸುತ್ತಿದ್ದೆವು."

"ದನಗಳನ್ನು...?"

"ನಿನಗೆ ನನ್ನಷ್ಟು ಸಹ ಕಿವಿ ಕೇಳಿಸಲ್ಲ ಅಂತ ಅನ್ನಿಸುತ್ತೆ." ವೃದ್ಧ ಈಗ ಕಿರುಚಿ ಹೇಳಿದ. "ನೋಡಪ್ಪ, ನಾನು ಮತ್ತು ಕರುಣಾ ಒಟ್ಟಿಗೆ ದನಗಳನ್ನು ಮೇಯಿಸುತ್ತಿದ್ದೆವು."

ನಾನು ನೋಟ್ ಬುಕ್‌ನಲ್ಲಿ ಗುರುತು ಹಾಕಿಕೊಳ್ಳುವುದನ್ನು ಬಿಟ್ಟು ಅವನನ್ನೇ ನೋಡುತ್ತಾ ಕೂತೆ. ಇದು ತಮಾಷೆಯೋ, ನಿಜವೋ ಅಥವಾ ಭ್ರಮೆಯೋ ತಿಳಿಯದಾಯಿತು.

"ನೀವಿಬ್ಬರೂ ದನಗಳನ್ನು ಮೇಯಿಸುತ್ತಿದ್ದಿರ?" ನಾನು ಸಂಕೋಚದಿಂದ ಮತ್ತೆ ಕೇಳಿದೆ.

"ಹೌದಪ್ಪ, ನಾವಿಬ್ಬರು ಒಟ್ಟಿಗೆ ದನಗಳನ್ನು ಮೇಯಿಸುತ್ತಿದ್ದೆವು. ಕರುಣಾನ ಮನೆಯಲ್ಲಿ ದನವೂ ಇರಲಿಲ್ಲ. ನಾವಿಬ್ಬರು ನಮ್ಮ ಮನೆಯ ಹಸುವಿನೊಂದಿಗೆ ಇನ್ನಿತರರ ಹಸುಗಳನ್ನೂ

ಹೊಡೆದುಕೊಂಡು ಹೋಗಿ ಮೇಯಿಸುತ್ತಿದೆವು. ಪ್ರತಿಯೊಂದು ಹಸು ಮೇಯಿಸಿದ್ದಕ್ಕೆ ನಮಗೆ ಒಂದೊಂದು ಬುಟ್ಟಿ ಅಕ್ಕಿ-ಕಾಳುಗಳು ಸಿಗುತ್ತಿತ್ತು."

"ಒಂದು ತಿಂಗಳಿಗೆ ಸಿಕ್ತಿತ್ತ?"

"ಇಲ್ಲಪ್ಪ, ಒಂದು ವರ್ಷಕ್ಕೆ ಸಿಕ್ತಿತ್ತು. ಅದನ್ನು ಇಬ್ಬರೂ ಹಂಚಿಕೊಳ್ಳುತ್ತಿದ್ದೆವು . ನಾವಿಬ್ಬರು ಹೀಗೇ ಬೆಳೆದವು."

"ನೀವಿಬ್ಬರು ಯುವಕರಾಗಿದ್ದಾಗಲೂ ಇದೇ ಕೆಲಸ ಮಾಡುತ್ತಿದ್ದಿರ?"

ನನ್ನ ಈ ಮಾತಿಗೆ ವೃದ್ಧ ನಗುತ್ತಾ ಹೇಳಿದ, "ನಾನು ನನ್ನ ಯೌವನದಲ್ಲೂ ಅದೇ ಕೆಲಸವನ್ನು ಮಾಡಿದ್ದರೆ ಇವತ್ತು ನಾನು ನಿನಗಿಲ್ಲಿ ಸಿಗುತ್ತಿರಲಿಲ್ಲ. ನೀನು ಇವತ್ತು ಕರುಣಾಧರನ ಬಗ್ಗೆಯೂ ಬರೆಯುತ್ತಿರಲಿಲ್ಲ. ನಾವು ಆಗಲೇ ಅಲ್ಲಿಂದ ಹೊರಟು ಬಂದೆವಲ್ಲ? ಇನ್ನೊಬ್ಬರ ಹಸುಗಳನ್ನು ಮೇಯಿಸುವವರ ಬಗ್ಗೆ ಯಾರಾದರು ಬರೆದಿದ್ದನ್ನು ನೀನು ಕೇಳಿದ್ದೀಯ? ನಿಜ ಹೇಳಪ್ಪ. ನಾನು ಏನಾದರು ತಪ್ಪಾಗಿ ಹೇಳಿದ್ನ?"

" ಇಲ್ಲ-ಇಲ್ಲ, ನೀವು ಸರಿಯಾಗಿಯೇ ಹೇಳಿದಿರಿ. ಹೇಳಿ, ಆಮೇಲೆ ಏನಾಯ್ತು?"

ಈಗ ಅವನು ಸ್ವಲ್ಪ ಮೆಲ್ಲನೆ ಹೇಳಲಾರಂಭಿಸಿದ. ಈಗ್ಗೆ ಸ್ವಲ್ಪ ಹೊತ್ತಿಗೆ ಮೊದಲು ಅವನು ನನ್ನನ್ನು ಕಿವುಡನೆಂದು ತಿಳಿದಿದ್ದನ್ನು ಮರೆತಿದ್ದ – "ನಿನಗೆ ಪ್ರಾಯದ ವಿಷಯಗಳು ಗೊತ್ತೇ ಇದೆಯಲ್ಲ? ಮನೆಯಲ್ಲಿರಲು ಮನಸ್ಸಿರಲಿಲ್ಲ . ಮನಸ್ಸು ಅತ್ತ-ಇತ್ತ ಅಲೆಯುತ್ತಿತ್ತು. ಎಲ್ಲಿಗೆ ಹೋಗುವುದು? ಏನು ಮಾಡುವುದು? ಹೀಗಿರುವಾಗ ಅದೊಂದು ದಿನ ಕೈಯಲ್ಲಿ ಬಿಡಿಗಾಸು ಇಲ್ಲದಿದ್ದರೂ, ಇಬ್ಬರೂ ರೈಲು ಹತ್ತಿದೆವು. ನಮ್ಮ ಬಳಿ ನಾವು ಉಟ್ಟ ಬಟ್ಟೆಗಳನ್ನಲ್ಲದೆ ಬೇರೆ ಬಟ್ಟೆಗಳಿರಲಿಲ್ಲ. ಹೆಗಲ ಮೇಲೆ ಒಂದು ಟವಲ್. ಅದು ತುಂಬಾ ಉಪಯೋಗಕ್ಕೆ ಬರುತ್ತಿತ್ತು. ಅದನ್ನು ಉಡಲೂಬಹುದು, ಕೈ-ಕಾಲುಗಳನ್ನು ಒರೆಸಿಕೊಳ್ಳಲೂಬಹುದು. ಸೊಳ್ಳೆಗಳನ್ನೂ ಓಡಿಸಬಹುದು, ಸೊಂಟಕ್ಕೆ ಬಿಗಿಯಾಗಿ ಬಿಗಿದುಕೊಳ್ಳಲೂಬಹುದು. ಆಗ ಕಲ್ಲಿದ್ದಲಿನಿಂದ ರೈಲು ಓಡುತ್ತಿತ್ತು. ಇಬ್ಬರೂ ಕಲ್ಲಿದ್ದಲಿನ ಹೊಗೆಯನ್ನು ಮೋಡಗಳೊಂದಿಗೆ ನೋಡುತ್ತಾ ಬಂದು, ಇದೇ ಸ್ಟೇಷನ್‌ನಲ್ಲಿ ಇಳಿದೆವು."

"ಆಗ ಈ ಸ್ಥಳ ಹೇಗಿತ್ತು?"

"ಹೇಗಿರುತ್ತಪ್ಪಾ, ಆಗ ಇದು ದಟ್ಟ ಕಾಡು ಮತ್ತು ಬಯಲು ಪ್ರದೇಶಗಳಿಂದ ಆವರಿಸಿತ್ತು. ಇಲ್ಲಿ ಬೇಳೆ-ಕಾಳಿನ ಒಂದು ಮಿಲ್ ಸಹ ಇತ್ತು. ಆದರೆ ಇಲ್ಲಿಯ ಬಹಳಷ್ಟು ಜನ ರೈತರಾಗಿದ್ದರು. ಎಲ್ಲರ ಮನೆಯಲ್ಲಿ ಹಸು, ಕುರಿ ಮತ್ತು ಬಾತುಕೋಳಿಗಳಿದ್ದವು. ಆದರೆ ನಾವಿಬ್ಬರು ಕೂಡಿಕೊಂಡು ಏನು ಮಾಡಿದೆವು ಗೊತ್ತೆ? ಪ್ರತಿ ಮನೆಯಿಂದ ಎರಡು ಬಿಲ್ಲೆಗೆ ಹಾಲು ಖರೀದಿಸಿ, ಅದನ್ನು ಸ್ಟೇಷನ್‌ಗೆ ಒಯ್ದು ಸರ್ಕಾರಿ ಅಧಿಕಾರಿಗಳ ಮನೆಗೆ ಹೋಗಿ ಮೂರು ಬಿಲ್ಲೆಗೆ ಮಾರುತ್ತಿದ್ದೆವು."

"ನೀವಿಬ್ಬರೂ ಮಾರುತ್ತಿದ್ದಿರ?"

"ನೋಡಪ್ಪ, ನೀನು ಹರೆಯದಲ್ಲಿಯೇ ಕಿವುಡನಾದೆ ಅಂತ ಅನ್ನಿಸುತ್ತದೆ. ಒಂದ್ಸಲ ಹೇಳಿದರೆ ನಿನಗೆ ಕೇಳಿಸುವುದಿಲ್ವ? ತಗೊಂಡು ಏನು ಮಾಡ್ತೀಯ, ಎಲ್ಲಾ ದೇವರಿಚ್ಛೆ, ಕೆಲವರಿಗೆ ಕಿವಿ ಕೇಳಿಸಲ್ಲ, ಕೆಲವರಿಗೆ ಕೂಗಿ ಹೇಳಬೇಕು ... ಎಲ್ಲಾ ನಮ್ಮ ಕೈಯಲ್ಲಿಲ್ಲ. ನೀನು ತಪ್ಪು ತಿಳೀಬೇಡ. ನಾನು ಬೈಯುತ್ತಿಲ್ಲ. ಸರಿ, ನಾನಿನ್ನು ಗಟ್ಟಿಯಾಗಿ ಮಾತಾಡ್ತೀನಿ. ನೀನು ಬರೆದುಕೋ...

"ನಾವಿಬ್ಬರು ಅಂದರೆ ಕರುಣಾ ಬರುವಾ ಮತ್ತು ನಾನು... ಕೇಳ್ತಿದ್ದೀಯಲ್ಲ... ನಾವಿಬ್ಬರು ಮಣ್ಣಿನ ಕೊಡದಲ್ಲಿ ಹಾಲು ತುಂಬಿಕೊಂಡು ಅದನ್ನು ಹೆಗಲ ಮೇಲೆ ಹೊತ್ತು,ಹಾಲು ಮಾರುತ್ತಿದ್ದೆವು. ಕೇಳ್ತಿದ್ದೀಯಲ್ಲ ? "

"ಕೇಳ್ತಿದ್ದೀನಿ. ಆಮೇಲೆ ಏನಾಯ್ತು?"

ವೃದ್ಧ ಇದ್ದಕ್ಕಿದ್ದಂತೆ ಮೌನ ವಹಿಸಿದ. ಅವನ ಮುಖ ಕಿಲಕಿಲನೆ ನಗುವ ಮಗುವಿನಂತೆ ಕಂಗೊಳಿಸಿತು. ಅವನು ಬಹುಶಃ ಗತಿಸಿದ ಸಂಗತಿಯನ್ನು ನೆನಪಿಸಿಕೊಂಡು ಸಂತೋಷಪಡುತ್ತಿದ್ದ.

"ಆಮೇಲೆ ಏನಾಯ್ತು, ಹೇಳಿ?"

"ಏನು ಹೇಳಲಿ?" ವೃದ್ಧ ಮೌನವನ್ನು ಮುರಿಯುತ್ತಾ ಹೇಳಿದ. "ಕ್ರಮೇಣ ನಮ್ಮಿಬ್ಬರ ಭೇಟಿ ಕಡಿಮೆಯಾಯಿತು. ಇಬ್ಬರೂ ನಮ್ಮ-ನಮ್ಮ ಕೆಲಸ ಮತ್ತು ಸಮಸ್ಯೆಗಳಲ್ಲಿ ಕಳೆದುಹೋದೆವು."

"ಓಹೋ ! ಕರುಣಾಧರ್ ಬರುವಾ ಆಮೇಲೆ ಏನು ಕೆಲಸ ಮಾಡುತ್ತಿದ್ದರು?"

"ಕೆಲಸ? ಅವನು ಎಷ್ಟು ಶ್ರೀಮಂತನಾದನೆಂದರೆ, ಅವನಿಗೆ ಚಿಕ್ಕ-ಪುಟ್ಟ ಕೆಲಸಗಳು ಕಣ್ಣಿಗೇ ಕಾಣಿಸುತ್ತಿರಲಿಲ್ಲ."



"ಅದೇನು ಅಂತ ಬಿಡಿಸಿ ಹೇಳ್ತೀರ?"

ಈಗ ವೃದ್ಧನ ಧ್ವನಿ ಮತ್ತೆ ಮಂದವಾಯಿತು. ಬಹುಶಃ ಈ ಬಾರಿಯೂ ಅವನು ಮರೆತಿದ್ದ, ನಾನು ಅವನ ಪಾಲಿಗೆ ಕಿವುಡನಾಗಿದ್ದೆ. ಅವನು ಮತ್ತೆ ಮೆಲ್ಲನೆ ಹೇಳಿದ–

"ಅವನು ಅದು ಹೇಗೆ ಶ್ರೀಮಂತನಾದನೋ, ಗೊತ್ತೇ ಆಗಲಿಲ್ಲ. ಬಹುಶಃ ದೇವರ ಕೃಪೆಯಿರಬೇಕು. ಇದರಲ್ಲಿ ಮನುಷ್ಯನ ಕೈವಾಡವೇನೂ ಇಲ್ಲವಲ್ಲ..."

"ಮತ್ತೆ ನೀವು?"

"ಇಲ್ಲಪ್ಪ, ನಾನು ಶ್ರೀಮಂತನಾಗಲು ಸಾಧ್ಯವಾಗಲಿಲ್ಲ. ಅದೇ ಹಾಲು ಮಾರಾಟ ಮಾಡಿ ಜೀವನ ಕಳೆದೆ. ಈಗಂತೂ ವಯಸ್ಸಾಗಿದೆ. ಕೈ-ಕಾಲುಗಳು ಕೆಲಸ ಮಾಡಲ್ಲ. ಈಗ ನಾನು ಕೂತು ಉಣ್ಣುವ ಭಕ್ತನಾಗಿದ್ದೇನೆ. ಆದರೂ ಒಮ್ಮೊಮ್ಮೆ ಕನಸಿನಲ್ಲಿ ಹೆಗಲ ಮೇಲೆ ಹಾಲಿನ ಕಾವಡಿಯೊಂದಿಗೆ ಅವನನ್ನೂ ನೋಡ್ತೀನಿ."

"ಯಾರನ್ನು ನೋಡ್ತೀರ?"

"ಆ ಕರುಣಾನನ್ನು, ನಿನ್ನ ಕರುಣಾಧರ ಬರುವಾನನ್ನು ನೋಡ್ತೀನಿ. ಅವನ ಹೆಗಲ ಮೇಲೂ ಮಣ್ಣಿನ ಎರಡು ಹಾಲು ತುಂಬಿದ ಮಡಿಕೆಗಳಿರುತ್ತವೆ. ಆ ಮಡಿಕೆಗಳು ಬಾಳೆ ಎಲೆಗಳಿಂದ ಮುಚ್ಚಿರುತ್ತವೆ." ಹೀಗೆಂದು ವೃದ್ಧ ಗಟ್ಟಿಯಾಗಿ ನಕ್ಕ.

ಸರಿ. ಕರುಣಾಧರ್ ಬರುವಾರವರ ಸನ್ನಿಧಿಗೆ ಬಂದ ವ್ಯಕ್ತಿಗಳು ಇನ್ಯಾರಿದ್ದಾರೆ? ಅಂದರೆ ಅವರು ಇಲ್ಲಿಗೆ ಬಂದ ಮೇಲೆ..."

"ಅಂಥವರಲ್ಲಿ ಈಗ ಹೆಚ್ಚು ಜನ ಬದುಕಿಲ್ಲ. ಈಗ ನಾನೊಬ್ಬನು ಇದ್ದೀನಿ. ನನ್ನ ಉಸಿರೂ ಉಡುಗುತ್ತಿದೆ. ಈಗ ಆ ಕಾಲದವರನ್ನು ಭೇಟಿಯಾಗುವುದು ಕಷ್ಟವೂ ಹೌದು."

"ಒಬ್ಬರೂ ಇಲ್ವ?"

ವೃದ್ಧ ನನ್ನ ಪ್ರಶ್ನೆ ಕೇಳಿ ಕೆಲವು ಕ್ಷಣ ಮೌನ ವಹಿಸಿ ಕಡೆಗೆ ಹೇಳಿದ, "ಒಬ್ಬನ ಬಗ್ಗೆ ನೆನಪಾಯ್ತು, ನೋಡು. ಅವನು ಕರುಣಾನ ಚೀಲ ಹಿಡಿದುಕೊಳ್ಳುವ ವ್ಯಕ್ತಿಯಾಗಿದ್ದ. ಕರುಣಾ ಪೇಟೆಗೆ ಹೊರಟಾಗ ಅವನು ಅವನನ್ನು ಹಿಂಬಾಲಿಸಿ ಹೋಗುತ್ತಿದ್ದ. ಕರುಣಾ ಕೊಂಡದ್ದನ್ನೆಲ್ಲಾ ಚೀಲದೊಳಗೆ ತುಂಬಿ ಮನೆಗೆ ತರುತ್ತಿದ್ದ. ಅವನ ಹೆಸರು ಬೈಹಾಗು ಅಂತ... ಅವನ ಮನೆ ಇಟ್ಟಿಗೆ ಕುಲಿಮೆ ಹಿಂದಿತ್ತು. ಅವನಿಗೆ ಕರುಣಾ ಒಂದು ಮನೆ ಕಟ್ಟಿಕೊಳ್ಳಲು ಜಾಗವನ್ನೂ ಕೊಟ್ಟಿದ್ದ. ದೇವರ ದಯೆಯಿಂದ ಆ ಮನುಷ್ಯ ಇನ್ನೂ ಬದುಕಿದ್ದರೆ ನೀನು ಅವನನ್ನು ಭೇಟಿಯಾಗಬಹುದು."

ನಾನು ವೃದ್ಧನಿಗೆ ಧನ್ಯವಾದ ಅರ್ಪಿಸಿ ಮರಳಿ ಬಂದೆ. ಮನಸ್ಸಿನಲ್ಲಿ ಅನುಮಾನಗಳು ತುಂಬಿದ್ದವು. ರಸ್ತೆ ಉದ್ದಕ್ಕೂ, ಈ ವಿಷಯಗಳನ್ನೆಲ್ಲಾ ಹೇಗೆ ಬರೆಯುವುದೆಂದು ಯೋಚಿಸಿದೆ. ವಾಸ್ತವಿಕತೆಯನ್ನು ಬದಿಗಿಟ್ಟು, 'ದಿವಂಗತ ಬರುವಾ ಅವರು ಕಠಿಣ ಶ್ರಮದಿಂದ ಮೇಲೆ ಬಂದ ಓರ್ವ ಪ್ರತಿಷ್ಠಿತ ವ್ಯಕ್ತಿಯಾಗಿದ್ದರು' ಎಂದು ಬರೆಯಬೇಕಾಗುವುದು. ಉದಾಹರಣೆಗೆ ಒಂದೆರಡು ಘಟನೆಗಳನ್ನು ಉಲ್ಲೇಖಿಸುವುದರಿಂದ ಲೇಖನಕ್ಕೆ ಜೀವ ಬರುತ್ತದೆ. ಆದರೆ ನಾನು ಹಾಗೆ ಮಾಡಲಾರೆ. ಇದು ಬೈಕುಂಠ ಬರುವಾ ಅವರಿಗೆ ಸರಿಯೆನಿಸುವುದಿಲ್ಲ. ಒಂದುವೇಳೆ ಬೇರೆ ವಿಷಯಗಳು ಲಭ್ಯವಾದರೆ ಅದರ ವಿವರಣೆಯನ್ನು ಮತ್ತು

ಉದಾಹರಣೆಯಾಗಿ ಕೊಡಬಹುದು.

**ಬೈಹಾಗು ಹುಡುಕಾಟದಲ್ಲಿ**

ಬೈಹಾಗುವನ್ನು ಹುಡುಕುತ್ತಾ ಅವನ ಮಗನ ಮನೆಗೇ ಹೋದೆ. ಅವನು ಅಂಗಳದಲ್ಲಿ ಚಾಪೆ ಹಾಸಿ ಮಲಗಿದ್ದ. ನಡುವಯಸ್ಸಿನ ಈ ವ್ಯಕ್ತಿ ಬಗ್ಗೆ ಹೇಳುವಂಥದ್ದೇನೂ ಉಳಿದಿರಲಿಲ್ಲ. ಬಹುಶಃ ಹೆಚ್ಚು ಮದ್ಯ ಸೇವನೆ ಮತ್ತು ಶ್ರಮದಿಂದಾಗಿಯೇ ಹೀಗಿದ್ದ. ಅವನು ಬಾಯಿ ಬಿಡುತ್ತಲೇ ದುರ್ವಾಸನೆ ನನ್ನ ಮೂಗಿಗೆ ಬಡಿಯಿತು.

“ಅಪ್ಪನ ಹತ್ರ ಏನು ಕೆಲ್ಸವಿದೆ? ಸಾಲ ತಗೊಂಡಿದ್ರ?”

“ಇಲ್ಲ. ನಿಮ್ಮ ತಂದೆ ಕರುಣಾಧರ್ ಬರುವಾರ ಮನೆಯಲ್ಲಿ ಕೆಲಸ ಮಾಡ್ತಿದ್ದರಲ್ಲ? ಆ ಬಗ್ಗೆ ತಿಳಿಯಲು ಬಂದಿದ್ದೇನೆ.”

“ಸರಿ, ನಾಳೆ ಅವರನ್ನು ಕರ್‍ಕೊಂಡು ಬರ್‍ತೀನಿ.”

“ಇವತ್ತೇ...”

“ಇವತ್ತು...” ಆ ವ್ಯಕ್ತಿ ಆಕಾಶ ಮತ್ತು ಸುತ್ತಮುತ್ತಲಿನ ಮರಗಳನ್ನು ನೋಡುತ್ತಾ ಹೇಳಿದ–

“ಈಗ ಸಂಜೆಯಾಗಿದೆ. ಅಪ್ಪ ಹಾಸಿಗೆಯಲ್ಲೇ ಮಲಗಿರ್‍ತಾರೆ. ಅವರಿಗೆ ಕಣ್ಣು ಕಾಣಿಸಲ್ಲ. ಮನೆಯಲ್ಲಿ ಯಾವ ಅನುಕೂಲವೂ ಇಲ್ಲ.”

ಈ ಮನುಷ್ಯ ಕಾಫಿ–ಚಹಾಕ್ಕಾಗಿಯೇ ಹೀಗೆ ಮಾತನಾಡುತ್ತಿದ್ದಾನೆಂದು ನನಗನ್ನಿಸಿತು .ಹೀಗಾಗಿ ನಾನು, “ನನಗೇನೂ ಅನುಕೂಲ ಬೇಡ. ನಾನು ಅವರ ಜೊತೆ ಸ್ವಲ್ಪ ಮಾತನಾಡಬೇಕು, ಅಷ್ಟೆ.” ಎಂದೆ.

“ಮನೆಯಲ್ಲಿ ದೀಪ ಹಚ್ಚಲು ಕಡೇ ಪಕ್ಷ ಸೀಮೆಯೆಣ್ಣೆಯಾದರೂ ಬೇಕಲ್ವ ? ಅದಕ್ಕೆ ನಾಳೆ ಬೆಳಿಗ್ಗೆ ಕರ್‍ಕೊಂಡು ಬರ್‍ತೀನಿ.”

“ಸರಿ. ನೀವು ಕರುಣಾಧರ್ ಬರುವಾ ಅವರನ್ನು ನೋಡಿದ್ದಿರ?”

“ನೋಡಿದ್ದೆ. ನಾನಾಗ ಚಿಕ್ಕವನಿದ್ದೆ. ನಾನು ಸಹ ಅಪ್ಪನ ಹಿಂದಿಂದೆ ಹೋಗ್ತಿದ್ದೆ. ಅಪ್ಪ ಕರುಣಾ ಬರುವಾರವರ ಹಿಂದಿಂದೆ ಹೋಗ್ತಿದ್ದರು. ಅಶ್ವತ್ಥ ಮರದ ಬಳಿಗೆ ಬಂದಾಗ ಅಲ್ಲಿಯೇ ಇಬ್ಬರು

ನಿಲ್ಲುತ್ತಿದ್ದರು. ಯಾಕೆಂದ್ರೆ ಅಲ್ಲಿ ಮೀನು ಮಾರುವವರು ಕೂರುತ್ತಿದ್ದರು. ಕರುಣಾಧರ್ ಬರುವಾರವರು ದೊಡ್ಡ ಮೀನನ್ನು ಖರೀದಿಸುತ್ತಿದ್ದರು, ಆದ್ರೆ ಅವರು ಆ ಮೀನನ್ನು ಮುಟ್ಟುತ್ತಿರಲಿಲ್ಲ.”

“ಯಾಕೆ?”

“ಕೈ ವಾಸ್ನೆ ಆಗುತ್ತೆ ಅಂತ... ಕಾಲಿನಿಂದಲೇ ಸನ್ನೆ ಮಾಡಿ ಅದರ ಬೆಲೆಯನ್ನು ವಿಚಾರಿಸುತ್ತಿದ್ದರು. ಮೀನು ಮತ್ತು ಬೆಲೆ ಹಿಡಿಸಿದರೆ ಅದನ್ನು ತೆಗೆದುಕೊಳ್ಳುತ್ತಿದ್ದರು. ಅಪ್ಪ ಮೀನಿನ ದವಡೆಗೆ ದಾರ ಕಟ್ಟಿ ಅದನ್ನು ಎತ್ತಿಕೊಳ್ಳುತ್ತಿದ್ದರು. ಮೀನಿನ ಬಾಲ ರಸ್ತೆಯದ್ದಕ್ಕೂ ಎಳೆದುಕೊಂಡು ಹೋಗ್ತಿತ್ತು.”

“ನಿಮಗೆ ಅವರ ಮುಖದ ನೆನಪಿದೆಯಾ?”

“ಅವರ ಮುಖವನ್ನು ಮರೆತಿದ್ದೇನೆ. ಅವರ ಕಾಲು ಮಾತ್ರ ನೆನಪಿದೆ. ಅವರು ಕಪ್ಪು ಬಣ್ಣದ ಮೆಟ್ಟು ಹಾಕಿಕೊಳ್ಳುತ್ತಿದ್ದರು.” ಬೈಹಾಗುವಿನ ಮಗ ಈಗ ನಾಚುತ್ತಾ, ತಲೆ ತುರಿಸಿಕೊಳ್ಳುತ್ತಾ ಹೇಳಿದ, “ನನಗೆ ಅಂಥದ್ದೇ ಮೆಟ್ಟನ್ನು ಅಪ್ಪನಿಗೆ ತಂದುಕೊಡುವಂತೆ ಕಾಡ್ತಿದ್ದೆ. ಅದಕ್ಕೆ ಅಪ್ಪನಿಂದ ಸಾಕಷ್ಟು ಒದೆಯನ್ನೂ ತಿಂದಿದ್ದೇನೆ.”

“ನಿನಗೆ ಅವರ ಕಾಲು ಮಾತ್ರ ನೆಲಪಿರೋದು ಅಂತ ಹೇಳಿದೆ, ಅವರ ಚಪ್ಪಲಿ ಸಹ ನಿನಗೆ ನೆನಪಿರುವಂತಿದೆ.” ನಾನು ತಮಾಷೆ ಮಾಡಿದೆ.

“ಹೌದು, ಕರುಣಾಧರ್ ಬರುವಾರವರ ಚಪ್ಪಲಿಗಳು ಮಾತ್ರ ಈಗ ನೆನಪಿವೆ.”

“ನೀನು ಮೀನು ಕೊಳ್ತೀಯೋ, ಇಲ್ವೋ?”



"ಪೋರಿ, ಗರ್ೈ ಮೀನುಗಳನ್ನು ಕೊಳ್ತೀನಿ. ಕೆಲವು ಸಲ ಬಿಹೂ ಮುಂತಾದ ಹಬ್ಬಗಳಲ್ಲಿ ದೊಡ್ಡ ಮೀನುಗಳನ್ನೂ ಕೊಳ್ತೀನಿ. ದೊಡ್ಡ ಮೀನುಗಳನ್ನು ಕೊಳ್ಳುವವನು ದೊಡ್ಡ ಗಿರಾಕಿಯಾಗಿರ್ತಾನೆ."

ಬಹುಶಃ ಮತ್ತಷ್ಟು ವಿಷಯಗಳು ತಿಳಿಯಬಹುದೆಂದು ನಾನು ಅವನೊಂದಿಗೆ ಗೆಳೆತನವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆ .

"ದೊಡ್ಡ ಮೀನುಗಳು ಹೆಚ್ಚಾಗಿ ಹೊರಗಡೆಯಿಂದ ಬರುತ್ತವೆ. ಈಗ ಒಳ್ಳೆಯ ಲೋಕಲ್ ಮೀನುಗಳು ಎಲ್ಲಿ ಸಿಗುತ್ತವೆ?"

ನಡು ವಯಸ್ಸಿನ ಆ ವೃದ್ಧ ಮೆಲ್ಲನೆ ನಕ್ಕು ಹೇಳಿದ, "ನೋಡಿ, ಮೀನುಗಳು ಯಾವುದೇ ಆಗಿರಲಿ, ನಾನು ದೊಡ್ಡ ಮೀನುಗಳನ್ನು ನೋಡಿದಾಗಲೆಲ್ಲಾ ನನಗೆ ಕರುಣಾಧರ ಬರುವಾರವರ ಕಾಲುಗಳು ಎದುರಿಗೆ ಬರುತ್ತವೆ."

"ಕಾಲುಗಳು?"

"ಅವರ ಕಾಲುಗಳು, ಮೆಟ್ಟುಗಳು..." ವೃದ್ಧನ ತುಟಿಗಳಲ್ಲಿ ಕೊಳಕು ನಗುವೊಂದು ಮೂಡಿತ್ತು.

ನಾನು ಕರುಣಾಧರ್ ಬರುವಾರವರ ಬಗ್ಗೆ ಎಂಥೆಂಥ ವಿಷಯಗಳನ್ನು ಕೇಳುತ್ತಿದ್ದೇನೆ! ಒಂದು ಶ್ರದ್ಧಾ-ಪೂರ್ವಕ ಲೇಖನದಲ್ಲಿ ಈ ವಿಷಯಗಳನ್ನು ಪ್ರಸ್ತಾಪಿಸಲು ಸಾಧ್ಯವೇ? ಸಾಧ್ಯವಿಲ್ಲ . ಹಾಗಾದರೆ ಏನು ಬರೆಯುವುದು? ಕಾಲುಗಳಿಗೆ ಕಪ್ಪು ಬಣ್ಣದ ಮೆಟ್ಟುಗಳನ್ನು ಧರಿಸುವ ದಿವಂಗತ ಕರುಣಾಧರ್ ಬರುವಾ ಗಂಭೀರ ವ್ಯಕ್ತಿಗಳೇ ಆಗಿದ್ದರು...

**ಬೈಹಾಗು ಮೂಲಕ ದೊರೆತ ಕಥೆ**

ಬೆಳಿಗ್ಗೆಯೇ ಬೈಹಾಗುವಿನ ಮನೆಗೆ ಹೋದೆ. ಅವನು ಬಿದಿರಿನಿಂದಾದ ಹಾಸಿಗೆಯಲ್ಲಿ ಸತ್ತವನಂತೆ ಮಲಗಿದ್ದಾನೆ. ಮನೆಯೊಳಗೆ ಬೆಳಕಿಲ್ಲ. ಸೀಮೆಯೆಣ್ಣೆಯ ದೀಪವೊಂದು ಹಗಲು ವೇಳೆಯಲ್ಲಿಯೂ ಅಲ್ಲಿಗೆ ಬೇಕೆಂದು ತೋರುತ್ತಿತ್ತು. ಮನೆಯೊಳಗೆ ಪ್ರವೇಶಿಸಿದೊಡನೆ ಕೊಳಕು ವಾಸನೆ ಮೂಗಿಗೆ ಬಡಿಯಿತು. ನಾನು ಹೇಗೋ ಸುಧಾರಿಸಿಕೊಂಡೆ. ಸಿಕ್ಕ ವಿಷಯಗಳನ್ನು ಸಂಗ್ರಹಿಸಿಕೊಂಡು ಆದಷ್ಟು

ಬೇಗ ಇಲ್ಲಿಂದ ಕಾಲು ಕೀಳಬೇಕೆಂದು ಯೋಚಿಸಿ ಮಾತು ಮತ್ತು ಪ್ರಶ್ನೆಗಿಳಿದೆ :

"ನೀವು ಕರುಣಾಧರ್ ಬರುವಾರೊಂದಿಗೆ ತುಂಬಾ ವರ್ಷಗಳನ್ನು ಕಳೆದಿರಿ..."

"ಹಾಂ...ಹಾಂ..."

"ನೀವು ಅವರನ್ನು ತುಂಬಾ ಸಮೀಪದಿಂದ ನೋಡಿದ್ದಿರಿ."

"ಹಾಂ...ಹಾಂ..."

"ಅವರು ಹೇಗಿದ್ದರು?"

"ಹಾಂ...ಹಾಂ..."

ನಾನು ಈಗ ಅವರ ಮಗನನ್ನು ಕೇಳಿದೆ, "ಇವರಿಗೆ ಮಾತನಾಡಲು ಸಾಧ್ಯವಾಗ್ತಿಲ್ವ?"

"ಮಾತಾಡ್ತಾರೆ ...ಇವರು ಹೀಗೇ ಮಲಗಿರ್ತಾರೆ. ಕೆಲವು ಸಲ ರೇಗಿ ನಮಗೇ ಗದರಿಸ್ತಾರೆ. ಇವರು ತಮಗೆ ಖುಷಿಬಂದಂತೆ..."

"ಮತ್ತೆ ಈಗೇನು ಮಾಡೋದು?" ನಾನು ಅಸಹಾಯಕನಾದೆ.

"ಏನು ಮಾಡೋದು, ನಾವೂ ಅವರನ್ನು ಖುಷಿ ಪಡಿಸಲಾರೆವು. ಇನ್ನು ನೀವು ಒಂದು ದಿನದ ಅತಿಥಿಗಳು."

ನನ್ನ ಪ್ರಯತ್ನವನ್ನು ಬಿಡದೆ ನಾನು ಮತ್ತೆ ಪ್ರಶ್ನಿಸಿದೆ. ಅವನು ಪ್ರತಿ ಬಾರಿಯೂ 'ಹಾಂ...ಹಾಂ...' ಎಂದೇ ಹೇಳಿದ.

ನಾನು ನಿರಾಸೆಯಿಂದ ಮರಳಿ ಹೋಗಲು ಬಾಗಿಲೆಡೆಗೆ ಹೋದೆ, ಆಗಲೇ ಆ ಅಂಧ ವೃದ್ಧ ತಡೆ-ತಡೆದು ಹೇಳಿದ, "ಒಂದು ವಿಷಯವಿದೆ."

ನಾನು ಅತೀವ ಉತ್ಸಾಹಗೊಂಡು ಹೊರಳಿ ಕೇಳಿದೆ, "ಹೇಳಿ, ಏನ್ ವಿಷಯ?"

ಅವನು ಬೇಗ-ಬೇಗನೆ ಉಸಿರೆಳೆದುಕೊಂಡ. ಅವನು ಯಾವುದೋ ವಿಷಯಕ್ಕೆ ಉತ್ತೇಜಿತನಾಗಿದ್ದ. ಅವನ ಸ್ವರ ಅಸ್ಪಷ್ಟವಾಗಿತ್ತು. ಆದರೆ ಅವನ ಮಾತು ಅರ್ಥವಾಗುತ್ತಿತ್ತು.

"ಅವನು ಕೊಳ್ಳೆ ಹೊಡೆದಿದ್ದ... ಬೆಳ್ಳಿ-ಬಂಗಾರ, ಹಣವನ್ನು ಕೊಳ್ಳೆ ಹೊಡೆದಿದ್ದ..." ಬೈಹಾಗು ತಡೆ-ತಡೆದು ಹೇಳುತ್ತಿದ್ದ .

"ಏನಂದಿರಿ?"

ಅವನಿಗೆ ನನ್ನ ಪ್ರಶ್ನೆ ಬಹುಶಃ ನೆನಪಿಲ್ಲ. ಅವನು ತನಗೆ ತಾನೇ ಹೇಳಿಕೊಳ್ಳುತ್ತಿದ್ದ, "ರೈಲಿನಲ್ಲಿ ಬೆಳ್ಳಿ-ಬಂಗಾರ..."

"ಏನಂದಿರಿ?"

ಅಲ್ಲಿಗೆ ಬೇಕೆಂದು ತೋರುತ್ತಿತ್ತು. ಮನೆಯೊಳಗೆ ಪ್ರವೇಶಿಸಿದೊಡನೆ ಕೊಳಕು ವಾಸನೆ ಮೂಗಿಗೆ ಬಡಿಯಿತು. ನಾನು ಹೇಗೋ ಸುಧಾರಿಸಿಕೊಂಡೆ. ಸಿಕ್ಕ ವಿಷಯಗಳನ್ನು ಸಂಗ್ರಹಿಸಿಕೊಂಡು ಆದಷ್ಟು "ಅವನು ಸಿಹಿ ತಿಂಡಿ ಮಾರುವವರು, ಹಸುಗಳನ್ನು ಮಾರಿ ರೈಲಿನಲ್ಲಿ ಕೂರುವವರನ್ನು ಕೊಳ್ಳೆ ಹೊಡೆದಿದ್ದ."

" ಯಾಕೆ, ಯಾಕೆ ಕೊಳ್ಳೆ ಹೊಡೆದಿದ್ದರು?" ನಾನು ಕಿರುಚಿ ಪ್ರಶ್ನಿಸಿದೆ.

"ಅವನು ಹೇಳಿದ್ದನ್ನು ಮಾಡದೆ ಬಿಡುತ್ತಿರಲಿಲ್ಲ...ಕೊಳ್ಳೆ ಹೊಡೆದು ಕೈಗೆ ಕೊಡ್ತಿದ್ದ."



"ಅಯ್ಯೋ ದೇವರೇ, ಯಾರಿಗೆ ಕೊಡ್ತಿದ್ದರು?" ನಾನು ಮತ್ತೆ ಕಿರುಚಿದೆ.

"ಕರುಣಾಧರ ಬರುವಾ, ಬಾಯಿ ಬಿಡಬೇಡ ಅಂತ ಹೇಳಿದ್ದ. ನನ್ನ ಜೀವ ಹೋಗ್ತಿಲ್ಲ. ನನ್ನ ಕಾಲುಗಳು ಸಮಾಧಿಯಲ್ಲಿ ಜೋತಾಡುತ್ತಿವೆ, ಆದರೂ ನನ್ನ ಪ್ರಾಣ ಹೋಗ್ತಿಲ್ಲ."

ಬೈಹಾಗುವಿನ ಗಂಟಲು ಗೊರ-ಗೊರ ಎಂದು ಸದ್ದು ಮಾಡಿತು. ನಾನು ಅಸಹಾಯಕನಾಗಿ ಕೇಳುತ್ತಿದ್ದೆ. ಕಡೆಗೆ ಸ್ವಲ್ಪ ಹೊತ್ತು ಅಲ್ಲಿದ್ದು ಹೊರಟು ಬಂದೆ. ಮಗ ರಸ್ತೆಯಲ್ಲಿ ಬರುವಾಗ ಹೇಳಿದ,

"ನೀವು ತಪ್ಪು ತಿಳೀಬೇಡಿ. ಮುದುಕನ ಆರೋಗ್ಯ ತುಂಬಾ ಹದಗೆಟ್ಟಿದೆ. ತುಂಬಾ ವಯಸ್ಸಾಗಿದೆಯಲ್ವಾ? ಅವರ ವಾರಿಗೆಯವರು ಯಾರೂ ಬದುಕಿಲ್ಲ. ಅವಕ್ಕೇ ಬಹುಶಃ ನೊಂದು ಕೆಟ್ಟ-ಕೆಟ್ಟದ್ದಾಗಿ ಮತಾಡ್ತಾರೆ. ಆದ್ರೆ ಒಮ್ಮೊಮ್ಮೆ ಮಾತ್ರ ಮಾತಾಡ್ತಾರೆ. ಹೆಚ್ಚು ಹೊತ್ತು 'ಹಾಂ... ಹಾಂ...ಹಾಂ...' ಅಂತಲೇ ಇರ್ತಾರೆ."

ಟೇಬಲ್ ಮೇಲೆ ಹಾಳೆಗಳು... ಕೈಯಲ್ಲಿ ಪೆನ್ನು... 'ಕೊಳ್ಳೆ ಹೊಡೀತಿದ್ದ... ಕೊಳ್ಳೆ ಹೊಡೆದು ಕೈಗೆ ಕೊಡ್ತಿದ್ದ...' ಎಂಬ ಮಾತುಗಳು... ರೈಲಿನಲ್ಲಿ ಕೊಳ್ಳೆ ಹೊಡೆಯುವ ವರ್ಣನೆ. ಕೃಷ್ಣ ಚಂದರ್ ಅವರ 'ಪೇಶಾವರ್ ಎಕ್ಸ್‌ಪ್ರೆಸ್' ಕಥೆಯಲ್ಲಿ ದೇಶ ವಿಭಜನೆಯ ಭಯಾನಕ ಕ್ಷಣಗಳ ರೆಕಾರ್ಡ್... ನಮ್ಮ ಈ ಮಾರ್ಗದಿಂದ ಪೇಶಾವರ್ ಎಕ್ಸ್‌ಪ್ರೆಸ್ ಸಾಗಿರಲಿಲ್ಲ. ಅಂದರೆ? ಉಳಿದ ರೈಲುಗಳಲ್ಲಿಯೂ ಕೊಳ್ಳೆ-ಸುಲಿಗೆ ನಡೆಯುತ್ತಿತ್ತು. ಅದಕ್ಕೆಲ್ಲಾ ಸಾಕ್ಷಿ ಈ ಅಂಧ ವೃದ್ಧ...

"ಸುಲಿಗೆ-ಕೊಳ್ಳೆ..."

ಅಕಸ್ಮಾತ್ ಪ್ರಶ್ನೆಯೊಂದು ಉದ್ಭವಿಸಿತು. ಪೇಶಾವರ್ ಎಕ್ಸ್‌ಪ್ರೆಸ್‌ನಲ್ಲಿ, ಆ ದೇಶದ ಭಾಗಗಳಿಂದ ಓಡಿಬಂದವರನ್ನೂ ಲೂಟಿ ಮಾಡಲಾಗಿತ್ತು. ಆಗ ಅಲ್ಲಿ ಈ ಅಂಧ, ಬೈಹಾಗು ವೃದ್ಧ ಮತ್ತು ಪೂಜ್ಯ ಕರುಣಾಧರ್ ಬರುವಾ ಸಹ ಇದ್ದರೆ?

ಪಾಪ ಕಾರ್ಯದಿಂದ ಕೊಳೆತ ದೇಹ... ಜೀವ ಹೋಗದ ನೋವು...?

ಇಲ್ಲ-ಇಲ್ಲ. ಇದನ್ನೆಲ್ಲಾ ಯೋಚಿಸಲು ಸಮಯವಿಲ್ಲ. ಆದಷ್ಟು ಬೇಗ ಲೇಖನವನ್ನು ಬರೆದು ಮುಗಿಸುವುದು ಒಳ್ಳೆಯದು. ಇದುವರೆಗೆ ಸ್ವಲ್ಪ ಬರೆದಾಗಿತ್ತು. ಬೈಕುಂಠ ಬರುವಾರವರು ತಮ್ಮ ತಂದೆಯ ಹುಟ್ಟಿದ ದಿನ, ಅವರು ಇಹಲೋಕ ತ್ಯಜಿಸಿದ ದಿನ, ಅವರ ಜೀವನ-ಶೈಲಿ ಮತ್ತು ಆಚಾರ-ವಿಚಾರಗಳ ಬಗ್ಗೆ ಹೇಳಿದ್ದರು. ನಾನು ಲೇಖನವನ್ನು ಬರೆಯಲು ಪ್ರಾರಂಭಿಸಿದೆ. ನಂತರ ಕರುಣಾಧರ್ ಬರುವಾರವರ ಕಠಿಣ ಪರಿಶ್ರಮದ ಬಗ್ಗೆ ಒಂದು ಪ್ಯಾರಾ ಬರೆದೆ. ಆಮೇಲೆ ಕಪ್ಪು ಬಣ್ಣದ ಮೆಟ್ಟು ಮತ್ತು ಗಂಭೀರ ಮುಖವನ್ನು ವರ್ಣಿಸಿದೆ. ಸರಿ, ಈಗೇನು ಬರೆಯುವುದು?

ಬೈಹಾಗು ಹೇಳಿದ ಸಂಗತಿಗಳನ್ನು ಬರೆಯುವುದೇ? ಆದರೆ ಅದನ್ನು ಯಾವುದೇ ಪರಿಸ್ಥಿತಿಯಲ್ಲಿಯೂ ಬರೆಯುವುದು ಸಾಧ್ಯವಿಲ್ಲ.

ನಾನೀಗ ಕರುಣಾಧರ್ ಬರುವಾರವರ ಮಹತ್ವಾಕಾಂಕ್ಷೆಯ ಬಗ್ಗೆ ಬರೆಯುವೆ –

'...ಮಹತ್ವಾಕಾಂಕ್ಷೆ ಮನುಷ್ಯನ ಜೀವನವನ್ನು ನಡೆಸುವ ಶಕ್ತಿಯುಳ್ಳದ್ದು. ವಾಸ್ತವವಾಗಿ ಕರುಣಾಧರ್ ಬರುವಾ ಅವರು ಓರ್ವ ಮಹತ್ವಾಕಾಂಕ್ಷಿ ವ್ಯಕ್ತಿಗಳಾಗಿದ್ದರು .ಈ ಮಹತ್ವಾಕಾಂಕ್ಷೆಯೇ ಅವರಿಗೆ ಶಕ್ತಿಯನ್ನು ಕೊಟ್ಟಿತ್ತು. ಹೀಗಾಗಿ ಅವರು ಶೂನ್ಯದಲ್ಲಿ ಆರಂಭಗೊಂಡ ಜೀವನವನ್ನು ಸ್ವರ್ಣಮಯಗೊಳಿಸುವಲ್ಲಿ ಯಶಸ್ವಿ-ಯಾಗಿದ್ದರು...'

ನಾನು ಬೈಹಾಗುವಿನಂತೆ 'ಹಾಂ...ಹಾಂ' ಎನ್ನುತ್ತಾ ಬರೆಯುತ್ತಾ ಹೋದೆ. ಬೈಹಾಗುವಿನಂತೆಯೇ ಅಂಧನಾದೆ. ಬೈಹಾಗುವಿನ ದೇಹದಂತೆಯೇ ನನ್ನ ಧೈರ್ಯಕ್ಕೆ ಹುಳುಗಳು ಮುತ್ತಿಕೊಂಡಿವೆ. ಬೈಹಾಗುವಿನ ಪ್ರಾಣಪಕ್ಷಿ ಹಾರಿ ಹೋಗುತ್ತಿಲ್ಲ, ಅದು ಬಹು ಕಷ್ಟದಿಂದ, ಚಡಪಡಿಸುತ್ತಾ ದೇಹದೊಳಗೆ ಸೇರಿಕೊಂಡಿದೆ, ಹಾಗೆಯೇ ನನ್ನ ಮಾತುಗಳು ಹೊರ ಬರುತ್ತಿಲ್ಲ, ಅವು ಒಳಗೊಳಗೆ ಚಡಪಡಿಸುತ್ತಿವೆ.

ನಾನು ಸಂಭವ-ಅಸಂಭವದ ನಡುವೆ 'ಹಾಂ-ಹಾಂ' ಎನ್ನುತ್ತಿದ್ದೇನೆ.

■





# ಒಂದು ಕ್ರಾಂತಿಯ ಘೋಷಣೆ

ಮೂಲ ನೇಪಾಳಿ : ಪೂರ್ಣಾ ರಾಜ್

ಕನ್ನಡಕ್ಕೆ : ಡಾ. ಬಸು ಬೇವಿನಗಿಡದ

"ಇವತ್ತು ಏನೇನು ಠರಾವು ತಗೊಂಡ್ರಿ?"

'ಬಾಳಷ್ಟು. ನನಗಂತೂ ಬಾಳ ಸಂತೋಷ ಆತು'

"ಯಾವುದರ ಬಗ್ಗೆ ನಿರ್ಧಾರ? ಏನಂತ ಕೇಳಬಹುದಾ?"

'ಹೇಳಿದೆನಲ್ಲ ಬಹಳಷ್ಟು ಅಂತ. ಯಾವ್ರದ್ಯಾವ್ರದು ಅಂತ ನನಗೆ ನೆನಪಿಲ್ಲ'

"ಯಾಕ ನೀವ್ರ ಆ ಸಭೆಯೊಳಗೆ ಇರಲಿಲ್ಲೇನು?"

'ಇದ್ದೆ, ನಾನು ಇದ್ದೆಯಂತಲೆ ಹೇಳ್ತೀರೋದು. ನಮ್ಮ ಸಂಬಳವನ್ನು ಜಾಸ್ತಿ ಮಾಡಬೇಕು, ಗಗನಕ್ಕೇರಿದ ಬೆಲೆಗಳು ಇಳೀ ಬೇಕು... ಇನ್ನೂ ಏನೇನೊ..'

"ಮತ್ತೆ ಬ್ಯಾರೆ ಯಾವುದರ ಬಗ್ಗೆಯೂ ಚರ್ಚೆ ಮಾಡಲಿಲ್ಲೇನು?"

'ಹೂಂ, ಮಾಡಿದೀವಿ. ಬೇರೆ ಬೇರೆ ವಿಷಯನೂ ಮಾತುಕತೆಯೊಳಗ ಬಂದಿದ್ದವು. ಸತ್ಯಾಗ್ರಹ ಮಾಡುವವರಲ್ಲಿ ಒಕ್ಕಟ್ಟು ಬಾಳ ಮುಖ್ಯ ಅದನ್ನು ಕಾಯ್ದುಕೊಳ್ಳಬೇಕು ಅಂತ ನಿರ್ಧಾರ ಆಯ್ತು. ಆಮೇಲೆ ಒಂದು ಕ್ರಾಂತಿಯನ್ನೆ ನಾವು ಶುರು ಮಾಡಬೇಕೆಂದು ಒಮ್ಮತದ ನಿರ್ಣಯ ತಗೊಂಡ್ವಿ'

"ಅದೆಲ್ಲ ಸರಿ, ನೀವು ಒಗ್ಗಟ್ಟಿನಿಂದ ಒಂದು ಹೊಸ ಕ್ರಾಂತಿಯನ್ನು ಈ ಸಮಾಜದಲ್ಲಿ ತರಬೇಕೆನ್ನುವುದು ಒಳ್ಳೆಯದು. ಆದರೆ ನನಗನಿಸೋದು ಏನೆಂದರೆ, ನಿಮ್ಮ ಕ್ರಾಂತಿಯನ್ನ ದಯವಿಟ್ಟು ಬಂದ್, ಹರತಾಳದಿಂದ ಸುರು ಮಾಡಬೇಡ್ರಿ, ನಿಮಗೆ ಹೋದ ಸಲದ ಮುಷ್ಕರ ನೆನಪಿರಬೇಕು. ಇನ್ನೊಂದು ದಿನ ಆಗಿದ್ದರೆ ಹಸಿವಿನಿಂದ ಸತ್ತು ಹೋಗತಿದ್ವಿ, ಈ ಸಲವೂ ಹೋದ ಸಲದಂಗ ಆಗಬೇಕೇನು? ಮಕ್ಕಳು ಉಪವಾಸದಿಂದ ನರಳಬೇಕೇನು?"

'ನೀನು ಹುಚ್ಚಿ ಅದೀ.. ನಾನೊಬ್ಬನೆ ಸ್ಟ್ರೈಕು ಬ್ಯಾಡ ಅನ್ನಲಿಕ್ಕೆ ಬರ್ತದೆಯೇನು? ನಾವೆಲ್ಲ ಒಂದಾಗಿ ಹೋರಾಟ ಮಾಡ್ತಿರತೇವಿ. ಅಂತಹದರಲ್ಲಿ ನೀನು ಏನೇನೋ ಹೇಳ್ತಿ?'

"ಅದೆಲ್ಲ ಖರೆ, ಆದರೆ ಹೋದ ಸಲ ನಿಮ್ಮ ಸಂಪು ಏನು ಫಲ ಕೊಟ್ಟಿತು ಹೇಳ್ರಿ? ಕಡೀಕ ನೀವೆಲ್ಲ ಕೆಲಸಕ್ಕ ಮ್ಯಾನೇಜಮೆಂಟನವರು ಹೇಳಿದಂಗ ಹೋಗಬೇಕಾತಿಲ್ಲೊ?"

ತನ್ನ ಹೆಂಡತಿಯ ಮಾತಿನಿಂದ ಅವನಿಗೆ ದಿಗ್ಭ್ರಮೆಯಾಯಿತು. ಇಂತಹ ಬುದ್ದಿಗೇಡಿ ಹೆಂಗಸಿನ ಮುಂದೆ ಹೇಗೆ ವಿಚಾರಗಳನ್ನು ಮಂಡಿಸಬೇಕೆಂಬುದು ಅವನಿಗೆ ತಿಳಿಯದಾಯಿತು. ಯಾವ ರೀತಿ ಹೇಳಿದರೂ ಆಕೆ ಅದನ್ನು ದಿನದ ರೊಟ್ಟಿ-ಪಲ್ಯಕ್ಕೆ ತಂದು ಹಚ್ಚುತ್ತಾಳೆ. ಇವತ್ತು ಆಫೀಸಿನಲ್ಲಿ ತಾವು ಏನೇನೆಲ್ಲ ಕನಸು ಕಂಡೆವು. ದಿನಗಟ್ಟಲೆ ಸಭೆ-ಮೀಟಿಂಗ್-ಚರ್ಚೆಗಳಾದವು. ದುಡಿಯುವ ವರ್ಗವನ್ನು ಉತ್ತೇಜಿಸುವ ದೊಡ್ಡ ದೊಡ್ಡ ಭಾಷಣಗಳನ್ನು ನಾಯಕರು ಮಾಡಿದರು. ಆದರೆ ಅದನ್ನು ನೆನೆಯುವಾಗ ಮನೆಯ ಪರಿಸ್ಥಿತಿ ಕಣ್ಮುಂದೆ ಕಟ್ಟುತ್ತದೆ. ಹಸಿವೆಯಿಂದ ಬಳಲುವವರ, ಬಟ್ಟೆಯಿಲ್ಲದೆ ಪರದಾಡುವವರ ಬವಣೆಗಿಂತ ಯಾವ ರೀತಿಯಲ್ಲಿ ತನ್ನ ಜೀವನ ಉತ್ತಮವಿದೆ? ಅವನು ತನ್ನ ಲೋಕದಲ್ಲಿಯೆ ಇದ್ದ. ಕೊನೆಗೆ "ರೀ, ಮಗು ಅಳ್ತಾ ಇದೆ ನೋಡ್ರಿ." ಕೊನೆಗೆ ಅವಳೆ ಬಂದಳು.

"ನೀವು ಯಾವಾಗಲೂ ಹೀಂಗ. ಯಾವುದರ ಒಂದು ವಿಚಾರದೊಳಗೆ ಬಿದ್ರಿಯಂದ್ರ ಮನಿ-ಹೆಂಡತಿ-ಮಕ್ಕಳು ಎಲ್ಲ ಮರ್ತ ಬಿಡ್ತೀರಿ. ಕೈಯಾಗ ರೊಟ್ಟಿ ಹಿಡಕೊಂಡು ತಿನ್ನಲಾರದ ಯಾಕ ಸುಮ್ಮನ ಕುಂತೀರಿ? ಏನರ ಕೇಳಿದರ ಮೂಕರಂಗ ಇರ್ತೀರಿ? ಹುಡುಗ ಅಳೋದು ಕೇಳಿಸಲಿಲ್ಲೇನು?"

ಅವಳ ಮೂಕ ಎನ್ನುವ ಮಾತು ಅವನ ಎದೆಗೆ ಚುಚ್ಚಿತು. ಹೆಂಡತಿ ಹಾಗೆ ಅಂದಿದ್ದರಿಂದ ಏನೋ ಹೇಳಬೇಕೆಂದಿದ್ದ ಅವನು ಮತ್ತೂ ಸುಮ್ಮನಾದ. ಯಾವ ಹೆಂಡತಿಯಾದರೂ ಗಂಡನನ್ನು ಹಾಗೆ ಬೈಯ್ಯಬೇಕೇನು? ಗಂಡನಿಗೆ ಆತ್ಮಗೌರವ ಇರುವದಿಲ್ಲವೇ? ಅದಕ್ಕಾಗಿ ಮೊದಲು ಈ ಮನೆಯಲ್ಲಿಯೆ ಕ್ರಾಂತಿಯಾಗಬೇಕು ಎನಿಸಿತು. ಹರತಾಳ ಮೊದಲು ಮನೆಯಲ್ಲಿಯೆ ಸುರುವಾಗಬೇಕು. ಆದರೆ ಮುಷ್ಕರ, ಕ್ರಾಂತಿಯೆನ್ನುವುದು ಮನೆಯಲ್ಲಿ ಜರುಗುವುದು ಅಸಾಧ್ಯವೆಂದು ಸುಮ್ಮನಾದ. ಯಾಕೆಂದರೆ ಇಲ್ಲಿ ತಾನೊಬ್ಬನೆ ಇದ್ದೇನೆ. ಕಾರ್ಮಿಕ ಒಕ್ಕೂಟಗಳಿಲ್ಲ. ಸಂಪಿಗೆ ಕರೆ ಕೊಡುವವರಿಲ್ಲ. ಯಾವುದಾವುದೋ ವಿಚಾರ ಬಂದು ಹೋಗುತ್ತಿವೆ. ಮನಸ್ಸಿನ ಅಸಮಾಧಾನದಿಂದ ಏನೇನೋ ಗೊಣಗುಟ್ಟತೊಡಗಿದ. ಮುಂಜಾನೆಯಿಂದ ಸಂಜೆಯತನಕ ಕತ್ತೆಯಂತೆ ದುಡಿದುಬಂದರೆ ಹೆಂಡತಿ ತನ್ನನ್ನು ಮೂಕನೆಂದು ಹೀಯಾಳಿಸುತ್ತಾಳೆ!

ಒಮ್ಮಿಂದೊಮ್ಮೆಲೆ ತೊಟ್ಟಿಲಲ್ಲಿನ ಮಗು ಅಳತೊಡಗಿತು. ತೊಟ್ಟಿಲು ತೂಗಿದ. ಆದರೂ ಅದರ ಚೀರಾಟ ನಿಲ್ಲಲಿಲ್ಲ. ಸಿಟ್ಟು ಬಂದ ಅವನು ತೊಟ್ಟಿಲಿಂದ ಮಗುವನ್ನು ಎತ್ತಿಕೊಂಡು 'ಬಾಯ್ಮುಚ್ಚು! ಏನಾಗೇತಿ ಚೀರಲಿಕ್ಕೆ? ಕೆಳಗ ಚೆಲ್ಲತೇನಿ ನೋಡು' ಎಂದು ಹಲ್ಲು ಕಡಿದ. ಅಪ್ಪನ ರೌದ್ರಾವತಾರ ನೋಡಿದ ಮಗು ಕೈ ಕಾಲು ಬಡಿಯದೆ ಒಮ್ಮೆಲೆ ಸುಮ್ಮನಾಯಿತು. ಅವನಿಗೆ ಇದು ಒಂದು ಕ್ರಾಂತಿಯೆನಿಸಿತು.

ಮಗುವಿಗೆ ತಾನು ಹೆದರಿಸಿದನೇನೋ ಎಂದು ಅವನಿಗೆ ಕಸಿವಿಸಿಯಾಯಿತು. ತನ್ನ ಸಿಟ್ಟು ಮಗುವಿನಲ್ಲಿ ಭೀತಿ ಹುಟ್ಟಿಸಿತೆಂದು ಅವನೂ ಭಯಭೀತನಾದ. ಅದಕ್ಕೆ ಮಗುವನ್ನು ಪ್ರೀತಿಯಿಂದ ಎದೆಗಪ್ಪಿಕೊಂಡು 'ಸಿಟ್ಟಾದೆನೋ ಮಗನೇ, ಸುಮ್ಮನೆ ಜಬರಿಸಿದೆ. ಅಷ್ಟಕ್ಕೆ ಹೆದರಿಕೊಳ್ಳಬಾರದಪ್ಪ, ನೋಡಿಲ್ಲಿ, ಎಲ್ಲಿ ಸ್ವಲ್ಪ ನಗು... ಹಾಂ.. ಹಾಂ.. ಹಂಗ. ತಗೋ ಚಾಕಲೇಟ್ ಬೇಕಾ?'

"ಉಳಿದ ಮಕ್ಕಳು ಎಲ್ಲಿ ಹೋದರು? ಇನ್ನೂ ಯಾಕ ಬರಲಿಲ್ಲಂತೇನಿ?"



ಹೆಂಡತಿಯ ಮಾತಿನಿಂದ ಅವನು ಬೆಚ್ಚಿಬಿದ್ದ. ತಾನು ಎಂತಹ ಮನುಷ್ಯ? ಉಳಿದ ಮಕ್ಕಳು ಎಲ್ಲಿದ್ದಾರೆ? ಏನು ಮಾಡುತ್ತಿದ್ದಾರೆ? ಉಂಡಿದ್ದಾರಾ? ಮಲಗಿದ್ದಾರಾ? ತಾನು ಅವರನ್ನು ಮರತೇ ಬಿಟ್ಟಿದ್ದೇನೆ. 'ಎಲ್ಲಿ ಹೋಗ್ಯಾರ ಉಳಿದ ಹುಡುಗರು? ಕತ್ತಲು ಬ್ಯಾರೆ ಆಗೇದ'.

"ಈ ಉಡಾಳ ಹುಡುಗರು ಹೀಂಗ. ಸ್ವಲ್ಪ ಜ್ವಾಳ ಇತ್ತು, ಬೀಸಲಿಕ್ಕೆ ಗಿರಣಿಗೆ ಕಳಿಸಿದ್ದೆ, ಎಷ್ಟೊತ್ತು ಮಾಡ್ತಾರ ನೋಡು"

ಅವಳು ಪ್ರತಿಮಾತಿನಲ್ಲಿಯೂ ತನ್ನನ್ನು ಚುಚ್ಚುತ್ತಿದ್ದಾಳೆ. ತನ್ನ ಬಡತನವನ್ನು ಎತ್ತಿ ತೋರಿಸುತ್ತಿದ್ದಾಳೆ. ಎರಡೇ ಎರಡು ಕೋಣೆಗಳಿರುವ ಮನೆಯೆನ್ನುವ ಮನೆಯತ್ತ ಕಣ್ಣು ಹಾಸಿದ. ಕಪ್ಪಾಗಿ, ಅಲ್ಲಲ್ಲಿ ಜೇಡುಗಟ್ಟಿರುವ ಮಲಿನವಾಗಿರುವ ರೂಮುಗಳು, ಒಂದು ಕಟ್ಟಿಗೆಯ ಸಂದುಕ, ಹೊಗೆ ತುಂಬಿಕೊಂಡಿರುವಂಥ ಬಾಗಿಲಮಾಡು, ಒಡೆದ ಕನ್ನಡಿ, ಸಣ್ಣ ಟೇಬಲ್, ಒಂದು ಪಲ್ಲಂಗ, ಎರಡು ಬಿದರಿನ ಸ್ಟೂಲ್‌ಗಳು ಒಂದೆರಡು ಖುರ್ಚಿ ಮತ್ತು ಅವರ ಟ್ರೇಡ್ ಯೂನಿಯನ್ ಹೊರಡಿಸ್ತೀರೋ ಮ್ಯಾಗ್‌ಜಿನ್‌ಗಳು- ಇವಿಷ್ಟೆ ಅವನ ಜೀವಮಾನದ ಆಸ್ತಿಯಾಗಿತ್ತು.

'ಬೆಂಕಿ ಹಚ್ಚಬೇಕು ತನ್ನ ಬದುಕಿಗೆ' ಎಂದುಕೊಂಡ. ಇಷ್ಟು ವರ್ಷಗಳಿಂದ ತಾನು ಕೆಲಸ ಮಾಡಿದೆ. ಏನು ಮಾಡಿದೆ? ಏನು ಗಳಿಸಿದೆ? ಒಂದು ಚೆಂದ ಸಾಮಾನು ಮಾಡಿಕೊಳ್ಳಲು ಆಗಿಲ್ಲ. ಮೇಲಾಗಿ ಐದು ಮಕ್ಕಳು, ದುಡಿಯುವವನು ತಾನೊಬ್ಬನೆ.

'ಅವ್ವಾ, ಅವ್ವಾ, ಅಪ್ಪ ಬಂದಂಗ ಕಾಣಸ್ತದ' ಗಿರಣಿಯಿಂದ ಬಂದ ಮಕ್ಕಳು ಹೇಳಿದರು. ಮಬ್ಬು ಬೆಳಕಿನಲ್ಲಿ ಮನೆಯೊಳಗೆ ಬರುತ್ತಿರುವ ಮಕ್ಕಳನ್ನು ಅವನು ನೋಡಿದ.

ಅಲ್ಲಲ್ಲಿ ಹರಿದಿರುವ ಚಡ್ಡಿ, ಹಾಫ್-ಪ್ಯಾಂಟು, ಹೊಲಸಾದ ಅಂಗಿ, ಹೊಲಿಗೆ ಹಾಕಿರುವ ಸ್ಕರ್ಟ್, ಬ್ಲೌಸ್, ಸವೆದ ಚಪ್ಪಲಿ, ಕಳೆಗುಂದಿದ ಮುಖಗಳು- ತನ್ನ ಕಣ್ಣಿಗೆ ಇಷ್ಟೆ ಕಾಣುತ್ತಿದೆ. ಇಷ್ಟೆ, ಮತ್ತೇನೂ ಕಾಣುತ್ತಿಲ್ಲ.

ತಾಯಿ ಮಕ್ಕಳ ಮಾತನ್ನು ಕೇಳಿಸಿಕೊಂಡು "ಹೂಂ, ಬಂದಿದ್ದಾರೆ, ಹೋಗಿ ನೋಡ್ರಿ, ದೊಡ್ಡ ಕ್ರಾಂತಿಕಾರಿಗಳು! ಅವರನ್ನ ನೋಡಿ ಏನು ಮಾಡ್ತೀರಿ? ಸ್ವಲ್ಪ ಅಭ್ಯಾಸ ಮಾಡಬಾರದಾ?"

'ಅವ್ವಾ, ಅಭ್ಯಾಸ ಮಾಡಲಿಕ್ಕೆ ನೋಟಬುಕ್ ಇಲ್ಲ'

'ಅಪ್ಪ, ನನ್ನ ಡ್ರೆಸ್ ನೋಡು, ನಾನು ಸಾಲಿಗೆ ಹೆಂಗ ಹೋಗಬೇಕು?

ಮಕ್ಕಳ ಮಾತಿನಿಂದ ಅವನಿಗೆ ಮತ್ತಷ್ಟು ಕಿರಿಕಿರಿಯಾಯಿತು. ಮೊದಲೇ ಮೈ ಕೈ ಕೆರೆದುಕೊಳ್ಳುತ್ತಿದ್ದ. ಉಸಿರು ಕಟ್ಟಿದಂತಾಗಿ ಅವನು ರೇಗಿದ, 'ಹಂಗ್ಯಾಕ ಚೀರ್ತೀರಿ? ಸುಮ್ಮನಿರಿ. ಒಮ್ಮೆಂದೊಮ್ಮೆಲೆ ಎಲ್ಲಾ ಬೇಕಂದ್ರ ಹೆಂಗ? ನೀವು ಕಷ್ಟ ಪಡ್ತಾ ಇದ್ದೀರಲ್ಲ. ಅದು ಒಳ್ಳೇದು. ಕಷ್ಟ ಇಲ್ಲದೆ ಸುಖ ಇಲ್ಲ. ಜೀವನದಾಗ ಬಡತನ ಕಲಿಸುವಂಥ

ಪಾಠವನ್ನ ಯಾವ ಮಾಸ್ತರನೂ ಕಲಿಸಲಿಕ್ಕೆ ಆಗೋದಿಲ್ಲ...' ಜೀವನದಲ್ಲಿ ಹೇಗೆ ಮುಂದೆ ಬರಬೇಕು ಎಂದು ಮಕ್ಕಳಿಗೆ ಬಿಡಿಸಿ ಹೇಳತೊಡಗಿದ.

ಕಣ್ಣೆದುರಿಗೆ ಬೃಹತ್ ಭಾರತದ ಬಡತನದ ಚಿತ್ರಣ ಸುಳಿಯಿತು. ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದವರಿಗೆ ಹಾಗೂ ಶಿಕ್ಷಣದಿಂದ ವಂಚಿತರಾಗಿರುವ ಮಕ್ಕಳನ್ನು ಹೇಗೆ ಮುಟ್ಟಬೇಕು? ಅವರ ಜೀವನವನ್ನು ಹೇಗೆ ಸುಧಾರಿಸಬೇಕು? "...ಶೋಷಿತರಾಗಿರುವ ಕಾರ್ಮಿಕ ಒಕ್ಕೂಟದ ಸದಸ್ಯರೆ, ಬಡತನದಲ್ಲಿ ಬೆಂದು, ಅವಮಾನವನ್ನು ಉಂಡು ಜೀವನ ಸವೆಸಿರುವ ನನ್ನ ಅಣ್ಣ ತಮ್ಮಂದಿರೆ, ಅಕ್ಕ-ತಂಗಿಯರೆ, ಅಪ್ಪ-ಅಮ್ಮಂದಿಗೆ ಇವೊತ್ತು ನಮ್ಮ ದೇಶ ದುಸ್ಥಿತಿಯಲ್ಲಿದೆ. ನಿರುದ್ಯೋಗ, ಅಸಮಾನತೆ, ಅನಕ್ಷರತೆ ಮುಂತಾದ ಸಮಸ್ಯೆಗಳು ನಮ್ಮನ್ನು ಕಿತ್ತು ತಿನ್ನುತ್ತಿವೆ. ಬಂಗಾರ ಬೆಳೆದಿರುವ ಈ ನಾಡಿನಲ್ಲಿ, ಹಾಲಿನ ಹೊಳೆ ಹರಿದಿರುವ ಈ ದೇಶದಲ್ಲಿ ಸಮೃದ್ಧತೆ, ವಿವಿಧತೆಗಳಿಂದ ಸುಂದರವಾಗಿದ್ದ ಈ ರಾಷ್ಟ್ರದಲ್ಲಿ ಇಂದು ಅವು ಎಲ್ಲಿವೆ? ಸುಂದರವಾದ ನಾಡು ಎಲ್ಲಿ ಮಾಯವಾಯಿತು?'

"ರೀ...ರೀ... ಏನಿದು? ಹಿಂಗ್ಯಾಕ ಮಾಡ್ತೀರಿ? ಯಾಕ ಹಂಗ್ಯಾಕ ಬಡಬಡಿಸ್ತಿದೀರಿ?" ಅವನ ಹೆಂಡತಿ ಅವನನ್ನು ಜೋರಾಗಿ ಅಲುಗಾಡಿಸಿ ಎಬ್ಬಿಸಿದಳು.

'ಹೋ, ಏನೋ ಕನಸು! ನಾನು ಚೀರಿದೆ ಅಂತ ಕಾಣಸ್ತದ'

"ನನ್ನ ಕುತ್ತಿಗೆ ಹಿಚಕಲಿಕ್ಕೆ ಬಂದಿದ್ದಿರಿ. ಕೊಸರಿಕೊಂಡೆ. ಏನೇನೋ ಒದರತಾ ಇದ್ರಿ" ಹೆಂಡತಿ ಸಿಟ್ಟಿನಿಂದೆಂಬಂತೆ ಹೇಳಿದಳು. ಒಬ್ಬರ ಮುಖ ಮತ್ತೊಬ್ಬರಿಗೆ ಕಾಣಿಸದ ಕತ್ತಲಿನಲ್ಲಿ ಎಷ್ಟೊ ಹೊತ್ತು ಅವರು ಸುಮ್ಮನೆ ಕುಳಿತಿದ್ದರು.

"ನೀವು ಏನೋ ಭಾಷಣ ಸುರು ಮಾಡಿದ್ರಿ. ನಿದ್ದಿಯೊಳಗ ಹೀಂಗ ಎದ್ದು ಕೂತು ನೀವು ಮಾತಾಡೋದು ನೋಡಿದ್ರ ನನಗ ಯಾಕೋ ಬಾಳ ಹೆದರಿಕೆ ಆಗಿತ್ತು"

'ಹುಂ... ಗೊತ್ತಿಲ್ಲ. ಹೋಗಲಿ ಬಿಡು, ನಮಗ ಭಾಷಣ ಬ್ಯಾಡ. ಹೊಟ್ಟೆಗೆ ಹಿಟ್ಟು ಬೇಕಾಗೇತಿ ಅಲ್ಲ' ಇಬ್ಬರೂ ನಕ್ಕರು.

'ಇವತ್ತು ಆಫೀಸಿನೊಳಗೆ ಒಳ್ಳೊಳ್ಳೆ ಲೀಡರ್ಸ್ ಬಂದಿದ್ರು. ಮಂದಿ ಕೂಡ ಬಾಳ ಸೇರಿದ್ರು. ಅವರ ಭಾಷಣ ಕೇಳಿಬಿಟ್ರ ಖರೇನ ಈ ಜಗತ್ತಿನೊಳಗ ಕ್ರಾಂತಿ ತರೋದು ದೊಡ್ಡ ಮಾತಲ್ಲ ಅನಿಸಿಬಿಡ್ತೈತಿ. ನನಗನಿಸೋ ಮಟ್ಟಿಗೆ ಈ ಸಲ ನಮ್ಮ ಹೋರಾಟಕ್ಕೆ ಜಯ ಸಿಕ್ಕ ಸಿಗತೈತಿ...' ಅವನು ಆಕಳಿಸಿದ.

"ನನಗ ಸ್ವಲ್ಪ ಬಿಡಿಸಿ ಹೇಳ್ರಿ, ದಿನಾ 'ಮೀಟಿಂಗ್, ಮೀಟಿಂಗ್' ಅಂತೀರಿ, ಆದರ ಈ ಮೀಟಿಂಗ್‌ನಿಂದ ಮನಿಯೊಳಗ ಈಟಿಂಗ್ ಆಕ್ಕೈತೇನು? ಮಕ್ಕಳ ಬಗ್ಗೆ ವಿಚಾರ ಮಾಡ್ರಿ. ಒಂದಲ್ಲ, ಎರಡಲ್ಲ ಐದು ಮಕ್ಕಳು. ಬ್ಯಾರೆದವರಿಗೆ ನಮ್ಮಂಗ ತ್ರಾಸ ಆಗೂದಿಲ್ಲ. ಯಾಕಂದ್ರ ನಾವು ಬಡವರು ಅದೀವಿ. ಮಕ್ಕಳೇನೋ ಈಗ ಸಣ್ಣಾವ ಅದಾವ. ನಾಳೆ ದೊಡ್ಡವರಾದ್ರು ಅಂದ್ರ ಅವರ ಹೊಟ್ಟೆ-ಬಟ್ಟೆ ಸಾಲಿ-ಗಿಲಿ ಗತಿಯೇನು?" ಎಂದು ಹೆಂಡತಿ ಕತ್ತಲನ್ನು

ಹೊರಗೆ ದೂಡುವ ಸಲುವಾಗಿ ಕಡ್ಡಿಗೀರಿ ದೀಪ ಹಚ್ಚಿದಳು. ಬೆಳಕಿನಲ್ಲಿ ಮಕ್ಕಳು ಮಲಗಿದ್ದ ಕೋಣೆಯ ಕಡೆಗೆ ಅವನು ಕಣ್ಣು ಹಾಸಿದ. ಕೊಳಕಾಗಿರುವ ಹಾಸಿಗೆಯ ಮೇಲೆ ಮಲಗಿಕೊಂಡಿರುವ ಹುಡುಗರು ಹೊದ್ದಿರುವ ಕೌದಿಯನ್ನು ತನಗೆ-ತನಗೆ ಎಂದು ನಿದ್ದೆಯಲ್ಲಿಯೆ ಜಗ್ಗಾಡುತ್ತಿದ್ದರು. ಕೌದಿ ಕೂಡ ಅಲ್ಲಲ್ಲಿ ಹರಿದು ದಾರಗಳು ನೇತಾಡುತ್ತಿವೆ. ಕನಸು ಕಾಣುತ್ತಿರುವರೇನೋ. ಮುಖದಲ್ಲಿ ಮುಗುಳ್ನಗೆಯಿದೆ. ಆ ಹರಿದ ಕೌದಿಯನ್ನು ತನ್ನ ವರ್ತಮಾನಕ್ಕೆ ಮತ್ತು ಬೆಳಕಿರದ ಕೊಳಕು ಕೋಣೆಯನ್ನು ತನ್ನ ಭವಿಷ್ಯಕ್ಕೆ ಸಮೀಕರಿಸಬಹುದೇನೋ ಎಂದುಕೊಂಡ.

ತಾನು, ತನ್ನ ಮನೆ, ತನ್ನ ಹೆಂಡತಿ-ಮಕ್ಕಳು ಎಲ್ಲರೂ ಒಂದು ಶೋಚನೀಯ ಸ್ಥಿತಿಯಲ್ಲಿದ್ದೇವೆ ಎನಿಸಿತು. ಬರೀ ಶೋಚನೀಯವಷ್ಟೆ ಅಲ್ಲ ಬದುಕಿನ ವ್ಯಥೆ ಹಾಗೂ ಕರಾಳತೆಗೆ ತಾವು ಉದಾಹರಣೆಯಾಗಬಲ್ಲೆವು ಎಂದುಕೊಂಡ. ತನ್ನ ಪರಿಸ್ಥಿತಿ ದೇಶದ ಪರಿಸ್ಥಿತಿಯೂ ಆಗಿರಬಹುದೆಂದು ತೋರಿತು.

'ಹೆಂಡತಿ-ಮಕ್ಕಳನ್ನು ನಿರ್ಲಕ್ಷ್ಯ ಮಾಡುವಷ್ಟು ಮೂರ್ಖ ನಾನಲ್ಲ, ನಿನ್ನ ಬಗ್ಗೆ ಕಾಳಜಿ ಇಲ್ಲಾಂತ ಅನ್ಕೋಬ್ಯಾಡ. ನನ್ನ ಮನಸ್ಸಿನ್ಯಾಗೂ ನಮ್ಮ ಮನಿ ಮುಂದ ಬರಬೇಕು, ಮಕ್ಕಳು ಓದಬೇಕು ಅಂತ ಬಾಳ ಆಸೆ ಐತಿ. ಆದರ ಪರಿಸ್ಥಿತಿನೂ ಸ್ವಲ್ಪ ಅರ್ಥ ಮಾಡ್ಕೊಬೇಕು. ನಾವು ಕೆಲಸಗಾರರು ಒಕ್ಕಟ್ಟಾಗಿ ಹೋರಾಟ ಮಾಡಿದರ ನಮ್ಮ ಕಷ್ಟ ದೂರ ಆಗತೇತಿ. ನಮ್ಮ ಬಡತನ ದೂರ ಆಗತೇತಿ. ನಿರುದ್ಯೋಗ ಸಮಸ್ಯೆ ಇರಂಗಿಲ್ಲ.



ಬೆಲೆ ಏರಿಕೆ ಆಗೋದಿಲ್ಲ. ಇದನ್ನ ನಮ್ಮ ಲೀಡರ್ಸ್ ಹೇಳ್ತಾರ. ಅವರಷ್ಟು ಶ್ಯಾಣೆತನ ಮತ್ತು ಬುದ್ಧಿವಂತಿಕೆ ನಮಗ ಬರಾಕ ಸಾಧ್ಯ ಐತೇನು?' ಹೆಂಡತಿಗೆ ಎಲ್ಲ ಬಿಡಿಸಿ ಬಿಡಿಸಿ ಹೇಳಿದ. ಆದರೆ ಅವನ ಮನಸ್ಸಿನೊಳಗೆ ದೊಡ್ಡ ಕೋಲಾಹಲವಿತ್ತು. ಬವಳಿ ಬಂದು ಬೀಳುವನೊ ಎನ್ನುವಂತೆ ಸಂಕಟದಿಂದ ಮುಖ ಕಿವುಚುತ್ತಿದ್ದ.

'ಸಾಕು, ನೀವು ಸ್ಟ್ರೈಕ್‌ರ ಮಾಡ್ರಿ, ಬಂದ್ ಅದ್ರೂ ಆಚರಣೆ ಮಾಡ್ರಿ. ಒಟ್ಟನ್ಯಾಗ ಮಕ್ಕಳು ಉಪವಾಸ ಬೀಳಬಾರದು. ನಾವು ಭಿಕ್ಷೆ ಬೇಡುವಂಗ ಆಗಬಾರದು. ಅಷ್ಟ ನಾ ಕೇಳೋದು' ಎಂದು ಹೆಂಡತಿ ದೀಪವಾರಿಸಿ ಗಂಡನಿಗೆ ಬೆನ್ನು ಮಾಡಿದಳು.

ಇವನೂ ಅವಳ ಬೆನ್ನಿಗೆ ತನ್ನ ಬೆನ್ನು ತಿರುಗಿಸಿ ನಿದ್ದೆ ಬರಲೆಂದು ಕಣ್ಣು ಮುಚ್ಚಿಕೊಂಡ. ಮನಸ್ಸು, ದೇಹ ಎಷ್ಟೋ ಜರ್ಜರಿತವಾಗಿದ್ದರೂ ನಿದ್ದೆ ಹತ್ತಿರ ಸುಳಿಯಲಿಲ್ಲ. ಮಕ್ಕಳು ಆ ಕಡೆ ಈ ಕಡೆ ಹೊರಳಾಡುವ, ಜೋರಾಗಿ ಉಸಿರಾಡುವ, ಮೂಗು ಸೊರಗುಟ್ಟುವ ಶಬ್ದಗಳು ಅವನಿಗೆ ಸ್ಪಷ್ಟವಾಗಿ ಕೇಳುತ್ತಿವೆ. ತನಗೆ ಪ್ರಿಯವಾಗಿರುವ ಹೆಂಡತಿಯ ದೇಹದ ಕಂಪು ಕೂಡ ಮೂಗಿಗೆ ಬಂದು ಬಡಿಯುತ್ತಿದೆ. ಅವರ ಮೇಲಿನ ಪ್ರೀತಿ ಉಕ್ಕಿ ಹರಿಯುತ್ತಿದೆ. ಆದರೆ ತಾನು ಅವರಿಗಾಗಿ ಏನು ಮಾಡಿದೆ? ಇಷ್ಟು ವರ್ಷಗಳು ಸುಮ್ಮನೆ ಸರಿದು ಹೋದವು. ಆದರೆ ನನ್ನ ನೌಕರಿಯಿಂದ, ನನಗಿರುವ ಸ್ಥಾನಮಾನದಿಂದ ನಾನು ಏನು ತಾನೆ ಕೊಡಬಹುದಾಗಿದ್ದಿತು? ಈ ದೇಶದಲ್ಲಿ ನನ್ನಂಥ ಸಾವಿರ ಸಾವಿರ ಜನರಿದ್ದಾರೆ. ಎಲ್ಲೆಡೆ ಬಡತನ, ಸಂಕಟ, ಅನ್ಯಾಯವೆ ತುಂಬಿಕೊಂಡಿದೆ. ಅವನ ಕೈಗಳು ತಾನೇ ತಾನಾಗಿ ಮೇಲೇಳುತ್ತವೆ. ಮುಷ್ಟಿ ಬಿಗಿ ಹಿಡಿದು ಆತ ಹೇಳುತ್ತಾನೆ. 'ಅಣ್ಣ ತಮ್ಮಂದಿರೆ, ಅಕ್ಕ ತಂಗಿಯರೆ, ದೇಶ ತನಗಾದ ಅನ್ಯಾಯದ ಯಾತನೆಯಿಂದ ನರಳುತ್ತಿದೆ. ನಮ್ಮ ಈ ನಾಡನ್ನು ನಾವು ಚಿನ್ನದ ನಾಡನ್ನಾಗಿ ಪರಿವರ್ತಿಸಲೆ ಬೇಕು. ಈ ಹಿಮಾಲಯ, ಈ ಪರ್ವತಗುಡ್ಡಗಳು, ಈ ಜೀವಚೈತನ್ಯದ ನದಿಗಳು, ಬಂಗಾರ ಬೆಳೆಯುವ ಈ ಭೂಮಿ, ಈ ಸೂರ್ಯಾಸ್ತದ ಮರುಭೂಮಿ – ಈ ಎಲ್ಲವೂ ನಮ್ಮ ದುಡಿಮೆಯ ಬೆವರಿನಲ್ಲಿ ತೊಯ್ದು ಕೂತಿವೆ. ಅವು ನಮ್ಮ ಗೆಲುವನ್ನು, ಸೋಲನ್ನು ಹಿಡಿದಿಟ್ಟವೆ. ಅವಮಾನ ಮತ್ತು ಕಹಿ ನೆನಪುಗಳು ಕೂಡ ಅವುಗಳನ್ನು ಆಗಾಗ ಕಲಕುತ್ತವೆ. ಹಿಂಸೆ–ಬೇಗುದಿಗಳಿಂದ ಜರ್ಜರಿತರಾಗಿರುವ ನನ್ನ ದೇಶವಾಸಿಗಳೆ, ನಮ್ಮ ನಿರಂತರ ಹೋರಾಟದಿಂದ ನಾವೆಷ್ಟು ಜಯಶಾಲಿಯಾಗಿದ್ದೇವೆ? ಎಷ್ಟು ಪ್ರಗತಿಯನ್ನು ನಮ್ಮ ಜೀವನದಲ್ಲಿ ಸಾಧಿಸಿದ್ದೇವೆ? ನಮ್ಮ ಜೀವನದುದ್ದಕ್ಕೂ ಬರೀ ಹೋರಾಟ, ಮುಷ್ಕರ, ಕಿರುಕುಳ, ಚಿಂತೆ. ಅಲ್ಲ ? ಇಂದು ನಾವು ಹಸಿದಿದ್ದೇವೆ. ನಮ್ಮ–ನಿಮ್ಮ ಮಕ್ಕಳು ಬೀದಿಯಲ್ಲಿ ನಿಂತಿದ್ದಾರೆ. ತಾಯಂದಿರು ಮಕ್ಕಳಿಗೆ ವಾತ್ಸಲ್ಯವನ್ನು ಉಣಬಡಿಸುವ ಬದಲು ನಿಟ್ಟುಸಿರುಗೈಯ್ಯುತ್ತಿದ್ದಾರೆ...'

ಅವನ ಉದ್ವೇಗ ಹೆಚ್ಚುತ್ತಿದೆ. ಕ್ರಾಂತಿಯ ಅಲೆಗಳಲ್ಲಿ ಮುಳುಗೇಳುತ್ತಿದ್ದಾನೆ. ಕ್ರಾಂತಿಯ ಅರ್ಥ ತಿಳಿಯಲು ಹೆಣಗಿದಷ್ಟು ಅದು ಕಗ್ಗಂಟಾಗುತ್ತದೆ. ಮಧ್ಯಾಹ್ನವಷ್ಟೆ ಅಂತಹ ಒಂದು ಸಭೆಯಲ್ಲಿ ಭಾಗವಹಿಸಿ ಬಂದಿದ್ದಾನೆ. ಕಾರ್ಮಿಕರ, ಶೋಷಿತರ ಧ್ವನಿಗೆ ದೇಶವೂ ಧ್ವನಿಗೂಡಿಸಿತು. ಹೋರಾಟದ ಮುಂದಾಳತ್ವ ವಹಿಸಿರುವ ನಾಯಕರ ಕೊನೆಯ

ಮಾತುಗಳನ್ನು ಕೇಳಿದಾಗ ಅವನ ಕಣ್ಣು ಮಂಜಾಗಿದ್ದವು. ತನ್ನ ಕೈಯಲ್ಲಿಯ ಕಾರ್ಮಿಕ ಸಂಘಟನೆಯ ಧ್ವಜವನ್ನು ಚುಂಬಿಸಿದ್ದ. ಅವರ ಮನಕರಗುವ ಭಾಷಣಕ್ಕೆ ತನ್ನ ಅಣ್ಣ-ತಮ್ಮಂದಿರನ್ನು, ಅಕ್ಕ-ತಂಗಿಯರನ್ನು, ಮನದಲ್ಲಿಯೆ ತಬ್ಬಿಕೊಂಡಿದ್ದ. ಹೊಸ ಜೀವನ ತಮಗಾಗಿ ಕಾದಿದೆಯೆಂದು ಭಾಷಣ ಮಾಡುವ ನಾಯಕನು ಹೇಳಿದಾಗ ತನ್ನ ಜೊತೆ ನಿಂತಿದ್ದ ಯುವಕ ಹೇಳಿದ ಮಾತು ಕಿವಿಯಲ್ಲಿ ಇನ್ನೂ ಅನುರಣಿಸುತ್ತಿದೆ. 'ನಮ್ಮ ಸ್ಥಿತಿ ಹೇಗಾಗಿದೆ ನೋಡು. ನನ್ನ ಮತ್ತು ನಿನ್ನ ಹಾಗೆ ಇರುವ ಜನರು ಇನ್ನೂ ಸಾವಿರಾರು ಮಂದಿಯಿದ್ದಾರೆ. ಆದರೆ ಯಾರಾದರೂ ಸಂತೋಷದಿಂದ ಇದ್ದಾರೇನು? ಬದುಕಿನ ದುಃಖಕ್ಕೆ ಕಣ್ಣುಗಳ ಆಳ ಇಳಿದುಹೋಗಿವೆ. ತುಟಿ ಒಣಗಿವೆ. ಅದಕ್ಕಾಗಿ ನಮಗೆ ಹೊಸ ಬದಲಾವಣೆ, ಹೊಸ ಕ್ರಾಂತಿ ಬೇಕೇ ಬೇಕು...'

ಆ ಯುವಕನ ಮಾತುಗಳ ಹಿಂದಿನ ಕಾಳಜಿ ಅವನಿಗೆ ಸಂಪೂರ್ಣ ಅರ್ಥವಾಗಿರದಿದ್ದರೂ ಅವನಲ್ಲಿ ಚೈತನ್ಯವನ್ನು ಹರಿಸಿತ್ತು. ಈಗ ತನ್ನ ಮನೆಯ ಪರಿಸ್ಥಿತಿ ನೋಡಿ ಕ್ರಾಂತಿ ಎಷ್ಟು ಮುಖ್ಯವೆಂದು ಅನಿಸತೊಡಗಿತು.

ಮತ್ತೆ ಮಧ್ಯಾಹ್ನದ ಚಿತ್ರವೆ ಕಣ್ಮುಂದೆ ಬಂತು. ಟ್ರೇಡ್ ಯೂನಿಯನ್ ಅಧ್ಯಕ್ಷನ ಭಾಷಣವನ್ನು ಲಕ್ಷ್ಯಗೊಟ್ಟು ಕೇಳುತ್ತಿದ್ದ ಮುದುಕನೊಬ್ಬ ಇವನ ಹತ್ತಿರವೆ ನಿಂತಿದ್ದ. ಕೆಮ್ಮುತ್ತ, ಕಫವನ್ನು ಒಳಗೆ ನುಂಗುತ್ತ ಕಾರ್ಮಿಕ ಒಕ್ಕೂಟದ ಧ್ವಜವನ್ನು ಮೇಲಕ್ಕೆತ್ತಿ ಹಿಡಿದಿದ್ದ. ಭಾಷಣದಲ್ಲಿ ಕ್ರಾಂತಿಯ ವಿಚಾರ ಬಂದಾಗಲೆಲ್ಲ ಮುದುಕನ ಕಣ್ಣುಗಳಲ್ಲಿ ಮಿಂಚು ಹರಿಯುತ್ತಿತ್ತು. ಅಲ್ಲಿಯೆ ಹತ್ತಿರ ಕೆಲವು ಯುವಕ-ಯುವತಿಯರು ತಮ್ಮ ತಮ್ಮಲ್ಲಿ ಮಾತಾಡುತ್ತ ನಿಂತಿದ್ದರು. ವರ್ಷಗಳಿಂದ ಅವರು ನೌಕರಿಗಾಗಿ ಅಡ್ಡಾಡುತ್ತಿದ್ದಾರೆ. ಮುಖದಲ್ಲಿ ಮಂದಹಾಸ ತುಂಬಿಕೊಂಡಿದ್ದ ಒಬ್ಬ ಹುಡುಗಿ ತನ್ನ ಸ್ನೇಹಿತರನ್ನು ಕೇಳುತ್ತಾಳೆ 'ನನಗೆ ಅಮ್ಮ, ಮೂರು ಜನ ಸೋದರರು, ಮೂರು ಸೋದರಿಯರು ಇದ್ದಾರೆ. ನಾನೇ ದೊಡ್ಡವಳು. ಮನೆಯಿಲ್ಲ. ಹೊಲವಿಲ್ಲ, ಜೀವನ ಹೇಗೆ ಸಾಗಿಸಬೇಕು ಹೇಳ್ರಿ?'

ಒಬ್ಬ ಹೇಳಿದ-'ನೀನು ಕ್ರಾಂತಿಯ ಘೋಷಣೆ ಮಾಡು. ಕ್ರಾಂತಿ ಮಾಡಿದರೆ ಮಾತ್ರ ಹಿಂದಿನ ಮೂಢನಂಬಿಕೆ ಕುಸಿದು ಹೊಸ ದಾರಿ ಗೊತ್ತಾಗ್ತೇತಿ.'

'ಹೌದು ನನ್ನ ದೇಶ ಮೊದಲಿನಿಂದಲೂ ಹಳೆ ಸಂಪ್ರದಾಯ-ನಂಬಿಕೆಗಳಿಗೆ ಜೋತುಬಿದ್ದಿದೆ. ಅದು ಬದಲಾಗಲೇಬೇಕು, ನವ ಮನ್ವಂತರ ಉದಯವಾಗಲೇ ಬೇಕು' ಮತ್ತೊಬ್ಬ ಯುವಕ ಅಂದ.

ಆ ಹರೆಯದ ಹುಡುಗರ ಮಾತುಗಳನ್ನು ಆತ ಆಸಕ್ತಿಯಿಂದ ಆಲಿಸಿದ. ಹೋರಾಟದ ಸಂಕೇತವಾಗಿದ್ದ ಅವರ ಕೈಯಲ್ಲಿಯ ಧ್ವಜಗಳು ಪಟಪಟನೆ ಹಾರಿ ಸುಂದರವಾದ ದೃಶ್ಯವನ್ನು ಮೂಡಿಸಿದ್ದವು. ಈ ಯುವಕರು ಒಂದು ಹೊಸ ಸಮಾಜವನ್ನು ನಿರ್ಮಾಣ ಮಾಡಬಲ್ಲರು ಎಂದು ಅವನಿಗೆ ಅನಿಸಿತು... ಚೆಲುವಾದ ಪಟ್ಟಣಗಳು, ಸುಖ-ಸಮೃದ್ಧಿಯಿಂದ ತುಂಬಿದ ಊರುಗಳು, ಸಂತೋಷ-ತೃಪ್ತಿಯಿಂದ ನಗುವ ಜನರು... ಸುಡುವ ಮಧ್ಯಾಹ್ನವೆ ಅವನು ಕನಸು ಕಾಣುತ್ತಿದ್ದ.

ಮಗು ಅಳುವ ಸದ್ದು ವಾಸ್ತವಕ್ಕೆ ತಂದಿತು. ಉರಿಬಿಸಿಲಿನಲ್ಲಿ ಮಗುವನ್ನು ಬಗಲಲ್ಲಿ ಎತ್ತಿಕೊಂಡಿದ್ದ ಮಧ್ಯವಯಸ್ಕ ಮಹಿಳೆ ಅದಕ್ಕೆ ಗಾಳಿ ಬೀಸಿದಳು. ಅವನಿಗೆ ತಾಯಿಯ ವಾತ್ಸಲ್ಯದ ನೆರಳಿನಲ್ಲಿ ಸುರಕ್ಷಿತವಾಗಿ ಮನೆಯಲ್ಲಿರುವ ತನ್ನ ಮಕ್ಕಳ ನೆನಪಾಯಿತು. ಟ್ರೇಡ್ ಯೂನಿಯನ್ ಲೀಡರ್‌ನ ಭಾಷಣ ಕೊನೆಯ ಹಂತ ತಲುಪಿತು.

"ನಮ್ಮ ಈ ಸಭೆ ಈಗ ಮುಕ್ತಾಯವಾಗುತ್ತಿದೆ. ನಾನು ಏನೇನು ನಿರ್ಣಯಗಳನ್ನು ತೆಗೆದುಕೊಂಡಿದ್ದೇವೆಂದು ನಿಮಗೆಲ್ಲ ತಿಳಿದಿದೆ. ನಮ್ಮನ್ನು ಸುತ್ತುವರೆದಿರುವ ಕತ್ತಲನ್ನು ಹೊಡೆದೋಡಿಸಿ ಬೆಳಕಿನ ಕಡೆಗೆ ನಾವು ನಡೆಯಬೇಕು. ನಮ್ಮ ಭವಿಷ್ಯವನ್ನು ನಾವೆ ಕಟ್ಟಬೇಕಾಗಿದೆ. ನಿಮ್ಮ ಸಹಾಯ ಸಹಕಾರ ಕೊನೆಯವರೆಗೂ ಇರಲಿ ಅಂತ ನಾನು ವಿನಂತಿಸುತ್ತೇನೆ. ನಾವು ಒಗ್ಗಟ್ಟಿನಿಂದ ಹೆಜ್ಜೆ ಹಾಕದಿದ್ದರೆ ನಾವು ಸೋತುಹೋಗುತ್ತೇವೆ. ನಮ್ಮ ಶಕ್ತಿಯನ್ನು ಮುರಿಯುತ್ತಾರೆ. ನಮ್ಮನ್ನು ಪ್ರಾಣಿಗಳಿಗಿಂತ ಕೀಳಾಗಿ ಕಾಣುತ್ತಾರೆ. ಆದರೆ ನಾವು ಹೆಗಲಿಗೆ ಹೆಗಲು ಕೊಟ್ಟು ಮುನ್ನಡೆದರೆ ಜಗತ್ತೆ ನಮ್ಮದಾಗುತ್ತದೆ. ನಮ್ಮ ಧ್ವನಿ ಆಕಾಶಕ್ಕೆ ಕೇಳಿಸಬೇಕು. ನಮ್ಮ ಕರ್ತವ್ಯ ಪ್ರಜ್ಞೆ, ಒಕ್ಕಟ್ಟು ನಮ್ಮನ್ನು ಕಾಪಾಡುತ್ತದೆ. ಎಲ್ಲರಿಗೂ ನಮಸ್ಕಾರ"

ಸೇರಿದ್ದ ಜನಸ್ತೋಮದ ಚಪ್ಪಾಳೆ ಎಲ್ಲೆಡೆಗೂ ಕೇಳಿಸಿತು. ಎಲ್ಲರ ಮುಖಗಳಲ್ಲಿ ಸಂತೋಷ ಉಕ್ಕಿ ಹರಿದಾಡುತ್ತಿತ್ತು.

"ಅಯ್ಯೊ ಈ ಮನುಸ್ಯಾ ನಮ್ಮನ್ನ ಮಲಗಲಿಕ್ಕೆ ಬಿಡ್ತಾನೋ. ಇಲ್ಲವೋ ತಿಳಿಯಂಗಿಲ್ಲ. ರೀ... ರೀ... ಏನಾಗೇತಿ ನಿಮಗ? ಒಂದು ಸಲ ಭಾಷಣ ಮಾಡ್ತೀರಿ. ಮತ್ತೊಂದು ಸಲ ನಮಸ್ಕಾರ ಅಂತೀರಿ. ಇನ್ನೊಂದು ಸಲ ಚಪ್ಪಾಳೆ ಹೊಡೀತಿರಿ"






ಹೆಂಡತಿಯ ಮಾತಿನಿಂದ ಆತ ವಾಸ್ತವಕ್ಕೆ ಬಂದ.

'ಓಹ್! ಮತ್ತ ಕನಸು ಬಿದ್ದಿತ್ತು. ನಾನು ನಮ್ಮ ಲೀಡರ್‌ನ ಭಾಷಣ ಕೇಳಲಿಕ್ಕೆ ಹತ್ತಿದ್ದೆ'

"ಒಟ್ಟ ನೀವು ಭಾಷಣ ಕೇಳ್ಕೊಂತ, ಭಾಷಣ ಮಾಡ್ಕೊಂತ ಇರೋದಾತು. ಮುಂಜಾನೆದ್ದ ಕೂಡಲೆ ಅಡಿಗೆ ಮಾಡಾಕ ಸಾಮಾನು ಇಲ್ಲನ್ನೋದು ನೆನಪಿರಲಿ."

'ನೆನಪೈತಿ, ಎಲ್ಲ ಸಮಸ್ಯೆಗೆ ಒಂದು ಪರಿಹಾರ ಐತಿ. ನೋಡ್ತಾ ಇರು, ನಮ್ಮ ಕಷ್ಟ ಎಲ್ಲ ಮುಗೀತಾವು. ನಾನು ಒಂದು ಕ್ರಾಂತಿ ಘೋಷಣೆ ಮಾಡ್ತೇನಿ... ಮೊದಲ ನನಗ ಒಂದು ಕಪ್ ಚಾ ಕೊಡು, ಏಳು ಬೆಳಕಾಗೇತಿ. ಕೆಳಗಿನ ಮನಿಯವರು ಆಗಲೆ ಎದ್ದಾರು'

"ಶಿವ ಶಿವಾ, ಕಣ್ಣು ಮುಚ್ಚೋದರೊಳಗ ಮತ್ತ ಬೆಳಗಾಗಬಿಡತೈತಿ, ಎಷ್ಟೊಂದು ಕೆಲಸ, ಏನ ಕತಿ! ತಗೋರಿ ಈ ಹುಡುಗನ್ನ ಚಪ್ಪರಿಸಿ ಮಲಗಿಸಿರಿ. ಸ್ವಲ್ಪ ನಿದ್ದಿ ಮಾಡ್ಲಿಕ್ಕು ಬಿಡೋದಿಲ್ಲ... ಅಪ್ಪ... ಶಿವನೇ... ಸರೀರಿ ಚಹಾಕ್ಕೆ ಇಡ್ತೀನಿ" ಎಂದು ಒಲೆ ಹೊತ್ತಿಸಿ ದೊಡ್ಡ ಉರಿ ಮಾಡಿದಳು. ಪಾತ್ರೆಯಲ್ಲಿನ ಕುದಿಯುವ ನೀರಿಗೆ ಚಹಾಪುಡಿ ಹಾಕಲು ಹೋದಾಗ ಅರಿವಿಗೆ ಬಂದಿತು– ಚಹಾಪುಡಿ ಖಾಲಿಯಾಗಿದೆ.

"ನಿನ್ನೇನೇ ಹೇಳಿದ್ದೆ, ಚಾ ಪುಡಿ ಇಲ್ಲಾಂತ, ಮುಂಜಾನೆ ತರ್ತೀನಿ ಅಂದ್ರಿ. ಮತ್ತೊಂದು ಮುಂಜಾನೆ ಆತು"

'ಮರ್ತಬಿಟ್ಟೆ ನೋಡು, ಸ್ವಲ್ಪ ಅಕ್ಕಿ ಗಂಜಿ ಹಾಕಿ ಬಿಡು. ನಡೀತೈತಿ ಚಾ ಕಲರ್ ಬರತೇತಿ'

"ಎದ್ದ ಬರ್ತೀರೋ? ಅಲ್ಲೇ ಹಾಸಿಗೆಯೊಳಗ ಕುಂತ ಕುಡಿತೀರೋ"

‘ಬಂದೆ ಬಂದೆ’ ಎನ್ನುತ್ತ ಒಲೆಯ ಮುಂದೆ ಹೆಂಡತಿಯ ಹತ್ತಿರ ಹೋಗಿ ಕುಳಿತ. ಗಂಡ–ಹೆಂಡತಿ ಇಬ್ಬರೂ ಒಲೆಯ ಬೆಂಕಿಯ ಮುಂದೆ ನಗುನಗುತ್ತ ಚಹಾದಂತಿರುವ ಚಹಾವನ್ನು ಕುಡಿಯಲು ಕುಳಿತರು. ಮಂದವಾದ ಒಲೆಯ ಬೆಂಕಿಯ ಪ್ರಕಾಶ ಹೆಂಡತಿಯ ಮುಖದ ಮೇಲೆ ಬಿದ್ದು ಆಕೆ ಮತ್ತಷ್ಟು ಸುಂದರವಾಗಿ ಕಂಡಳು. ಕ್ರಾಂತಿಯನ್ನು ಸಾಧಿಸಿದ ಸುಸಂಸ್ಕೃತ ಮಹಿಳೆಯಾಗಿ ಆಕೆ ಕಂಗೊಳಿಸಿದಳು.

‘ಓಹೋ ! ನನಗೆ ಈಗ ಕ್ರಾಂತಿ ಅಂದ್ರೆ ಏನಂತ ತಿಳೀತು’ ಆತ ಕ್ರಾಂತಿ, ಚಳವಳಿಯ ವಿಷಯವನ್ನು ಮತ್ತೆ ತೆಗೆದ.

“ಮತ್ತೇನು ಹೋರಾಟ ನಿಮ್ಮದು? ನೀವು ಏನ ಮಾಡ್ತೀರೋ. ಅದೇನು ಸಾಧಿಸ್ತೀರೋ ನನಗ ಒಂದೂ ತಿಳಿಯಂಗಿಲ್ಲ. ಅದರ ಸಲುವಾಗಿ ಕೆಲಸ ಬಿಟ್ಟು ಸುಮ್ಮನ ಕೂಡತಿರೇನು? ಆಚಿ ವರ್ಷ ಶಾಲೆ ಮುಂದೆ ನಡೆದಂಥ ಚಳವಳಿಯೊಳಗ ನಿಮಗ ಪೋಲೀಸರ ಲಾಠಿ ಪೆಟ್ಟು ಬಿದ್ದಿತ್ತು. ಮರತಿರೇನು?”

‘ಇಲ್ಲ’ ಅವನು ಸ್ವಲ್ಪ ಮೌನವಾದ. ‘ಹಂಗಲ್ಲ. ಕ್ರಾಂತಿಯೆಂದರೆ..’ ಅಷ್ಟರಲ್ಲಿ ಬೆಳಗಾಯಿತೆಂದು ಕೋಳಿ ಕೂಗಿದ್ದು ಕೇಳಿಸಿತು. ಚಹಾದ ನಂತರ ಮುಂಜಾನೆಯ ಕೋಳಿಯ ಕೂಗಿಗೆ ಈಗ ಅವನು ಮತ್ತಷ್ಟು ಪ್ರಸನ್ನನಾದ. ‘ಕೇಳಿದಿಯೇನು ಕೋಳಿ ಕೂಗಿದ್ದು. ಅದು ಕೂಡ ಕ್ರಾಂತಿನೇ. ಕ್ರಾಂತಿಯ ಘೋಷಣೆಯನ್ನ ಅದು ಮಾಡ್ತು’

ಅವನ ಮುಖ ಮಂದಹಾಸದಿಂದ ಬೆಳಗತೊಡಗಿತು. ಹೆಂಡತಿ ಅಚ್ಚರಿಯಿಂದ ಅವನೆಡೆಗೆ ನೋಡಿದಳು. ಈಗ ಇನ್ನೂ ಹಲವಾರು ಕೋಳಿಗಳು ಅರುಣೋದಯಕ್ಕೆ ನಾದ ತುಂಬಿದವು. ಇದು ಕ್ರಾಂತಿಯ ಘೋಷಣೆ ಎನ್ನುವುದರಲ್ಲಿ ಆತನಿಗೆ ಯಾವ ಅನುಮಾನವೂ ಉಳಿಯಲಿಲ್ಲ.







'ಪರದೇಮೇ ರಹನೇ ದೋ ಪರದಾ ನ ಹಟಾವೋ' ಬಹಳ ಹಳೆಯದಾದ ಹಿಂದಿ ಹಾಡು ಅತ್ಯಾಧುನಿಕ ಹಿಂದಿ ಛಾನಲ್ಲಿನಲ್ಲಿ ಕೇಳಿಬರುತ್ತಿತ್ತು.

ಶರ್ಮರ ಮಾತೃಭಾಷೆ ತೆಲುಗಾದರೂ ಹಿಂದಿ ಹಾಡುಗಳೆಂದರೆ ಪಂಚಪ್ರಾಣ. ಅವುಗಳ ಇಂಪು, ಸಾಹಿತ್ಯ ಅವರನ್ನು ತುಂಬಾ ಆಕರ್ಷಿಸುತ್ತಿದ್ದವು.

ಶರ್ಮಾ ಆಗಷ್ಟೆ ಶಾಲೆಯಿಂದ ಬಂದಿದ್ದರು. ಅವರ ಮಡದಿ ಶ್ಯಾಮಲ ಟೀ ತಂದರು. 'ಉರ್ದು ಮೇಷ್ಟ್ರು ಯೂಸೂಫರ ಮನೆಗೆ ಹೋಗಿದ್ದೆ. ಇವತ್ತು ಅವರ ಮನೇಲೇ ಒಳ್ಳೆ ಟೀ ಆಯ್ತು' ಅಂದರು, ಪರೋಕ್ಷವಾಗಿ ಆಕೆ ತಂದ ಟೀ ಬೇಡವೆಂದು ಸೂಚಿಸುತ್ತ. ಆ ಮಾತಿನಿಂದ ಆಕೆ ಟೀಯೊಂದಿಗೆ ಹಿಂದಿರುಗಿದರು.

ಯೂಸೂಫ್ ಮತ್ತು ಶರ್ಮಾ ಅನೇಕ ವರ್ಷಗಳಿಂದ ಒಂದೇ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದರು. ಯೂಸೂಫರು ಉರ್ದುವನ್ನು, ಶರ್ಮರು ಸಮಾಜ ವಿಜ್ಞಾನವನ್ನು ಬೋಧಿಸುತ್ತಿದ್ದರು. ಇಬ್ಬರೂ ಕೊಂಚ ಗಂಭೀರ ಸ್ವಭಾವದವರು. ಬಿಡುವಿನ ವೇಳೆಯಲ್ಲಿ ಯೂಸೂಫರು ಉರ್ದು ಪುಸ್ತಕಗಳನ್ನು ಓದುತಿದ್ದರು. ಶರ್ಮರು ಯಾವುದಾದರು ಇತಿಹಾಸದ ಗ್ರಂಥವನ್ನು ತಿರುವಿ ಹಾಕುತ್ತಿದ್ದರು.

ಒಂದು ದಿನ ಶರ್ಮರಿಗೆ ಮುಸ್ಲಿಂ ಧರ್ಮಗ್ರಂಥ ಕುರಾನ್‌ನಲ್ಲಿ ಏನು ಬರೆದಿದೆಯೊ ಎಂದು ತಿಳಿದುಕೊಳ್ಳಬೇಕೆನಿಸಿತು. ಅದನ್ನೇ ಯೂಸೂಫರಿಗೆ ಹೇಳಿದರು. ಅದಕ್ಕವರು 'ಶರ್ಮಾ ಭಾಯ್, ನಾನು ಹೇಳುವುದಕ್ಕಿಂತ ನೀವೇ ಕುರಾನ್ ಗ್ರಂಥವನ್ನು ಓದಿ. ಇನ್ನೂ ಚೆನ್ನಾಗಿ ತಿಳಿಯುತ್ತೆ' ಎಂದು ಸಲಹೆ ಕೊಟ್ಟರು. 'ನಿಮ್ಮ ಕುರಾನ್ ಅರಬ್ಬಿ ಭಾಷೆಯಲ್ಲಿರುವುದಲ್ಲ' ಎಂದು ಅನುಮಾನ ವ್ಯಕ್ತಪಡಿಸಿದರು, ಶರ್ಮ. ಅದಕ್ಕೆ ಅವರು ತೆಲುಗಿನಲ್ಲಿಯೂ ಇದೆಯೆಂದು, ಮರುದಿನವೇ ಒಂದು ತೆಲುಗು ಕುರಾನನ್ನು ತಂದು ಓದಿರೆಂದು ಕೊಟ್ಟರು. ಅದು ತೆಲುಗು ಮಾತನಾಡುವ ಮುಸ್ಲೀಮರಿಗೆಂದು ಹಮೀದುಲ್ಲಾ ಷರೀಫ್ ಎಂಬ ಲೇಖಕ ಬರೆದ ಗ್ರಂಥ. ಶರ್ಮಾ ಅದನ್ನು ಒಂದು ವಾರದಲ್ಲಿಯೇ ಓದಿ ಹಿಂದಿರುಗಿಸಿದರು.

ಅಲ್ಲಿಯವರೆಗೆ ಅಷ್ಟಕ್ಕಷ್ಟೆ ಇದ್ದ ಅವರ ಪರಿಚಯ, ನಂತರದಲ್ಲಿ ಗಾಢಗೊಂಡು ಕ್ರಮೇಣ ಸ್ನೇಹವಾಗಿ ಪರಿಣಮಿಸಿತು.

ಅವರಿಬ್ಬರಿಗೆ ಬಿಡುವು ಸಿಕ್ಕಿದಾಗಲೆಲ್ಲ ಆ ಈ ವಿಷಯಗಳೊಂದಿಗೆ ಧರ್ಮಗಳ ಕುರಿತು, ಮುಖ್ಯವಾಗಿ ಇಸ್ಲಾಂ ಮತ್ತು ಹಿಂದೂ ಧರ್ಮಗಳ ಕುರಿತು ಚರ್ಚಿಸುತ್ತಿದ್ದರು. ಚರ್ಚೆಗೆ ಕಾವೇರಿದರೂ ಸಂಯಮವನ್ನು ಕಳೆದುಕೊಳ್ಳುತ್ತಿದ್ದವರಲ್ಲ. ಯಾರೊಂದಿಗೂ ಬೆರೆಯದ ಉರ್ದು ಮೇಷ್ಟ್ರು, ಶರ್ಮರೊಂದಿಗೆ ಆಪ್ತವಾಗಿದ್ದುದು ಉಳಿದ ಸಹೋದ್ಯೋಗಿಗಳಿಗೆ ಕೊಂಚ ಆಶ್ಚರ್ಯವನ್ನು, ಅಸೂಯೆಯನ್ನು ಉಂಟುಮಾಡಿತ್ತು.

ಶಾಲೆ ಮುಗಿದ ನಂತರ ಇಬ್ಬರೂ ಜೊತೆಯಾಗಿ ಮನೆಗಳಿಗೆ ಹೋಗುತ್ತಿದ್ದರು. ದಾರಿಯಲ್ಲಿ ಮೊದಲಿಗೆ ಯೂಸೂಫರ ಮನೆ ಬರುತ್ತದೆ.

ಒಂದು ದಿನ ಶಾಲೆ ಬಿಟ್ಟ ನಂತರ ಇಬ್ಬರೂ ಅದೂ ಇದೂ ಮಾತನಾಡುತ್ತ ಮನೆಯತ್ತ ಹೊರಟಿದ್ದರು. ಯೂಸೂಫರ ಮನೆ ಬಂದಾಗ 'ಶರ್ಮಾ ಭಾಯ್, ಇವತ್ತು ನಮ್ಮ ಮನೇಗೆ ಬನ್ನಿ. ಒಂದು ಸಲ ನಮ್ಮ ಮನೇನ ನೋಡಿ ಹೋಗಿ' ಎಂದು ಆಹ್ವಾನಿಸಿದರು. ಆತ ಆಪ್ಯಾಯತೆಯಿಂದ ಕರೆದಾಗ ನಿರಾಕರಿಸುವುದು ತರವಲ್ಲವೆಂದು ಶರ್ಮಾ ಸಮ್ಮತಿಸಿದರು.

ಶರ್ಮರು ಮುಸ್ಲಿಮರೊಬ್ಬರ ಮನೆಗೆ ಹೋದುದು ಅದೇ ಪ್ರಥಮವಾದುದರಿಂದ ಕುತೂಹಲದಿಂದ ಎಲ್ಲವನ್ನೂ ಗಮನಿಸಿದರು. ಉರ್ದು ಮೇಷ್ಟ್ರು ಮಕಮಲ್ ಬಟ್ಟೆ ಹೊದೆಸಿದ್ದ ಕುರ್ಚಿಯೊಂದನ್ನು ತೋರಿಸಿ, ಕುಳಿತುಕೊಳ್ಳುವಂತೆ ಹೇಳಿದರು. ಶರ್ಮ ಕುಳಿತುಕೊಂಡರು. ಅದು ಮುಂದಿನ ಕೋಣೆ. ಸೋಫಾಗಳು, ಕುರ್ಚಿಗಳನ್ನು ಅಚ್ಚುಕಟ್ಟಾಗಿ ಜೋಡಿಸಿದ್ದರು. ಒಂದು ಬದಿಯಲ್ಲಿ ಪುಸ್ತಕಗಳ ರ್‍ಯಾಕಿತ್ತು. ಅದರ ತುಂಬ ಮುಸ್ಲಿಂ ಧರ್ಮಗ್ರಂಥಗಳಿದ್ದವು. ಪುಸ್ತಕಗಳ ಅರೆಯ ಮೇಲೆ ಎಕ್ಸ್ ಆಕಾರದ ಒಂದು ಮರದ ಪೀಠ(ವ್ಯಾಸಪೀಠ)ವಿತ್ತು. ಅದರಲ್ಲಿ ಒಂದು ಉದ್ಗ್ರಂಥವೂ ಇತ್ತು. ಬಹುಶಃ ಅದು ಕುರಾನ್ ಇದ್ದಿರಬಹುದೆಂದುಕೊಂಡರು. ಎದುರಿಗಿದ್ದ ಗೋಡೆಯ ಮೇಲೆ ಉರ್ದು ಕ್ಯಾಲೆಂಡರನ್ನು ನೇತುಹಾಕಿದ್ದರು. ಇನ್ನೊಂದು ಗೋಡೆಗೆ ಅಸಂಖ್ಯಾತ ಜನ ಸಂದಣಿಯಿದ್ದ ಒಂದು

ಮಸೀದಿಯ ಚಿತ್ರವಿತ್ತು. ಗೋಡೆಯ ಪಕ್ಕದಲ್ಲಿ ಶುಭ್ರವಾದ ನೆಲದ ಮೇಲೆ ಚಿಕ್ಕ ಶಿವಾಸಿಯೊಂದನ್ನು ಹಾಸಲಾಗಿತ್ತು. ಯೂಸೂಫರು ದಿನವೂ ಅದರ ಮೇಲೆ ನಮಾಜು ಮಾಡುವರೆಂದುಕೊಂಡರು ಶರ್ಮಾ.

ಶರ್ಮರು ಕೋಣೆಯನ್ನು ಪರಿಕಿಸುತ್ತಿದ್ದಾಗ ಯೂಸೂಫರು, 'ನಸೀಮಾ ಬೇಗಂ, ಮೆಹಮಾನ್ ಆಯೇ ಹೈ. ದೋ ಪ್ಯಾಲೆ ಚಾಯ್ ಬನಾಕರ್ ಭೇಜಿಯೇ' ಎಂದು ಒಳಗಿದ್ದ ಮಡದಿಗೆ ಕೇಳಿಸುವಂತೆ ಗಟ್ಟಿಯಾಗಿ ಹೇಳಿ ಶರ್ಮರ ಮುಂದಿದ್ದ ಸೋಫಾದಲ್ಲಿ ಕುಳಿತರು. ಅವರ ಉಚ್ಚಾರಣೆ, ಷೇರ್ವಾನೀ, ಪೈಜಾಮಾ, ತಲೆಯ ಮೇಲಿನ ಟೋಪಿ ಹೈದರಾಬಾದಿನ ನಿವಾಸಿಗಳನ್ನು ನೆನಪಿಗೆ ತರುತ್ತಿದ್ದವು.

ತಾವು ಕುಳಿತಿದ್ದುದು ಕೋಣೆಯಲ್ಲ, ದೊಡ್ಡ ಹಾಲು ಎಂದು, ಮಧ್ಯೆ ದೊಡ್ಡ ಪರದೆಯಿಂದ ಹಾಲನ್ನು ಎರಡಾಗಿ ವಿಭಾಗಿಸಿದ್ದುದನ್ನು ಶರ್ಮಾ ಗಮನಿಸಿದರು. ಉರ್ದು ಮೇಷ್ಟ್ರು ಟೀ ಮಾಡಿಕೊಡೆಂದು ಮಡದಿಗೆ ಹೇಳಿದಾಗ ಪರದೆಯತ್ತಲಿಂದ 'ಜೀ ಅಭೀ' ಎಂಬ ಧ್ವನಿ ಕೇಳಿಸಿತು.

ನಂತರ ಅವರು ಸ್ವಲ್ಪ ಹೊತ್ತು ಮಾತಿನಲ್ಲಿ ಮಗ್ನರಾಗಿದ್ದರು. ಅಫ್ಘನ್ ಯುದ್ಧ, ವಿಶೇಷವಾಗಿ ಭಾರತ – ಪಾಕ್ ದೇಶಗಳ ನಡುವೆ ಕವಿದು ಬರುತ್ತಿರುವ ಯುದ್ಧದ ಕಾರ್ಮೋಡಗಳನ್ನು ಕುರಿತ ವಿಚಾರಗಳು ಅವರ ಮಾತಿನಲ್ಲಿ ಸೇರಿದ್ದವು. ಹೀಗವರು ಮಾತಿನಲ್ಲಿ ತೊಡಗಿದ್ದಾಗ ಪರದೆ ಹಿಂದಿನಿಂದ ಮೃದು ಪಾದಗಳ ಸಪ್ಪಳ, ಅದರೊಂದಿಗೆ ಸಣ್ಣದಾದ ಕೆಮ್ಮಿನ ಶಬ್ದ ಕೇಳಿಬಂದಿತು. ಸ್ವಲ್ಪವೇ ಸರಿಸಿದ ಪರದೆಯ ಮರೆಯಿಂದ ಹೊಂಬಣ್ಣದ ಎರಡು ಸುಂದರ ಕೈಗಳು, ಅವುಗಳಲ್ಲಿ ಹೊಗೆಯಾಡುವ ಟೀ ಕಪ್ಪು–ಸಾಸರ್ಗಳು ಕಂಡವು. ಯೂಸೂಫರು



ಕಪ್ಪು ಸಾಸರನ್ನು ತೆಗೆದುಕೊಂಡು ಶರ್ಮರ ಬಳಿಗೆ ಬಂದು ಕೊಟ್ಟರು. ನಂತರ ಇನ್ನೊಂದು ಕಪ್ಪು ಸಾಸರ್ ತೆಗೆದುಕೊಂಡು ಬಂದು ಸೋಫಾದಲ್ಲಿ ಕುಳಿತರು. ಟೀ ಕುಡಿಯತೊಡಗಿದ ಶರ್ಮರಿಗೆ ಆ ರುಚಿ, ಪರಿಮಳ ಒಮ್ಮೆಗೇ ತಮ್ಮ ಅಕ್ಕ ಮಾಡುತ್ತಿದ್ದ ಟೀಯನ್ನು ನೆನಪಿಗೆ ತಂದಿತು. ತಮ್ಮ ಅಕ್ಕ ಅತ್ತಿಗೆಯತೆಗೆ ಪ್ರತಿರೂಪವಾಗಿದ್ದರು. ಎಲ್ಲಿಯೋ ವಿದೇಶದಲ್ಲಿರುವ ಆಕೆಯನ್ನು ಈ ಟೀ ನೆನೆಯುವಂತೆ ಮಾಡಿತೆಂದುಕೊಂಡು, ಬಹಳ ಅಪರೂಪವೆಂಬಂತೆ ಆ ಟೀಯನ್ನು ಸವಿದರು.

'ಯೂಸೂಫರೇ, ಟೀ ತುಂಬಾ ಅದ್ಭುತವಾಗಿದೆ'ಯೆಂದು ಮನದುಂಬಿ ನುಡಿದರು ಶರ್ಮ. ಆಗ ಎಲ್ಲಿಂದಲೋ 'ಅಲ್ಲಾಹು ಅಕ್ಬರ್' ಎಂಬ ಕೂಗು ಕೇಳಿಬಂದಿತು. 'ಯೂಸೂಫರೇ, ನೀವೀಗ ಮಸೀದಿಗೆ ಹೋಗುವಿರೆಂದುಕೊಳ್ಳುವೆ. ನಾನಿನ್ನು ಹೋಗಿ ಬರುವೆ. ಒಳ್ಳೆಯ ಟೀಗೆ ಥ್ಯಾಂಕ್ಸ್, ಮತ್ತೆ ನಾಳೆ ಭೇಟಿಯಾಗೋಣ' ಎಂದು ಹೇಳಿ ಬೀಳ್ಕೊಂಡರು.

ಆದರೆ ಯೂಸೂಫರ ಮನೆ, ಆ ವಾತಾವರಣವನ್ನು ಕಂಡ ನಂತರ ಅವರಲ್ಲಿ ಅನೇಕ ವಿಚಾರಗಳು ಮೂಡಿದವು. ಇಸ್ಲಾಮಿನಲ್ಲಿ ತುಂಬಾ ಶಿಸ್ತಿನ ಜೀವನವುಂಟೆಂದು ಅನ್ನಿಸಿತು. ಆದರೆ ಮೇಷ್ಟ್ರು ಮನೆಯ ಹಾಲಿನಲ್ಲಿನ ಪರದೆ, ಪಕ್ಕದ ಗೋಡೆಗೆ ನೇತುಹಾಕಿದ ಕಪ್ಪು ಬುರಖಾ ಅವರ ಮನಸ್ಸಿನಲ್ಲಿ ಸುಳಿಯಂತೆ ತಿರುಗುತ್ತಿದ್ದವು. ಅವೆರಡೂ ಅವರ ಪ್ರಿಯ ಮಿತ್ರ ಯೂಸೂಫರಿಗೂ ತನಗೂ ನಡುವೆ ದುರ್ಭೇದ್ಯವಾದ ಅಡ್ಡಗೋಡೆಗಳಂತೆ ಇರುವುದಾಗಿ ಅನ್ನಿಸಿತು. ತನ್ನ ಅಭಿಮಾನದ ಕವೀಂದ್ರರ ಕವಿತೆಯ ಸಾಲುಗಳು ನೆನಪಾದವು.

'ಗಗನದಿಂದಿಣುಕಿ ನೋಡೆ

ಹರಿದ ಬುರಖಾಗಳ ತೊಟ್ಟ ಬೂಬಮ್ಮರ

ನಡೆವ ಬಾವಲಿಗಳ ಕಂಡ ಹಾಗೆ'

ಆ ನಂತರದಲ್ಲಿ ಅನೇಕ ಸಲ ಯೂಸೂಫರ ಮನೆಯಲ್ಲಿ ಹರಟುತ್ತ ಟೀ ಕುಡಿದು ಬರುವಂತಾಯಿತು.

ಒಂದು ದಿನ ಹಠಾತ್ತಾಗಿ ಶರ್ಮರ ವರ್ಗಾವಣೆಯ ಆದೇಶ ಬಂದಿತು. ಸಹೋದ್ಯೋಗಿ ಉಪಾಧ್ಯಾಯರು ಶರ್ಮರಿಗೆ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿದರು. ಅನೇಕ ವರ್ಷಗಳ ಕಾಲ ಕೆಲಸ ಮಾಡಿದ ಶಾಲಾ ವಾತಾವರಣ, ಪ್ರೇಮಾನುರಾಗ ಬೆಸೆದ ಸಹೋದ್ಯೋಗಿಗಳೊಂದಿಗಿನ ಅನುಬಂಧ, ಎಲ್ಲದರಿಂದ ದೂರ ಹೋಗುತ್ತಿರುವೆ ಎಂದುಕೊಂಡಾಗ ಶರ್ಮರಿಗೆ ಅತೀವ ವೇದನೆಯುಂಟಾಯಿತು.

ಸಮಾರಂಭದ ಗಡಿಬಿಡಿ ಮುಗಿದ ನಂತರ ಯೂಸೂಫರೊಂದಿಗೆ 'ಗುರುವೇ, ಈಗ ನಿಮ್ಮೊಡನೆ ನಿಮ್ಮ ಮನೆಗೆ ಬರುತ್ತಿರುವೆ. ನಿಮ್ಮ ಮನೆಯಲ್ಲಿ ಸ್ವಲ್ಪ ಹೊತ್ತಿದ್ದು, ಮುಖ್ಯವಾಗಿ ನಿಮ್ಮ ಶ್ರೀಮತಿ ಕೊಡುವ ಟೀ ಕುಡಿಯಬೇಕೆಂಬ ಆಸೆಯಾಗುತ್ತಿದೆ. ಇನ್ನು ನಾವು ಭೇಟಿಯಾಗುವೆವೊ ಇಲ್ಲವೊ' ಎಂದು ಹೇಳುವಾಗ ಇಬ್ಬರ ಕಣ್ಣುಗಳಲ್ಲಿಯೂ ನೀರಾಡಿತು.

ಟೊಡಲೇ ಯೂಸೂಫರು ಶರ್ಮರನ್ನು ತಮ್ಮ ಎದೆಗವುಚಿಕೊಂಡು 'ಶರ್ಮಾ ಭಾಯ್, ಅಲ್ಲಾ ಆಪ್ ಕಾ ಬಲಾಯಿ ಕರೇ. ಸಹೀ ಸಲಾಮತ್ ರಖೇ" ಅನ್ನುವಾಗ ಅವರ ಗಂಟಲ ಸೆರೆಯುಬ್ಬಿಬಂದಿತು. ಅದು ಅವರ ಸ್ವಗತವೋ ಇಲ್ಲ ತನಗೆ ಹೇಳುತ್ತಿದ್ದರೋ ಎಂಬುದು ಶರ್ಮರಿಗೆ ಅರ್ಥವಾಗಲಿಲ್ಲ. ಮತ್ತೆ ವಾಸ್ತವ ಜಗತ್ತಿಗೆ ಬಂದವರಂತೆ 'ಖಂಡಿತಾ ಬನ್ನಿ ಶರ್ಮಾ ಭಾಯ್' ಎಂದು ಸಾದರದಿಂದ ಮನೆಗೆ ಕರೆದೊಯ್ದರು.

ಯೂಸೂಫರು ದಾರಿಯುದ್ದ ಶರ್ಮರಿಗೆ ಏನೇನೋ ಹೇಳುತ್ತಿದ್ದರು. ಆದರೆ ಅದು ಶರ್ಮರ ಕಿವಿಗೆ ತಾಕುತ್ತಿರಲಿಲ್ಲ. ಅವರ ಮನೆಯಲ್ಲಿ ಉಕ್ಕಿನ ಗೋಡೆಯಂಥ ತೆರೆಯ ಹಿಂದಿರುವ ಸ್ತ್ರೀ ಮೂರ್ತಿಯನ್ನು ನೋಡಬಲ್ಲೆನೆ? ಆಕೆಯ ಬಗ್ಗೆ ತನ್ನ ಮನಸ್ಸಿನಲ್ಲಿರುವ ಸೋದರಭಾವವನ್ನು ಹೇಗೆ ವ್ಯಕ್ತಪಡಿಸುವುದು? ಆ ಮನೆಗೆ ಹೋದರೆ ತನ್ನಕ್ಕನ ನೆನಪಾಗುತ್ತದೆ. ಆಕೆ ಕೊಡುವ ರುಚಿಕಟ್ಟಾದ ಟೀ ಕುಡಿದ ಪ್ರತಿ ಸಲವೂ ಆಕೆಗೆ ಕೃತಜ್ಞತೆ ಸಲ್ಲಿಸಬೇಕೆಂದುಕೊಳ್ಳುತ್ತಿದ್ದರು. ಆದರೆ ಆಕೆಗದನ್ನು ತಿಳಿಸುವುದು ಹೇಗೆಂದು ತಿಳಿಯುತ್ತಿರಲಿಲ್ಲ.

'ಯೂಸೂಫರೆ ನಿಮ್ಮಾಕೆಯನ್ನು ಕರೆಯಿರಿ. ಆಕೆ ಅನೇಕ ಸಲ ನನಗೆ ಅಮೃತದಂತಹ ಟೀ ಕೊಟ್ಟಿದ್ದಾರೆ. ಈ ಮನೆಗೆ ಬಂದ ಪ್ರತಿ ಬಾರಿಯೂ ಆ ಟೀ ಕುಡಿದ ಪ್ರತಿಯೊಂದು ಸಲವೂ ನಮ್ಮ ಅಕ್ಕ ನೆನಪಾಗುವಳು. ನಾನು ಆಕೆಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸಬೇಕೆಂದುಕೊಳ್ಳುತ್ತಿರುವೆ' ಎಂಬ ಮನದ ಮಾತುಗಳು ಕೊರಳಿನವರೆಗೆ ಬಂದು ನಿಂತುಬಿಟ್ಟವು. ಆಕೆಯನ್ನು ತೋರಿಸಿ ಅನ್ನುವುದು ಮರ್ಯಾದೆಯಲ್ಲವೇನೊ ಎಂದು ಆ ಆಲೋಚನೆಯನ್ನು ಶರ್ಮರು ಹೊರಗಿಟ್ಟರು. ಎಂದಿನಂತೆ ಯೂಸೂಫರು ತಂದ ಟೀ ಕುಡಿದು, ಭಾರವಾದ ಹೃದಯದೊಂದಿಗೆ ಅಂತಿಮ ವಿದಾಯ ಹೇಳಿದರು. ದೇವಾಲಯದವರೆಗೆ ಹೋಗಿ ಒಳಗಿನ ದೇವತೆಯನ್ನು ದರ್ಶಿಸಲಾರದೆ ಹೋದ ಭಕ್ತನಂತೆ ನಿರಾಸೆಯಿಂದ ಮನೆಯತ್ತ ಹೆಜ್ಜೆ ಹಾಕಿದರು.





# ಶಿಕ್ಷೆ

ಮೂಲ: ರವೀಂದ್ರನಾಥ ಟಾಗೋರ್

ಇಂಗ್ಲಿಷ್‌ಗೆ: ಕನ್ನಡಕ್ಕೆ: ಡಾ. ಪ್ರಮೀಳಾ ಮಾಧವ್

ಅಣ್ಣತಮ್ಮಂದಿರಿಬ್ಬರೂ ಬೆಳಗ್ಗೆ ಬೆಳಗ್ಗೆ ಭಾರವಾದ ಕುದುಗೋಲು ತೆಗೆದುಕೊಂಡು ಹೊಲದ ಕೆಲಸಕ್ಕೆ ಹೊರಟರು.ಅದಕ್ಕಿಂತ ಮೊದಲೇ ಅವರ ಪತ್ನಿಯರು ಪರಸ್ಪರ ಜಗಳ, ಕದನಕ್ಕೆ ಇಳಿದಿದ್ದರು.ಅಕ್ಕಪಕ್ಕದ ಜನರಿಗೆ ಪ್ರತಿದಿನವೂ ನಡೆಯುವ ಈ ಗಲಾಟೆ ಕೇಳಿಕೇಳಿ ಅಭ್ಯಾಸವಾಗಿತ್ತು. ಹೆಂಗಸರ ಕಿರುಚಾಟ ಕಿವಿಗೆ ಬಿದ್ದಾಕ್ಷಣ ಅವರು, 'ಹೋ. ಮತ್ತೆ ಶುರುವಾಯ್ತು.'ಎನ್ನುತ್ತಿದ್ದರು.ಏಕೆಂದರೆ ಈ ಜಗಳವನ್ನು ಪ್ರತಿದಿನವೂ ನೋಡುತ್ತಿದ್ದ ಅವರಿಗೆ ಅದೇನೂ ಆಶ್ಚರಿಯೆನಿಸುತ್ತಿರಲಿಲ್ಲ. ಅದೊಂದು ಪ್ರತಿದಿನದ ಸಹಜ ವ್ಯವಹಾರವಾಗಿತ್ತು.ಪ್ರತಿದಿನ ಸೂರ್ಯೋದಯವಾಗುತ್ತಿದ್ದರೆ ಯಾರಾದರೂ ಅದನ್ನು ಏಕೆಂದು ಪ್ರಶ್ನಿಸುತ್ತಾರೆಯೇ? ಹಾಗಾಗಿ ಆ ಮನೆಯ ಹೆಂಗಸರು ತಮ್ಮ ಗೃಹವಾರ್ತೆಗೆ ಸಂಬಂಧಿಸಿದಂತೆ ಯಾವಾಗ ಕಾದಾಡಲು ಹೊರಟರೂ ಯಾರು ಅದರ ಬಗ್ಗೆ ತಲೆ ಕೆಡಿಸುತ್ತಿರಲಿಲ್ಲ. ಅದರ ಕಾರಣವನ್ನು ತಿಳಿಯುವ ಕುತೂಹಲವನ್ನೂ ತೋರಿಸುತ್ತಿರಲಿಲ್ಲ.

ಪತ್ನಿಯರ ಈ ಗುದ್ದಾಟಗಳು ನೆರೆಕರೆಯವರಿಗಿಂತ ಅವರ ಗಂಡಂದಿರಿಗೇ ಹೆಚ್ಚು ಹಿಂಸೆಯನ್ನು ಕೊಡುತ್ತಿದ್ದುವು.ಆದರೆ ಅವರು ಕೂಡ ಅದನ್ನು ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಜೀವನಪಥದಲ್ಲಿ ಸಾಗುವ ಪಥಿಕರು ತಮ್ಮ ಗಾಡಿಯ ಒಂದು ಚಕ್ರ ಸಡಿಲಾದಾಗ ಅಥವಾ ಕಳಚಿ ದೂರವಾದಾಗ ಯಾವ ರೀತಿಯಲ್ಲಿ ಯೋಚಿಸುತ್ತಾರೋ

ಹಾಗೆಯೇ ಅವರೂ ಯೋಚಿಸುತ್ತಿದ್ದರು.ನಿಜ ಹೇಳಬೇಕೆಂದರೆ ಜಗಳ ಕದನಗಳಿಲ್ಲದೆ ವಾತಾವರಣ ಮೌನವಾಗಿದ್ದಗಲೇ ಅವರು ಅತೀವವಾದ ಭಯ, ಆತಂಕ ಮತ್ತು ಅಪಾಯದ ಮುನ್ಸೂಚನೆಯಿಂದ ತಲ್ಲಣಗೊಳ್ಳುತ್ತಿದ್ದರು.

ನಮ್ಮ ಈ ಕತೆ ಪ್ರಾರಂಭವಾದುದು ಹೀಗೆ.: ಒಂದು ದಿನ ಕೆಲಸವನ್ನು ಮುಗಿಸಿ ಸಂಜೆಯ ಹೊತ್ತು ಸೋದರರಿಬ್ಬರೂ ಸುಸ್ತಾಗಿ ಮನೆಗೆ ಮರಳಿದಾಗ ಮನೆಯಲ್ಲಿ ಗಾಢವಾದ ಮೌನ ನೆಲಸಿತ್ತು. ಮನೆಯ ಹೊರಗಿನ ವಾತಾವರಣವೂ ಮ್ಲಾನವಾಗಿತ್ತು.ಆದಿನ ಮಧ್ಯಾಹ್ನ ಬಿರುಸಾದ ಮಳೆ ಹುಯ್ದಿದ್ದು ಆಕಾಶದಲ್ಲಿ ಇನ್ನೂ ಮೋಡಗಳು ದಟ್ಟವಾಗಿ ಕವಿದಿದ್ದುವು.ಗಾಳಿಯ ಅಲುಗಾಟವೂ ಇರಲಿಲ್ಲ. ಮನೆಯ ಸುತ್ತು ಮುತ್ತಲಿದ್ದ ಗಿಡಗಳೂ, ಪೊದೆಗಳೂ ವರ್ಷಾಘಾತಕ್ಕೆ ತತ್ತರಿಸಿದ್ದುವು.ಮಳೆಬಿದ್ದು ನೆಲವೆಲ್ಲ ರಾಡಿಯಾಗಿ ಸೆಣಬಿನ ಹೊಲವೆಲ್ಲ ನೀರಲ್ಲಿ ಮುಳುಗಿ ಎತ್ತೆತ್ತಲೂ ಒಂದು ವಿಚಿತ್ರವಾದ ವಾಸನೆ ಹೊಡೆಯುತ್ತಿತ್ತು.ಕೊಟ್ಟಿಗೆಯ ಹಿಂಭಾಗದ ಕೊಳದಿಂದ ಕಪ್ಪೆಗಳ ವಟಗುಟ್ಟುವಿಕೆ, ಜೀರುಂಡೆಗಳ ಜೀರಿಡುವ ಶಬ್ದವಷ್ಟೇ ಮಸುಕಾದ ಅಂತರಿಕ್ಷದಲ್ಲಿ ಕೇಳುತ್ತಿತ್ತು.

ದಟ್ಟವಾದ ಮೋಡಗಳ ಕೆಳಗೆ ಅನತಿದೂರದಲ್ಲಿ ತುಂಬಿ ಹರಿಯುವ ಪದ್ಮಾ ಸಮತಟ್ಟಾಗಿದ್ದು ಅಪಾಯದ ಮುನ್ಸೂಚನೆಯಂತೆ ಕಾಣಿಸಿತು.ಧಾನ್ಯಗಳ ಹೊಲಗದ್ದೆಗಳನ್ನು ಮುಳುಗಿಸಿದ ಪ್ರವಾಹ ಮನೆತನಕ ಸಮೀಪಿಸಿತ್ತು. ಆಕಡೆ ಈಕಡೆಗಳಲ್ಲಿ ಮಾವು, ಹಲಸುಗಳು ನದೀದಂಡೆಯ ಕೊರೆತಕ್ಕೆ ಸಿಕ್ಕಿ ಪ್ರವಾಹದಲ್ಲಿ ಮುಗ್ಗರಿಸಿ ನೀರಲ್ಲಿ ಮುಳುಗುವವನು ಪ್ರಾಣೋತ್ಕ್ರಮಣ ಸ್ಥಿತಿಯಲ್ಲಿ ಅಸಹಾಯಕನಾಗಿ ಕೈಯಾಸರೆ ಯಾಚಿಸುವಂತೆ ಕಾಣಿಸುತ್ತಿತ್ತು.

ಆದಿನ ದುಖೀರಾಮನೂ ಚಿದಂನೂ ಜಮೀನ್ದಾರನ ಬಂಗಲೆಯಲ್ಲಿ ಕೆಲಸ ಮಾಡಲು ಹೋಗಿದ್ದರು.ಮರಳಿನ ದಂಡೆಯ ಮುಂಭಾಗದಲ್ಲಿ ಭತ್ತದ ತೆನೆಗಳು ಫಸಲು ತುಂಬಿ ನಿಂತಿದ್ದುವು.ಪ್ರವಾಹ ದಂಡೆಯನ್ನು ಕೊಚ್ಚಿಕೊಂಡು ಹೋಗುವ ಮುನ್ನ ಭತ್ತದ ಕೊಯ್ಲು ಆಗಬೇಕಿತ್ತು. ಹಳ್ಳಿಯ ರೈತರೆಲ್ಲ ತಮ್ಮ ತಮ್ಮ ಹೊಲಗದ್ದೆಗಳಲ್ಲೋ ಇತರ ಹೊಲಗದ್ದೆಗಳಲ್ಲೋ ಕೆಲಸದಲ್ಲಿ ನಿರತರಾಗಿದ್ದರು. ಆ ಸಮಯದಲ್ಲಿ ಕೋರ್ಟಿನಿಂದ ಪೇದೆಯೊಬ್ಬ ಬಂದು ಅವರಿಬ್ಬರನ್ನೂ ಬಲವಂತವಾಗಿ ಕರೆದುಕೊಂಡು ಹೋದ.ಆಫೀಸಿನ ಕಟ್ಟಡ ಅಲ್ಲಲ್ಲಿ ಸೋರುತ್ತಿದ್ದು ಅದನ್ನು ತಕ್ಷಣ ರಿಪೇರಿ ಮಾಡಿಸುವ ಅಗತ್ಯವಿತ್ತು.ಅದು ಇಡೀದಿವಸ ನಡೆಯಿತು.ಮಧ್ಯಾಹ್ನದ ಊಟಕ್ಕೆ ಬರಲೂ ಅವರಿಗೆ ಬಿಡುವಾಗಿರಲಿಲ್ಲ. ಆಫೀಸಿನಲ್ಲೇ ಒಂದಷ್ಟು ಉಪಾಹಾರ ಸೇವಿಸಿದ್ದರು.ಆಗಾಗ್ಗೆ ಮಳೆಯಲ್ಲಿ ತೊಯ್ಯುತ್ತಿದ್ದರೂ ಕೆಲಸ ನಡೆಯುತ್ತಿತ್ತು.ಆದರೂ ಎಲ್ಲ ಕೆಲಸಗಾರರಂತೆ ಅವರಿಗೆ ಸರಿಯಾದ ಸಂಬಳವೂ ಸಿಗುತ್ತಿರಲಿಲ್ಲ. ಅದರ ಬದಲಿಗೆ ಅವರಿಗೆ ಸಿಗುತ್ತಿದ್ದುದು ನಿಂದೆ ಮತ್ತು ಬೈಗುಳಗಳು.

ಇಬ್ಬರು ಸೋದರರೂ ಮುಸ್ಸಂಜೆಯ ಹೊತ್ತಿನಲ್ಲಿ ಮನೆಗೆ ಮರಳಿದರು.ಅವರ ಮೈ ಕೈಯಲ್ಲೆಲ್ಲ ಕೆಸರು, ಕೊಳೆನೀರು ಮೆತ್ತಿಕೊಂಡಿತ್ತು.ಚಿಕ್ಕವನ ಹೆಂಡತಿ ಚಂದ್ರ ಉಟ್ಟ ಸೀರೆಯನ್ನು ಹರಡಿ ನೆಲದಲ್ಲಿ ಮಲಗಿದ್ದಳು.ಅವಳ ಮುಖ ಮ್ಲಾನವಾಗಿತ್ತು.ಇಡೀ ಹಗಲು ಅತ್ತು ಅತ್ತು ಆಕಾಶದಂತೆ ಕೊಡಗಟ್ಟಲೆ ನೀರು ಸುರಿಸಿ ಅವಳು ಸುಸ್ತಾಗಿದ್ದಳು.ದೊಡ್ಡವಳು

ರಾಧಾ ವೆರಾಂಡದಲ್ಲಿ ಕುಳಿತು ಬಿಕ್ಕುತ್ತಿದ್ದಳು. ಅವಳ ಮುಖದಲ್ಲೂ ದುಗುಡ ತುಂಬಿತ್ತು.ಅವಳ ಒಂದೂವರೆ ವರ್ಷದ ಮಗ ಅಳುತ್ತಿದ್ದ.ಸೋದರರು ಒಳಗೆ ಬಂದಾಗ ಆ ಮಗು ಬೆತ್ತಲೆಯಾಗಿಯೇ ಮೂಲೆಯಲ್ಲಿ ಮಲಗಿ ನಿದ್ರೆಮಾಡುತ್ತಿತ್ತು.

ತುಂಬ ಹಸಿದಿದ್ದ ದುಖೀರಾಮ ಒರಟಾಗಿಯೇ ಹೇಳಿದ: 'ಊಟ ಬಡಿಸು.'

ಮದ್ದುಗುಂಡಿನ ರಾಶಿಗೆ ಕಿಡಿ ಹಚ್ಚಿದಂತಾಗಿ ಒಮ್ಮೆಗೆ ಸ್ಫೋಟಿಸಿ ದೊಡ್ಡವಳು ಕಿರುಚಿದಳು:

'ಎಲ್ಲಿದೆ ಊಟ?ಅಡುಗೆ ಮಾಡಲು ಏನಾದರೂ ತಂದು ಹಾಕಿದ್ದೀರಾ?ನಾನೇನು ಬೀದಿಗೆ ಹೋಗಿ ಯಾಚನೆ ಮಾಡ್ಬೇಕಿತ್ತೇ?

ಇಡೀ ದಿನದ ಬಿಡುವಿಲ್ಲದ ದುಡಿಮೆಯ ಬಳಲಿಕೆ, ಹಸಿವು, ಆಯಾಸಗಳ ಜತೆಯಲ್ಲಿ ಕತ್ತಲೆ ತುಂಬಿದ ಮನೆಯ ವಾತಾವರಣ, ಪತ್ನಿಯ ವ್ಯಂಗ್ಯದ ಮಾತುಗಳು ದುಃಖೀರಾಮನನ್ನು ಕೆರಳಿಸಿದುವು.'ಏನು?ಏನಂದೆ ನೀನು?'ಎನ್ನುತ್ತ ಆತ ಕಾಡುಮೃಗದಂತೆ ಹಿಂದುಮುಂದು ಯೋಚಿಸದೆ ಒರೆಯಲ್ಲಿದ್ದ ಕತ್ತಿ ಹಿರಿದು ಅವಳ ಮೇಲೆ ಪ್ರಯೋಗಿಸಿದ.ರಾಧಾವಾರಗಿತ್ತಿಯ ಮಡಿಲಿಗೆ ಒಮ್ಮೆಗೇ ಕುಸಿದಳು. ನಿಮಿಷದೊಳಗೇ ಅವಳ ಪ್ರಾಣಪಕ್ಷಿ ಹಾರಿಹೋಯ್ತು.

'ಏನು ಮಾಡಿಬಿಟ್ಟಿರಿ?'ಚಂದ್ರ ಕಿರುಚಿದಳು.ಅವಳ ಸೀರೆ ರಕ್ತದಿಂದ ತೊಯ್ದಿತ್ತು.ಚಿದಂ ಅವಳ ಬಾಯಿಯನ್ನು ತನ್ನ ಕೈಗಳಿಂದ ಬಿಗಿಯಾಗಿ ಅದುಮಿದ. ಅವಾಕ್ಕಾದ ದುಖೀರಾಮ ಕತ್ತಿಯನ್ನು ಕೆಳಗೆ ಹಾಕಿ ಮಂಡಿಯೂರಿ ಕುಳಿತು ತಲೆಯ ಮೇಲೆ ಕೈಹೊತ್ತು ಕುಳಿತ.ಚಿಕ್ಕ ಹುಡುಗ ಎಚ್ಚೆತ್ತು ಭಯದಿಂದ ಅಳತೊಡಗಿದ.

ಹೊರಗೆ ಸಂಪೂರ್ಣ ನಿಶ್ಶಬ್ದವಾಗಿತ್ತು. ದನಕಾಯುವ ಹುಡುಗರು ಜಾನುವಾರುಗಳನ್ನು ಹೊಡೆದುಕೊಂಡು ಮನೆಗೆ ಮರಳುತ್ತಿದ್ದರು. ನದಿಯಾಚೆಗಿನ ಹೊಲದಲ್ಲಿ ಕಟಾವು ಮಾಡುತ್ತಿದ್ದ ಕೂಲಿಯಾಳುಗಳು ತಲೆಯ ಮೇಲೆ ಕೂಲಿಯ ಭತ್ತದ ಹೊರೆಯನ್ನು ಹೊತ್ತುಕೊಂಡು ಐದಾರು ಜನರಂತೆ ದೋಣಿಯಲ್ಲಿ ಕುಳಿತು ನದಿ ದಾಟಿ ತಂತಮ್ಮ ಮನೆಗಳಿಗೆ ವಾಪಸ್ಸಾಗುತ್ತಿದ್ದರು.

ಊರಿನ ಮುಖಂಡ ರಾಮಲೋಚನ ಚಕ್ರವರ್ತಿ ಒಂದು ಪತ್ರದೊಂದಿಗೆ ಪೋಸ್ಟ್ ಆಫೀಸಿಗೆ ಹೋದವನು ಸಿಗರೇಟು ಸೇದುತ್ತ ಹಿಂತಿರುಗುತ್ತಿದ್ದ.ಇದ್ದಕ್ಕಿದ್ದಂತೆ ಆತನಿಗೆ ಒಕ್ಕಲು ದುಖೀರಾಮ ಅನೇಕ ಸಮಯದಿಂದ ಬಾಡಿಗೆ ಕೊಡದೆ ಆದಿನ ಸ್ವಲ್ಪ ಹಣ ಕೊಡುವುದಾಗಿ ಹೇಳಿದ್ದು ನೆನಪಾಯ್ತು.ಅಣ್ಣತಮ್ಮಂದಿರಿಬ್ಬರೂ ಮನೆಯಲ್ಲಿದ್ದಾರೆಂದು ಖಾತ್ರಿಮಾಡಿಕೊಂಡು ಆತ ತನ್ನ ಶಲ್ಯವನ್ನು ಭುಜದ ಮೇಲೆ ಎಸೆದು ಛತ್ರಿ ಹಿಡಿದುಕೊಂಡು ಹೊರಟ.

ಮನೆಯೊಳಗೆ ಕಾಲಿಡುವಾಗಲೇ ಒಂದುರೀತಿಯ ಅಸ್ವಸ್ಥತೆ ಅವನನ್ನು ಕಾಡಿತು.ಎಲ್ಲೂ ಬೆಳಕಿಲ್ಲ.ಕತ್ತಲೆಯ ಮಸುಕು ಬೆಳಕಿನಲ್ಲಿ ಅಸ್ಪಷ್ಟವಾಗಿ ಮೂರ್‍ನಾಲ್ಕು ಆಕಾರಗಳು ಅವನಿಗೆ

ಗೋಚರಿಸಿದುವು.ವೆರಾಂಡದ ಮೂಲೆಯಿಂದ ಅಳು, ಬಿಕ್ಕಳಿಕೆಯ ಶಬ್ದ. ಚಿಕ್ಕ ಹುಡುಗ ಅಮ್ಮ ಅಳುವುದನ್ನು ನೋಡಿ ಅಳುವುದಕ್ಕೆ ಹೊರಡುವಾಗಲೆಲ್ಲ ಚಿದಂ ಅವನನ್ನು ಸುಮ್ಮನಿರಿಸುತ್ತಿದ್ದ.

'ದುಖೀ..' ರಾಮಲೋಚನ ಕರೆದ. ಆತನ ಧ್ವನಿಯಲ್ಲಿ ಆತಂಕವಿತ್ತು.

ಸುಮಾರು ಹೊತ್ತಿನಿಂದ ಪ್ರತಿಮೆಯಂತೆ ಕುಳಿತಿದ್ದ ದುಖೀರಾಮ ಅವನ ಹೆಸರು ಕೇಳಿದ ಕ್ಷಣಕ್ಕೇ ಅಸಹಾಯಕ ಮಗುವಿನಂತೆ ಜೋರಾಗಿ ಬಿಕ್ಕಿ ಬಿಕ್ಕಿ ಅಳತೊಡಗಿದ.

ಬಂದವರನ್ನು ಭೇಟಿಮಾಡಲು ಚಿದಂ ಕೂಡಲೇ ವೆರಾಂಡದಿಂದ ಅಂಗಳಕ್ಕೆ ಧಾವಿಸಿದ.

'ಏನು ಹೆಂಗಸರು ಮತ್ತೆ ಜಗಳ ವಾಡಿದರೇ?ಇಡೀ ದಿನ ಅವರು ಅಳುವುದು ಕೇಳಿಸುತ್ತಿತ್ತು.'

ಚಿದಮ್ ಅಷ್ಟು ಹೊತ್ತಿನಿಂದಲೂ ಏನು ಮಾಡಬೇಕೆಂದು ತಿಳಿಯದೆ ಒದ್ದಾಡುತ್ತಿದ್ದ.ಅನೇಕ ಅಸಾಧ್ಯವಾದ ಯೋಚನೆಗಳು ಅವನಿಗೆ ಬರುತ್ತಿದ್ದುವು.ಕೊನೆಗೆ ರಾತ್ರಿಹೊತ್ತಿನಲ್ಲಿ ಹೇಗಾದರೂ ಹೆಣವನ್ನು ಸಾಗಿಸುವುದೆಂದು ಆತ ಯೋಚಿಸಿದ್ದ.ರಾಮಲೋಚನ ಮನೆಗೆ ಬಂದಾರೆಂದು ಆತ ನಿರೀಕ್ಷಿಸಿರಲಿಲ್ಲ. ಈಗ ತಕ್ಷಣಕ್ಕೆ ಏನು ಉತ್ತರಿಸಬೇಕೆಂದೇ ಹೊಳೆಯಲಿಲ್ಲ. 'ಹೌದು.'ಆತ ತಡವರಿಸಿದ.ಇವತ್ತು ಅವರು ಸಿಕ್ಕಾಬಟ್ಟೆ ಜಗಳವಾಡುತ್ತಿದ್ದರು.



'ಆದರೆ ಅದಕ್ಕೆ ದುಖೀರಾಮ ಅಳುವುದ್ಯಾಕೆ?' ವೆರಾಂಡಕ್ಕೆ ಹೆಜ್ಜೆಯಿಡುತ್ತ ರಾಮಲೋಚನ ಕೇಳಿದ.

ಬೇರೇನೂ ತೋಚದೆ ಚಿದಂ'ಅವರ ಜಗಳದಲ್ಲಿ ಚಿಕ್ಕವಳು ದೊಡ್ಡವಳ ತಲೆಗೆ ಹರಿತವಾದ ಕತ್ತಿಯಿಂದ ಚುಚ್ಚಿದಳು.'ಎಂದ.



ತಕ್ಷಣದ ಅಪಾಯದಿಂದ ಪಾರಾಗುವ ಯೋಚನೆಯಿಂದ ಹೇಳಿದ ಮಾತುಗಳವು. ಅದರಿಂದ ಮುಂದಾಗಬಹುದಾದ ಅಪಾಯದ ಬಗ್ಗೆ ಯೋಚಿಸುವಷ್ಟು ವ್ಯವಧಾನವಿರಲಿಲ್ಲ. ಮಾತ್ರವಲ್ಲ ಈ ಭಯಂಕರ ಘಟನೆಯಿಂದ ಪಾರಾಗುವ ಸಲುವಾಗಿ ತಾನು ಹೇಳಿದ ಸುಳ್ಳು ಬೇರೆ ಬಗೆಯ ಅಪಾಯವನ್ನು ತಂದೊಡ್ಡಬಹುದೆಂಬ ಕಲ್ಪನೆಯೂ ಅವನಿಗಿರಲಿಲ್ಲ. ರಾಮಲೋಚನನ ಪ್ರಶ್ನೆಗೆ ತಕ್ಷಣ ಮನಸ್ಸಿಗೆ ತೋಚಿದ ಒಂದು ಸುಳ್ಳನ್ನು ಉದ್ಗರಿಸಿದ್ದ.

'ಅಯ್ಯೋ ದೇವರೇ, ಏನು ಹೇಳ್ತಿದ್ದೀಯಾ?ಅಂದರೆ ಆಕೆ ಅದರಿಂದ ಸತ್ತುಹೋದಳೇ?'

'ಹೌದು.'ಎನ್ನುತ್ತ ಚಿದಂ ರಾಮಲೋಚನನ ಕಾಲುಗಳನ್ನು ಹಿಡಿದುಕೊಂಡ.

ರಾಮಲೋಚನನಿಗೆ ದಿಕ್ಕೇ ತೋಚದಂತಾಯ್ತು.'ರಾಮ ರಾಮ.. ನಾನೆಂಥ ತೊಡಕಿಗೆ ಸಿಕ್ಕಿ ಹಾಕಿಕೊಂಡೆ! ನನ್ನನ್ನು ಕೋರ್ಟಿಗೆ ಸಾಕ್ಷಿಯಾಗಬೇಕೆಂದರೆ?' ಚಿದಂ ಇನ್ನೂ ಆತನ ಕಾಲುಗಳನ್ನು ಬಿಗಿಯಾಗಿ ಹಿಡಿದು ಕೇಳಿದ. 'ಠಾಕುರ್, ನಾನು ನನ್ನ ಪತ್ನಿಯನ್ನು ಹೇಗೆ ಉಳಿಸಲಿ?'

ಊರಿನಲ್ಲಿ ಏನಾದರೂ ಸಮಸ್ಯೆ, ಸಂದಿಗ್ಧತೆಗಳು ಬಂದರೆ ಊರ ಹಿರಿಯನಾಗಿ ರಾಮಲೋಚನನೇ ನ್ಯಾಯತೀರ್ಮಾನ ಮಾಡುತ್ತಿದ್ದ.ಹಾಗಾಗಿ ಅವನು ಚಿದಮ್‌ನ ಬೇಡಿಕೆಗೆ ಒಂದು ಪರಿಹಾರ ಸೂಚಿಸಿದ: 'ನನಗೆ ತಿಳಿದಂತೆ ಇದಕ್ಕೆ ಒಂದುದಾರಿಯಿದೆ. ನೀನೀಗಲೇ ಪೋಲಿಸ್ ಸ್ಟೇಷನ್‌ಗೆ ಹೋಗು.ನಿನ್ನ ಅಣ್ಣ ಸಂಜೆ ಕೆಲಸ ಮುಗಿಸಿ ಬಂದು ಊಟಕ್ಕೆ ಬಡಿಸಲು ಹೇಳಿದಾಗ ಊಟವಿಲ್ಲವೆಂದು ಗೊತ್ತಾಗಿ ಕೋಪದಿಂದ ಅವನು ಹೆಂಡತಿಯ ತಲೆಗೆ ಕತ್ತಿಯಿಂದ ಚುಚ್ಚಿದ ಅಂತ ಹೇಳು.ಹಾಗೇನಾದರೂ ಹೇಳಿದರೆ ನಿನ್ನ ಹೆಂಡತಿ ಖಂಡಿತ ಬಚಾವಾಗ್ತಾಳೆ.'

ಚಿದಮ್‌ಗೆ ಏನೋ ಅವ್ಯಕ್ತವಾದ ಅಸ್ವಸ್ಥತೆಯಿಂದ ಗಂಟಲು ಒಣಗಿದಂತಾಯ್ತು. ಅವನು ಎದ್ದು ಹೇಳಿದ, 'ಠಾಕುರ್, ನಾನು ಹೆಂಡತಿಯನ್ನು ಕಳೆದುಕೊಂಡರೆ ಇನ್ನೊಬ್ಬ ಹೆಂಡತಿ ಸಿಗುತ್ತಾಳೆ.ಆದರೆ ನನ್ನ ಅಣ್ಣನಿಗೆ ಫಾಸಿಯಾದರೆ ಅವನಿಗೆ ಪರ್ಯಾಯವಾಗಿ ಅಣ್ಣನೊಬ್ಬ ನನಗೆ ಸಿಗುವುದಿಲ್ಲ.' ಹೆಂಡತಿಯ ಮೇಲೆ ದೂರು ಹಾಕಿ ಅವಳನ್ನು ತಪ್ಪಿತಸ್ಥಳನ್ನಾಗಿ ಮಾಡುವುದು ಅವನ ಉದ್ದೇಶವಾಗಿರಲಿಲ್ಲ. ಆದರೆ ಆಕ್ಷಣಕ್ಕೆ ಹೊಳೆದ ಮಾತದು.ಈಗ ಯೋಚನೆ ಮಾಡಿದಾಗ ಅವನ ಮನಸ್ಸಿಗೆ ಅದೇ ಸರಿಯೆನಿಸಿತು.

ರಾಮಲೋಚನ ಆ ಮಾತಿಗೆ ಉತ್ತರಿಸಿದ. ಹಾಗಿದ್ದರೆ ಸತ್ಯವಿಚಾರವನ್ನೇ ಹೇಳು. ಆಗ ನೀನು ಯಾವರೀತಿಯಲ್ಲೂ ನಿನ್ನ ಹೆಂಡತಿಯನ್ನು ಬಚಾವು ಮಾಡುವುದಕ್ಕೆ ಆಗುವುದಿಲ್ಲ.'

ಹಾಗೆಂದು ಹೇಳಿ ಆತ ಮನೆಯಿಂದ ನಿರ್ಗಮಿಸಿದನೋ ಇಲ್ಲವೋ ಚಂದ್ರ ವಾರಗಿತ್ತಿಯ ಜತೆಯಲ್ಲಿ ಜಗಳವಾಡಿ ಜಗಳ ತಾರಕಕ್ಕೇರಿದಾಗ ಚಾಕುವಿನಿಂದ ಇರಿದಳೆಂಬ ವಾರ್ತೆ ಕಾಡ್ಗಿಚ್ಚಿನಂತೆ ಇಡಿ ಊರಲ್ಲಿ ಹರಡಿತು.

ಪ್ರವಾಹದಲ್ಲಿ ನದಿ ಉಕ್ಕೇರಿದಂತೆ ಊರಿಗೆ ಪೋಲೀಸರು ಬಂದರು.ಅಪರಾಧಿ, ನಿರಪರಾಧಿಗಳಿಬ್ಬರೂ ಭಯಭೀತರಾದರು.

2

ಏನಾದರೂ ತಾನು ಆಡಿದ ಮಾತಿಗೇ ಅಂಟಿಕೊಂಡಿರುವುದೆಂಬ ತೀರ್ಮಾನಕ್ಕೆ ಚಿದಂ ಬಂದಾಗಿತ್ತು.ಅವನು ರಾಮಲೋಚನ ಚಕ್ರವರ್ತಿಗೆ ಹೇಳಿದ ಕಥೆ ಆಗಲೇ ಊರಿನಲ್ಲಿ ಹಬ್ಬಿತ್ತು.ಇನ್ನು ಅದನ್ನು ಬದಲಾಯಿಸಿದರೆ ಬೇರೇನಾದರೂ ಆದರೆ, ಯಾರಿಗೆ ಗೊತ್ತು?ಆದರೆ ಆ ಕತೆಗೆ ತಾನು ಬದ್ಧನಾದರೆ ತನ್ನ ಹೆಂಡತಿಯನ್ನು ಕಾಪಾಡಲು ಅದಕ್ಕೆ ಇನ್ನೂ ನಾಲ್ಕೈದು ಕತೆಗಳನ್ನು ಸೇರಿಸಬೇಕಾದೀತೆಂದೂ ಆತನಿಗೆ ತಿಳಿದಿತ್ತು.

ಚಿದಂಚಂದ್ರಾಗೆ ಅಪರಾಧವನ್ನು ಹೊತ್ತುಕೊಳ್ಳಬೇಕೆಂದು ಆದೇಶಿಸಿದ. ಆಕೆ ಅವಾಕ್ಕಾದಳು. ಅವನು ಅನುನಯಿಸಿದ:

'ಹೆದರಬೇಡ.ನಾನು ಹೇಳಿದಂತೆ ಕೇಳಿದರೆ ನಿನಗೆ ಯಾವ ಅಪಾಯವೂ ಉಂಟಾಗದು.'

ಆದರೆ ಆತ ಅದನ್ನು ಹೇಳುವಾಗ ಅವನ ಗಂಟಲಿನಲ್ಲಿ ಪಸೆಯಿರಲಿಲ್ಲ. ಅವನ ಮುಖವೂ ಬಿಳಿಚಿತ್ತು.

ಚಂದ್ರ ಹದಿನಾರು ಹದಿನೇಳು ವರ್ಷದ ಯುವತಿ.ಸುಂದರವಾದ ಆಕರ್ಷಕವಾದ ಮೈಕಟ್ಟುಳ್ಳ ಹೆಣ್ಣು.ತೆಳ್ಳಗೆ ಬೆಳ್ಳಗೆ ಬಳುಕುವ ಶರೀರದ ಲಾವಣ್ಯವತಿ.ಅವಳ ನಡಿಗೆ, ನೋಟ, ಹಾವ, ಭಾವ, ಬೆಡಗು ತುಂಬ ಸೊಗಸಾಗಿದ್ದುವು. ಹೊಚ್ಚಹೊಸ ದೋಣಿಯಂತೆ ಅಚ್ಚುಕಟ್ಟಾಗಿ, ಮೋಡಿ ಮಾಡುವಂತೆ ಇದ್ದಳು. ಅವಳ ಅಂಗಾಂಗಗಳಲ್ಲಿ ಯಾವುದೇ ಊನವಿರಲಿಲ್ಲ. ಎಲ್ಲ ಅವಯವಗಳೂ ಹೆಚ್ಚುಕಡಿಮೆಯಿಲ್ಲದೆ ಹಾಳತವಾಗಿದ್ದುವು.ಅವಳು ಎಲ್ಲರೊಂದಿಗೂ ಚೆನ್ನಾಗಿ ಬೆರೆಯುತ್ತಿದ್ದಳು, ಪ್ರತಿಯೊಂದನ್ನೂ ಆಸ್ವಾದಿಸುತ್ತಿದ್ದಳು. ಹರಟೆ ಹೊಡೆಯುವುದೆಂದರೆ ಅವಳಿಗೆ ಅಚ್ಚುಮೆಚ್ಚು. ಸೊಂಟದಲ್ಲಿ ನೀರಿನ ಬಿಂದಿಗೆ ಹೊತ್ತುಕೊಂಡು ಬೆಟ್ಟದ ಕಡೆಗೆ ನೀರಿಗೆ ಹೋಗುವಾಗ ಬರುವಾಗ ತನ್ನ ದುಪ್ಪಟ್ಟವನ್ನು ಬೆರಳಿನಿಂದ ಸರಿಸುತ್ತ ಅವಳು ತನ್ನ ಸುಂದರವಾದ, ಹೊಳೆಯುವ ಕಪ್ಪು ಕಣ್ಣುಗಳಿಂದ ಯಾವುದನ್ನೂ ಬಿಡದೆ ಅವಲೋಕಿಸುತ್ತಿದ್ದಳು.

ಅವಳ ವಾರಗಿತ್ತಿ ಅದಕ್ಕೆ ತದ್ವಿರುದ್ಧವಾಗಿದ್ದಳು.ಅವಳಲ್ಲಿ ಸ್ವಚ್ಛತೆ ಇರಲಿಲ್ಲ. ಶರೀರವೂ ಮಾಟವಾಗಿರಲಿಲ್ಲ. ಅವಳ ವೇಷಭೂಷಣಗಳೂ ಯದ್ವಾತದ್ವವಾಗಿರುತ್ತಿದ್ದುವು. ಮಗುವಿನ

ಲಾಲನೆ ಪಾಲನೆ ಮಾಡುವ ಗೃಹಿಣಿಯಾಗಿ ಅವಳು ತನ್ನ ಸೌಂದರ್ಯದ ಬಗ್ಗೆ ಸಂಪೂರ್ಣ ಅವಜ್ಞೆಯಾಗಿದ್ದಳು. ಪರಾಡುವುದಕ್ಕೆ ನಿಖರವಾದ ಕೆಲಸಕಾರ್ಯಗಳಿಲ್ಲದಿದ್ದರೂ ಅವಳಿಗೆ ಯಾವುದಕ್ಕೂ ಸಮಯವಿರುತ್ತಿರಲಿಲ್ಲ. ಚಿಕ್ಕವಳು ಜಗಳಕ್ಕೆ ಹೋಗದಿದ್ದರೂ ಅವಳೇ ಕಾಲು ಕೆದರಿ ಜಗಳಕ್ಕೆ ನಿಲ್ಲುತ್ತಿದ್ದಳು. ಸಣ್ಣಪುಟ್ಟ ವಿಷಯಕ್ಕೂ ಕೋಪಗೊಂಡು ಊರುಕೇರಿ ಒಂದು ಮಾಡುತ್ತಿದ್ದಳು.ಎಲ್ಲರಿಗೂ ಸಮಸ್ಯೆ ತರುತ್ತಿದ್ದಳು.

ಯಾವುದೋ ವಿಶಿಷ್ಟ ಕಾರಣಕ್ಕೆ ಇಬ್ಬರು ಹೆಂಡತಿಯರೂ ಅವರವರ ಗಂಡಂದಿರಿಗೆ ಜೋಡಿಯಾಗಿದ್ದರು. ದುರ್ಬೀರಾಮ ಆಜಾನುಬಾಹು ಶರೀರದ ಆಳು. ಬೃಹತ್ತಾದ ಮೂಳೆಗಳು. ಮೊಂಡು ಮೂಗು. ಅವನ ಕಣ್ಣುಗಳನ್ನು ನೋಡಿದರೆ ಪ್ರಪಂಚವನ್ನು ಏನೂ ಅರಿತಿಲ್ಲವೆಂಬ ಭಾವ ವ್ಯಕ್ತವಾಗುತ್ತಿದ್ದುವು. ಆದರೂ ಅದನ್ನು ತಿಳಿಯುವ ಕುತೂಹಲ, ಉತ್ಸಾಹವೂ ಕಾಣುತ್ತಿರಲಿಲ್ಲ.ಅವನು ಮುಗ್ಧ ಆದರೆ ಭೀರು.ಶಕ್ತಿ ಮತ್ತು ಅಸಹಾಯಕತೆಯ ಸಮ್ಮಿಶ್ರಣ.ಚಿದಂ ಅದಕ್ಕೆ ವ್ಯತಿರಿಕ್ತವಾಗಿದ್ದ.ಯಾವುದೋ ಕಗ್ಗಲ್ಲಿನಿಂದ ಬಹು ಎಚ್ಚರಿಕೆಯಿಂದ ಕಡೆದು ತೆಗೆದಂತೆ ಅವನಿದ್ದ.ಕೊಬ್ಬು ತುಂಬಿದ ಒಂದೇ ಒಂದು ಇಂಚಿನಷ್ಟೂ ಅನಗತ್ಯ ಭಾಗ ಅವನ ಶರೀರದಲ್ಲಿರಲಿಲ್ಲ. ಒಂದೇ ಒಂದು ಸುಕ್ಕಾಗಲೀ ಕಲೆಯಾಗಲೀ ಅವನ ಮೈಯಲ್ಲಿರಲಿಲ್ಲ. ಅವನ ಪಾದಗಳೂ ಅತ್ಯಂತ ದೃಢವಾಗಿದ್ದುವು. ಶಕ್ತಿಯುತವಾಗಿದ್ದುವು.ನದೀತೀರದಲ್ಲಿ ನೆಗೆಯುವಾಗಲಾಗಲೀ, ದೋಣಿ ನಡೆಸುವಾಗಲಾಗಲೀ ಬಿದಿರಿಗಾಗಿ ಮೆಳೆಗೆ ಹತ್ತುವಾಗಲಾಗಲೀ ಅವನಿಗೆ ಬಳಲಿಕೆ, ಆಯಾಸಗಳು ಕಾಣಿಸುತ್ತಿರಲಿಲ್ಲ. ಅವನು ತನ್ನ ನೀಳವಾದ ಕಪ್ಪು ತಲೆಕೂದಲನ್ನು ಭುಜದ ವರೆಗೆ ಬರುವಂತೆ ಎಣ್ಣೆ ಹಚ್ಚಿ ನಾಜೂಕಾಗಿ ಬಾಚುತ್ತಿದ್ದ.ತನ್ನ ಉಡುಗೆ ಮತ್ತು ಕಾಣಿಸುವಿಕೆಯ ಬಗ್ಗೆಯೂ ಅವನು ತುಂಬ ಎಚ್ಚರಿಕೆ ವಹಿಸುತ್ತಿದ್ದ. ಊರಿನ ಇತರ ಹೆಂಗಳೆಯರ ರೂಪದ ಬಗ್ಗೆ ಲಕ್ಷ್ಯವಿದ್ದರೂ ತಾನು ಅವರ ಮುಂದೆ ತುಂಬ ಸುಂದರನಾಗಿ ಕಾಣಿಸುವ ಬಗ್ಗೆ ಎಚ್ಚರಿಕೆ ವಹಿಸಿದ್ದರೂ ಅವನ ನಿಜವಾದ ಪ್ರೀತಿ ಸಂಪೂರ್ಣವಾಗಿ ತನ್ನ ಪುಟ್ಟ ಮಡದಿಗೆ ಮಾತ್ರ ಮೀಸಲಾಗಿತ್ತು. ಆಗಾಗ್ಗೆ ಜಗಳವಾಡುತ್ತಿದ್ದರೂ ಕೊನೆಗೆ ಯಾರು ಯಾರನ್ನೂ ಸೋಲಿಸದೆ ಸಮಸ್ಯೆಗಳನ್ನು ಶಾಂತಿ ಸಮಾಧಾನಗಳಿಂದ ಬಗೆಹರಿಸುತ್ತಿದ್ದರು. ಅವರೊಳಗೆ ಅಂಥ ಅನುಬಂಧವಿರುವುದಕ್ಕೆ ಇನ್ನೂ ಒಂದು ಕಾರಣವಿತ್ತು.ತನ್ನ ಮಡದಿ ಅಂಥ ಮುಗ್ಧಳಲ್ಲವೆಂದೂ ಜಾಣೆಯೆಂದೂ ಗೊತ್ತಿರುವುದರಿಂದ ಅವಳನ್ನು ಕುರುಡಾಗಿ ನಂಬಲು ಚಿದಂ ಸಿದ್ಧನಿರಲಿಲ್ಲ. ಹಾಗೆಯೆ ತಾನು ಗಂಡನನ್ನು ತನ್ನ ಬಿಗಿಯಲ್ಲಿ ಭದ್ರವಾಗಿ ಕಾಪಾಡಿಕೊಳ್ಳದಿದ್ದರೆ ಚಂಚಲಗಣ್ಣಿನ ಆತ ಕೈತಪ್ಪಿ ಹೋದಾನೆಂಬ ಭಯ ಚಂದ್ರಾಗೂ ಇತ್ತು.

ಈ ಕತೆ ನಡೆಯುವ ಕೆಲದಿನಗಳ ಹಿಂದೆ ಅವರೊಳಗೆ ಒಂದು ಪ್ರಸಂಗ ನಡೆದಿತ್ತು.ಚಿದಂ ತುಂಬ ದಿನ ಮನೆಯಿಂದ ದೂರ ಹೋಗಲು ಕೆಲಸದ ನೆಪ ಹೇಳಿದನೆಂದೂ ಮನೆಗೆ ಏನೂ ತರುವುದಿಲ್ಲವೆಂದೂ ಚಂದ್ರಾಗೆ ಗೊತ್ತಾಯ್ತು. ಕೂಡಲೇ ಅದಕ್ಕೆ ಸವ್ವಾಸೇರು ಬಗೆದಳು.ದಿನವೂ ಬೆಟ್ಟಕ್ಕೆ ಹೋಗ್ತಾ ಊರೆಲ್ಲ ತಿರುಗಾಡುತ್ತ ಕಾಶೀ ಮುಜುಮುದಾರನ

ಮಗನೊಂದಿಗೆ ಹರಟೆ ಹೊಡೆಯುತ್ತ ಬರುತ್ತಿದ್ದಳು.

ಇದು ಚಿದಂನ ಮನಸ್ಸಿಗೆ ವಿಷದಂತೆ ಚುಚ್ಚಿತು. ಅವನಿಗೆ ತನ್ನ ಕೆಲಸದಲ್ಲಿ ಗಮನ ಹೋಗಲಿಲ್ಲ. ಒಂದು ದಿನ ಅವನು ತುಂಬ ಒರಟಾಗಿ ಅವನ ಅತ್ತಿಗೆಯನ್ನು ತರಾಟೆಗೆ ತೆಗೆದುಕೊಂಡ. ಅವಳು ತಪ್ಪನ್ನು ಅವಳ ತೀರಿಹೋದ ತಂದೆಯ ಮೇಲೆ ಹಾಕಿ ಕೈಚೆಲ್ಲಿದಳು.'ಆ ಹುಡುಗಿ ಓಡಿ ಹೋದರೆ ನಾನೇನು ಮಡುವುದಕ್ಕಾಗುತ್ತದೆ.ಅವಳನ್ನು ತಡೆಯಲು ನನಗೆ ಸಾಧ್ಯವೇ?ಅವಳು ಏನು ಕೆಟ್ಟದ್ದನ್ನು ತರುತ್ತಾಳೋ ಯಾರಿಗೆ ಗೊತ್ತು?'

ಚಂದ್ರ ಕೋಣೆಯಿಂದ ಹೊರಬರುತ್ತ ಕೇಳಿದಳು:

'ಏನು ವಿಷಯ ಅಕ್ಕ?'

ಇಬ್ಬರೊಳಗೂ ಭೀಕರ ಜಗಳ ಶುರುವಾಯ್ತು.

ಚಿದಂ ಹೆಂಡತಿಯನ್ನು ದುರುಗುಟ್ಟಿ ನೋಡುತ್ತ ಹೇಳಿದ: 'ಇನ್ನು ಮುಂದೆ ಏನಾದರೂ ನೀನು ನಿನ್ನಷ್ಟಕ್ಕೆ ಮಲೆಗೆ ಹೋಗುವುದನ್ನು ನೋಡಬೇಕು, ನಿನ್ನ ಮೈಯ ಮೂಳೆ ಮುರಿಯುತ್ತೇನೆ.'

'ಅದು ಇನ್ನೂ ಒಳ್ಳೆಯದೇ ಆಯ್ತು.' ಎನ್ನುತ್ತ ಚಂದ್ರ ಹೊರಟಳು.ಚಿದಂ ಒಮ್ಮೆಗೇ ಅವಳ ಬಳಿಗೆ ನೆಗೆದು ಅವಳ ತುರುಬನ್ನು ಹಿಡಿದು ಎಳೆಯುತ್ತ ಕೋಣೆಯೊಳಗೆ ಕೂಡಿ ಹಾಕಿ ಬೀಗ ಹಾಕಿದ್ದ.

ಸಾಯಂಕಾಲ ಕೆಲಸ ಮುಗಿಸಿ ಬಂದು ನೋಡುತ್ತಾನೆ, ಕೋಣೆಯ ಬಾಗಿಲು ತೆರೆದಿದೆ,



ಮನೆಯಲ್ಲಿ ಯಾರೂ ಇಲ್ಲ. ಚಂದ್ರ ಮೂರು ಹಳ್ಳಿ ಆಚೆಗಿರುವ ತನ್ನ ಸೋದರಮಾವನ ಮನೆಗೆ ಓಡಿ ಹೋಗಿದ್ದಳು.ತುಂಬ ಕಷ್ಟಪಟ್ಟು ಅವಳಿಗೆ ಸಮಾಧಾನ ಹೇಳಿ ಕರೆದುಕೊಂಡು ಬಂದಿದ್ದ. ಆದರೆ ಇನ್ನು ಅವನಿಗೆ ಅದು ಸಾಧ್ಯವೆನಿಸಲಿಲ್ಲ. ಹಿಡಿಯೊಳಗೆ ಪಾದರಸವನ್ನು ಇಟ್ಟುಕೊಳ್ಳುವಷ್ಟೇ ಹೆಂಡತಿಯನ್ನು ಅಂಕೆಯಲ್ಲಿಟ್ಟುಕೊಳ್ಳುವುದೆಂದು ಅವನಿಗೆ ಅರಿವಾಗಿತ್ತು.ಅವಳು ಯಾವಾಗಲೂ ಅವನ ಹಿಡಿತದಿಂದ ತಪ್ಪಿಸುತ್ತಿದ್ದಳು.ಯಾವುದೇ ಬಲಪ್ರಯೋಗ ಮಾಡುವುದನ್ನು ಅವನು ಬಿಟ್ಟಿದ್ದರೂ ಮನೆಯಲ್ಲಿ ಶಾಂತಿಯೆಂಬುದೇ ಇರಲಿಲ್ಲ. ಹೆಂಡತಿಯ ಬಗೆಗಿನ ನಿರಂತರವಾದ ಅನುಮಾನ, ನೋವು ಅವನನ್ನು ಸದಾ ಚಿಂತಿತನನ್ನಾಗಿ ಮಾಡುತ್ತಿದ್ದುವು.ಒಂದೆರಡು ಬಾರಿ ಅವಳು ಸತ್ತುಹೋದರೇ ಚೆನ್ನಾಗಿತ್ತೆಂದು ಅವನಿಗೆ ಅನ್ನಿಸಿದ್ದೂ ಇದೆ.ಸಾವಿಗಿಂತಲೂ ತೀವ್ರವಾಗಿ ಅವರು ಪರಸ್ಪರ ದ್ವೇಷಿಸುತ್ತಿದ್ದರು.

ಇಂಥ ಮನಸ್ಥಿತಿಯಲ್ಲಿರುವಾಗಲೇ ಈ ಸಂಭವ ನಡೆಯಿತು.

ನಡೆದ ಕೊಲೆಯ ಆರೋಪವನ್ನು ಹೊತ್ತುಕೊಳ್ಳಬೇಕೆಂದು ಗಂಡ ತನಗೆ ಹೇಳಿದಾಗ ಚಂದ್ರ ಅವಾಕ್ಕಾದಳು.ಅವಳು ಅವನನ್ನೇ ದಿಟ್ಟಿಸಿದಳು.ಅವಳ ಕಪ್ಪು ಕಣ್ಣುಗಳು ಅವನನ್ನು ಬೆಂಕಿಯಂತೆ ಸುಟ್ಟುವು.ಆಮೇಲೆ ನಿಧಾನವಾಗಿ ಅವಳು ಅವನ ಹಿಡಿತದಿಂದ ತಪ್ಪಿಸುವಂತೆ ಜಾರಿದಳು.ಅವಳ ಮನಸ್ಸು, ಭಾವನೆಗಳು ಅವಳ ಹತೋಟಿಯಲ್ಲಿರಲಿಲ್ಲ.

'ನೀನು ಹೆದರುವ ಅಗತ್ಯವಿಲ್ಲ.' ಚಿದಂ ಹೇಳಿದ.ಅವಳು ಪೋಲೀಸ್ ಸ್ಟೇಷನ್‌ನಲ್ಲಿ ಹೇಗೆ ಮಾತನಾಡಬೇಕೆಂಬುದನ್ನೂ ಬಿಡಿಸಿ ಬಿಡಿಸಿ ಹೇಳಿಕೊಟ್ಟ.ಚಂದ್ರ ಅವನ ಯಾವ ಮಾತಿಗೂ ಕಿವಿಗೊಡಲಿಲ್ಲ. ಅವನ ಪ್ರತಿಯೊಂದು ಮಾತನ್ನೂ ಮರದ ಮೂರ್ತಿಯಂತೆ ಸುಮ್ಮನೆ ಕುಳಿತು ಕೇಳುತ್ತಿದ್ದಳು.

ದುಖೀರಾಮ ತಮ್ಮನಿಗೆ ಎಲ್ಲವನ್ನೂ ಒಪ್ಪಿಸಿ ನಿಶ್ಚಿಂತನಾದ.ಅವನು ಕೊಲೆಯ ಆಪಾದನೆಯನ್ನು ಹೆಂಡತಿಯ ಮೇಲೆ ಹಾಕುವ ವಿಚಾರ ತಿಳಿಸಿದಾಗ ಆತ ಕೇಳಿದ್ದ, 'ಇದರಿಂದ ಅವಳಿಗೆ ಏನಾದೀತು?'ಆಗ ಚಿದಂ 'ಅವಳನ್ನು ನಾನು ಕಾಪಾಡುತ್ತೇನೆ.' ಎಂದಿದ್ದ.ಆತನಿಗೆ ಅಷ್ಟೆ ಸಾಕಾಗಿತ್ತು.

3

ಚಿದಂ ಹೆಂಡತಿಗೆ ಹೇಳಿಕೊಟ್ಟದ್ದು ಇದನ್ನು: 'ಅಕ್ಕ ತರಕಾರಿ ಕತ್ತರಿಸುವ ಕತ್ತಿಯಿಂದ ನನ್ನನ್ನು ಚುಚ್ಚಲು ಬಂದಳು. ನಾನು ಅವಳಿಂದ ರಕ್ಷಿಸಿಕೊಳ್ಳಲು ನನ್ನ ಕೈಯಲ್ಲಿದ್ದ ಚಾಕುವನ್ನು ಅಡ್ಡ ಹಿಡಿದೆ.ಅದು ಆಕಸ್ಮಿಕವಾಗಿ ಅವಳ ಹಣೆಗೆ ಚುಚ್ಚಿತು.'ಇದನ್ನೆಲ್ಲ ರಾಮಲೋಚನನೇ ಕಂಡುಹಿಡಿದ ಉಪಾಯ.ಆತ ಚಿದಂನಿಗೆ ಘಟನೆಗೆ ಸಂಬಂಧಪಟ್ಟ ಸಾಕ್ಷ್ಯಾಧಾರಗಳನ್ನೂ ಉದಾರವಾಗಿಯೇ ಒದಗಿಸಿದ್ದ.

ಪೋಲಿಸರು ವಿಚಾರಣೆಗೆ ಬಂದರು.ಊರವರಿಗೆಲ್ಲ ರಾಧಾಳನ್ನು ಕೊಂದದ್ದು ಚಂದ್ರಳೆಂದೇ ನಂಬಿಕೆಯಾಗಿತ್ತು.ಅದಕ್ಕೆ ಬೇಕಾದ ಪುರಾವೆಗಳೂ ಲಭಿಸಿದ್ದುವು.ಸಾಕ್ಷಿಗಳೂ ಅದನ್ನೇ

ಸಮರ್ಥಿಸಿದುವು.

ಪೋಲೀಸರು ಚಂದ್ರಾಳನ್ನು ಪ್ರಶ್ನಿಸಿದಾಗ ಅವಳು, 'ಹೌದು ನಾನೇ ಕೊಂದದ್ದು.' ಎಂದಳು.

'ನೀನೇಕೆ ಕೊಂದೆ?'

'ಅವಳನ್ನು ಸಹಿಸಿಕೊಳ್ಳಲು ನನಗೆ ಸಾಧ್ಯವಾಗಲಿಲ್ಲ.'

'ನಿಮ್ಮ ಮಧ್ಯೆ ಜಗಳವೇನಾದರೂ ಆಯ್ತೇ?'

'ಇಲ್ಲ.'

'ಅವಳೇ ಮೊದಲು ನಿನ್ನ ಮೇಲೆ ಕೈಮಾಡಿದಳೇ?'

'ಇಲ್ಲ.'

'ಆಕೆ ನಿನ್ನನ್ನು ಅಪಮಾನ ಮಾಡಿದಳೇ?'

'ಇಲ್ಲ.' ಚಂದ್ರಾಳ ಉತ್ತರದಿಂದ ಎಲ್ಲರೂ ಚಕಿತರಾದರು.ಚಿದಂ ಅಂತೂ ಸಂಪೂರ್ಣವಾಗಿ ನಿಯಂತ್ರಣ ತಪ್ಪಿದ.

'ಅವಳು ಸತ್ಯ ಹೇಳುತ್ತಿಲ್ಲ.' ಅವನು ಹೇಳಿದ.

'ದೊಡ್ಡವಳು ಮೊದಲು......'

ಇನ್ಸ್ಪೆಕ್ಟರ್ ಆತನನ್ನು ತೀಕ್ಷ್ಣವಾಗಿ ನೋಡಿ ಮೌನವಾಗಿರಲು ಸೂಚಿಸಿದ.ಚಂದ್ರಾಳನ್ನು ಬಗೆ ಬಗೆಯಾಗಿ ತಿರುಚಿ ಪ್ರಶ್ನೆಗಳನ್ನು ಕೇಳಿದರೂ ಅವಳ ಉತ್ತರ ಒಂದೇ ಆಗಿತ್ತು.ರಾಧಾ ತನ್ನ ಮೇಲೆ ಕೈಮಾಡಿದಳೆಂದು ಒಪ್ಪಿಕೊಳ್ಳಲು ಚಂದ್ರಾ ತಯಾರಾಗಲೇ ಇಲ್ಲ. ಅಂಥ ಹಟಮಾರಿ ಹುಡುಗಿಯನ್ನು ಯಾರೂ ನೋಡಿರಲಿಲ್ಲ. ಅಂತ ವಿಷಮ ಪರಿಸ್ಥಿತಿಯಲ್ಲೂ ಸುತರಾಂ ಅವಳು ತನ್ನ ಮಾತನ್ನು ಬದಲಿಸುವಂತೆಯೇ ಕಾಣಲಿಲ್ಲ. ಯಾರಿಗೂ ಅವಳನ್ನು ತಡೆಯಲು ಸಾಧ್ಯವಾಗಲಿಲ್ಲ. ಅವಳು ಸೆರೆಮನೆಗೆ ಹೋಗುವುದು ಖಾತ್ರಿಯಾಯ್ತು. ಅವಳು ತನ್ನ ಗಂಡನಿಗೆ ಹೇಳಿದ್ದೂ ಅದನ್ನೇ.

'ನಾನು ನನ್ನ ಯೌವನವನ್ನು ಸೆರೆಯಲ್ಲಾದರೂ ಕಳೆದೇನು, ಆದರೆ ನಿನ್ನ ಜತೆಗಲ್ಲ. ಈ ಜೀವನದ ನನ್ನ ಕೊನೆಯ ಕ್ಷಣಗಳನ್ನು ನಾನು ಅವರ ಜತೆ ಕಳೆಯುತ್ತೇನೆ.'





# ಪೂಜೆಗೆ ಅರ್ಹವಲ್ಲದ ಪುಷ್ಪಗಳು

ಮಲಯಾಳ ಮೂಲ– ಎನ್. ಮೋಹನನ್

ಕನ್ನಡಕ್ಕೆ– ಡಾ. ಪ್ರಮೀಳಾ ಮಾಧವ್

ಅವನು ಮೆಟ್ಟಲುಗಳನ್ನು ಇಳಿದು ಹೊರಟುಹೋದ. ಒಮ್ಮೆಯೂ ತಿರುಗಿ ನೋಡಲಿಲ್ಲ. ಒಂದೊಂದು ಹೆಜ್ಜೆಯಲ್ಲೂ ರೋಷದ ಭಾವ ತೀವ್ರವಾಗುತ್ತಿತ್ತು. ಇಲ್ಲ.... ಇನ್ನು ಒಮ್ಮೆಯೂ ಅವನು ತಿರುಗಿ ನೋಡುವುದಿಲ್ಲ. ಒಮ್ಮೆಯೂ ಅವನು ಬರುವುದಿಲ್ಲ. ಹಾಗನಿಸಿದಾಕ್ಷಣ ಅಸಹನೀಯವಾದ ದೀರ್ಘ ಆರ್ತನಾದವೊಂದು ಅವಳ ಗಂಟಲಿನಿಂದ ಹೊಮ್ಮಿತು.

'ನನ್ನ ಮುದ್ದು ತಮ್ಮಾ.....'

ಏಣಿಯ ಮೆಟ್ಟಿಲುಗಳನ್ನು ಓಡುತ್ತಲೇ ಹತ್ತಿದ ಅವಳು ಬಾಲ್ಕನಿಯಲ್ಲಿ ನಿಂತು ಕೆಳಗೆ ನೋಡಿದಳು.ಖಾಲಿಯಾದ ರಸ್ತೆಯಲ್ಲಿ ಯಾವುದೋ ಬಿರುಗಾಳಿ ಬೀಸಿಹೊಡೆದಂತೆ ಅವನ ಜೀಪು ರಭಸದಿಂದ ಸಾಗಿತು. ಒದ್ದೆಯಾದ ಕಣ್ಣುಗಳಿಂದ ಅವನ್ನು ನೋಡುತ್ತ ನಿಂತಳು.

ಕಟ್ಟಕಡೆಯ ಸಂಬಂಧವೂ ಕಿತ್ತು ಹೋಗುತ್ತಿತ್ತು.

ಇನ್ನು ಯಾರೂ ಇಲ್ಲ. ಏನೂ ಇಲ್ಲ. ವಿಶಾಲವಾದ ಪ್ರಪಂಚದ ಮಧ್ಯದಲ್ಲಿ ಏಕಾಂತವಾಗಿರುವ ದ್ವೀಪದಂತೆ ಅವಳು ಒಂಟಿಯಾಗಿ ನಿಂತಿದ್ದಳು.

ಒಮ್ಮೆಯೂ ಮತ್ತೆ ಕಾಣಲಸಾಧ್ಯವಾದ ವಸ್ತುವನ್ನು ಮನಸ್ಸಿನೊಳಗಿನಿಂದ ದೂರಮಾಡದೆ ಉಳಿಸಿಕೊಳ್ಳುವ ರೀತಿಯಲ್ಲಿ ಅವಳು ಅತ್ತಲೇ ನೋಡುತ್ತ ನಿಂತಳು. ತಿರುವಿನಲ್ಲಿ ವಾಹನ ಮರೆಯಾಗಿದ್ದರೂ ಅವಳು ನೋಡುತ್ತಲೇ ನಿಂತಳು.

'ಶಾರದಕ್ಕಾ.....'

ಏಣಿಯ ಮೆಟ್ಟಲುಗಳ ಬಳಿಯಿಂದ ಯಾರೋ ಕರೆದರು. ಕಾರ್ತ್ಯಾಯಿನಿಯಿರಬೇಕು. ಯಾಂತ್ರಿಕವೆಂಬಂತೆ ಅವಳು ಕೈಯೆತ್ತಿ ವಾಚಿನ ಕಡೆ ದೃಷ್ಟಿ ಹರಿಸಿದಳು.ಇನ್ನು ವಿಳಂಬಿಸಿದರೆ ಆಫೀಸಿಗೆ ತಡವಾದೀತು. ಆದರೆ ನಿಂತ ನಿಲುವಿನಲ್ಲಿ ಕೀಲಿಸಿದಂತೆ ಚಲಿಸುವುದಕ್ಕಾಗಲೀ ಮಾತನಾಡುವುದಕ್ಕಾಗಲೀ ಅವಳಿಗೆ ಸಾಧ್ಯವಾಗಲಿಲ್ಲ. ಒಂದೇ ಒಂದು ಸತ್ಯ ಮಾತ್ರ ಅವಳ ಮುಂದಿದ್ದುದು.

ಇನ್ನು ತಾನು ಏಕಾಂಗಿ.

ಏಣಿಯ ಮೆಟ್ಟಲುಗಳನ್ನು ಓಡಿ ಕ್ರಮಿಸಿದ ಕಾರ್ತ್ಯಾಯಿನಿ ಅವಳ ಹೆಗಲನ್ನು ಅಲ್ಲಾಡಿಸುತ್ತ ಕೇಳಿದಳು:

'ಏನಾಯ್ತು ಶಾರದಕ್ಕಾ.....?' ಆ ಮುಖದ ವಿಷಣ್ಣತೆಯನ್ನೂ ಸಂಕಟವನ್ನೂ ಗಮನಿಸಿ ಆಕೆ ಒಮ್ಮೆಲೇ ಸ್ತಬ್ಧಳಾದಳು. ಕಾರ್ತ್ಯಾಯಿನಿಗೆ ಏನೂ ಅರ್ಥವಾಗಿರಲಾರದು. ಅರ್ಥವಾಗುವುದಾದರೂ ಹೇಗೆ.? ಒಂದರ್ಥದಲ್ಲಿ ಅವಳು ಕೇವಲ ಮಗು.ಜೀವನದ ಹೊಸ್ತಿಲನ್ನು ಮಾತ್ರ ತಲಪಿದವಳಲ್ಲವೇ? ಕಪ್ಪಾದ ಮೋಡಗಳಿಲ್ಲದ ಚೈತ್ರದ ಆಕಾಶವನ್ನಷ್ಟೇ ಅವಳು ನೋಡಿದ್ದಾಳೆ. ಆದರೂ ಅವಳಿಗೆ ಮನುಷ್ಯರ ಸಂಕಟಗಳು ಅರ್ಥವಾಗಿರಬಹುದು. ಬಹುಶಃ ತನ್ನ ಸಂಕಟಗಳ ಮೂರ್ತಭಾವವಾದ ಶೈತ್ಯ ಅವಳ ನಾಲಗೆಯನ್ನು ಮರಗಟ್ಟಿಸಿರಬೇಕು.

ನಿದ್ರೆಯಿಂದ ಎಚ್ಚೆತ್ತವಳಂತೆ ಶಾರದಾ ಹೇಳಿದಳು: ಕಾರ್ತಿ, ನಾನಿವತ್ತು ಬರುವುದಿಲ್ಲ. ಅಷ್ಟು ಆರೋಗ್ಯವಿಲ್ಲ. ನನ್ನ ಲೀವ್‌ಲೆಟರ್‌ನ್ನು ದಯವಿಟ್ಟು ಆಫೀಸಿಗೆ ಕೊಟ್ಟುಬಿಡು.

ಶಾರದಾ ಲೀವ್‌ಲೆಟರ್ ಬರೆಯುತ್ತಿರುವಾಗ ಕಾರ್ತ್ಯಾಯಿನಿ ಏನೂ ಕೇಳಲಿಲ್ಲ. ಬಾತುಹೋದ

ಮುಖ, ಕಲಕಿದ ಕಣ್ಣುಗಳನ್ನು ನೋಡುತ್ತ ಮೌನವಾಗಿಯೇ ನಿಂತಳು. ಯಾವುದೋ ಅಪ್ರತೀಕ್ಷಿತವಾದ ದುಃಖದ ಕಠಿಣವಾದ ಆಘಾತವನ್ನಷ್ಟೇ ಅವಳು ದರ್ಶಿಸಿದ್ದಳು. ಏನಾಗಿರಬಹುದು ಅದು? ಗೊತ್ತಿಲ್ಲ. ಬೆಳಗ್ಗೆ ಶಾರದೆಯನ್ನು ಭೇಟಿಯಾಗಲು ಅವಳ ತಮ್ಮ ಬಂದಿದ್ದಾನೆಂಬುದಷ್ಟೇ ಅವಳಿಗೆ ಗೊತ್ತಿದ್ದದ್ದು. ಯಾವಾಗಾದರೂ ಆತ ಬರುತ್ತಿದ್ದವನೇ ತಾನೇ? ಎ.ಪಿ.ಎಸ್. ಉದ್ಯೋಗಿಯಾಗಿದ್ದ ಆ ಒಬ್ಬ ತಮ್ಮ ಮಾತ್ರವೇ ತಾನೆ ಶಾರದಕ್ಕನಿಗೆ ಬಂಧುವಾಗಿದ್ದದ್ದು. ಯಾವ ದುಃಖವಾರ್ತೆಯನ್ನು ಆತ ತಂದಿರಬಹುದು?ಯಾವುದನ್ನೂ ಕೇಳುವ ಸನ್ನಿವೇಶ ಅದಾಗಿರಲಿಲ್ಲ. ಲೀವ್‌ಲೆಟರ್ ತೆಗೆದುಕೊಂಡು ಕಾರ್ತ್ಯಾಯಿನಿ ಹೊರಟು ಹೋದಳು.

ಅವಳು ಮೆಟ್ಟಲುಗಳನ್ನಿಳಿದು ಹೋಗುವುದನ್ನು ನೋಡುತ್ತ ಶಾರದೆ ಒಂದು ನಿಮಿಷ ಅಲ್ಲೇ ನಿಂತಳು. ವರ್ಷಗಳಿಂದ ಮೆಟ್ಟಲುಗಳನ್ನು ತುಳಿದು ಸದ್ದು ಮಾಡುತ್ತಿದ್ದ ನೆನಪುಗಳು ಓಡೋಡಿ ಬಂದುವು.

ಎಲ್ಲರೂ ಇಳಿದುಹೋದರು. ಏಕಾಂತತೆಯ ವಿಮುಖ ರಾತ್ರಿಗಳೊಳಗೆ ಅವಳನ್ನು ಉಪೇಕ್ಷಿಸಿ ಒಬ್ಬೊಬ್ಬರಾಗಿ ಇಳಿದುಹೋದರು. ಈಗ ಕಟ್ಟಕಡೆಯವರೂ ಇಳಿದುಹೋದರು.

ಸದ್ದುಗದ್ದಲಗಳಿಂದ ನಿಬಿಡವಾದ ನಗರದ ಮಧ್ಯಭಾಗದಲ್ಲಿ ಯಾರ ನೆನಪಿಗೂ ಬಾರದಂಥ ಪ್ರಾಚೀನ ಸ್ನೇಹದಂತಿರುವ ಅನಾಕರ್ಷಕವಾದ ಒಂದು ಎನ್. ಜಿ. ಓ ವನಿತಾ ಹಾಸ್ಟೆಲಿನ ಕಗ್ಗತ್ತಲ ಕೋಣೆಯಲ್ಲಿ ಕುಳಿತು ಅವಳು ಅಳುತ್ತಿದ್ದಳು. ಕಣ್ಣೀರು ಹರಿಸದೆ ಅತ್ತಳು. ಹದಿನೆಂಟು ವರ್ಷಗಳ ಇನ್ಸ್ಟ್ರುಮೆಂಟೂ ಮೂವತ್ತೆಂಟು ವರ್ಷ ಹಳೆಯದಾದ ಯಂತ್ರವೂ ಅವಳಾಗಿದ್ದಳು. ಹಾಗಿರುವಾಗ ಅವಳಿಗೆ ಕಣ್ಣೀರು ಬರುವುದಾದರೂ ಹೇಗೆ?

ಮುಚ್ಚಿಗೆಯಲ್ಲಿದ್ದ ಒಂದು ಜೇಡರ ಬಲೆಯನ್ನು ನೋಡುತ್ತ ಅವಳು ಅಂಗಾತ ಮಲಗಿದಳು.ತನ್ನ ಬದುಕೂ ಹಾಗೆಯೇ ಅಲ್ಲವೇ? ಅವಳು ಯೋಚಿಸಿದಳು.

ಬಹುದೂರದಲ್ಲೆಲ್ಲೋ ಬಾಲ್ಯಕಾಲದ ಹಚ್ಚಹಸುರಾದ ಕಣಿವೆ. ಹೂಗಳು ತುಂಬಿನಿಂತ ಕಣಿವೆ. ಆದಿನ ಅಜ್ಜಿಯ ನೈವೇದ್ಯಕ್ಕಾಗಿ ಅವಳು ಹೂವುಗಳನ್ನು ಕುಯ್ಯಲು ಹೋದಳು. ಮುಳ್ಳುಗಳಿಂದ ಗೀರುಗಳುಂಟಾದರೂ ಹೂವುಗಳನ್ನು ಕುಯ್ದು ಅಜ್ಜಿಗೆ ಕೊಟ್ಟಳು. ಆಗ ಅಜ್ಜಿ ಹೇಳಿದ್ದು:

'ನಮಗೆ ಬೇಕಾಗಿರುವುದು ಈ ಹೂವುಗಳಲ್ಲ ಮಗಳೇ. ಇವು ಪೂಜೆಗೆ ಅರ್ಹವಲ್ಲದ ಹೂವುಗಳು.'

ಮುಟ್ಟಿದರೆ ಮುನಿ ಹೂವುಗಳು, ಬೇಲಿಯ ಬದಿಯಲ್ಲಿದ್ದ ಹೂವುಗಳು, ಕೊಂಕಣಿ ಹೂವುಗಳು, ಕದಳಿ ಮತ್ತು ಕಾಡುಹೂವುಗಳು!

ಪೂಜೆಗೆ ಸ್ವೀಕರಿಸದ ಆ ಹೂವುಗಳು ಯಾರಿಗೂ ಬೇಡವಾಗಿ ಅಂಗಳದ ಮೂಲೆಯಲ್ಲಿದ್ದ ಕಸದ ತೊಟ್ಟಿಯಲ್ಲಿ ಬಿದ್ದು ಅಳುತ್ತಿದ್ದುವು.ಪದಕವೊಂದನ್ನು ಪೋಣಿಸಿ ಕಟ್ಟಿದ ಕಪ್ಪು ದಾರವನ್ನು ಕೊರಳಲ್ಲಿ ಧರಿಸಿದ ಹೆಣ್ಣುಮಗುವೊಂದು ಕೆನ್ನೆಯಲ್ಲಿ ಜಾರುತ್ತಿರುವ ಕಣ್ಣೀರಿನೊಂದಿಗೆ ವೆರಾಂಡದ ಕಂಬಕ್ಕೊರಗಿ ಅವುಗಳನ್ನು ನೋಡಿ ಬಿಕ್ಕಳಿಸುತ್ತ ನಿಂತುಕೊಂಡಳು.

ಆ ಅಜ್ಜಿ ಸತ್ತು ಮಣ್ಣಾಗಿ ಹೋದಳು. ಅದಕ್ಕಿಂತಲೂ ಎಷ್ಟೋ ವರ್ಷಗಳ ಹಿಂದೆಯೇ ನೆನಪಿಗೆ ಬಾರದಷ್ಟು ಹಿಂದೆ ಅಮ್ಮ ಹಿಮಾವೃತವಾದ ಭೂಮಿಯಲ್ಲಿ ಮಣ್ಣಾಗಿ ಮಲಗಿದ್ದಳು. ಆದ್ದರಿಂದ ಕೇವಲ ಹತ್ತೊಂಬತ್ತು ವರ್ಷ ವಯಸ್ಸಿನಲ್ಲಿ ಅವಳು ಓರ್ವ ಗೃಹಿಣಿಯಾದಳು. ಮದುವೆಯನ್ನೇ ಆಗದೆ ತಾಯಿಯಾದಳು. ಮಕ್ಕಳನ್ನು ಹೆರದೆಯೇ ಅಜ್ಜಿಯಾದಳು. ರೆಕ್ಕೆ ಮೊಳೆಯದ ಪುಟ್ಟ ತಮ್ಮನಿಗೂ ವಯಸ್ಸು ತುಂಬುತ್ತಿರುವ ತಂಗಿಗೂ ಅವಳು ಅಮ್ಮನಾದಳು.

ತಂದೆಯೊಬ್ಬರೇ ಒಳಗೆ ಮಲಗಿದ್ದರು. ಪಕ್ಷಪಾತದಿಂದಾಗಿ ಒಂದು ಭಾಗ ನಿಷ್ಕ್ರಿಯವಾಗಿತ್ತು. ಒಂದುರೀತಿಯಲ್ಲಿ ನೋಡಿದರೆ ಎಲ್ಲದಕ್ಕೂ ಅವರೇ ಜವಾಬ್ದಾರರಾಗಿದ್ದರು. ಆದರೆ ಹಾಗೆ ಯೋಚಿಸುವುದಕ್ಕೂ ಸಾಧ್ಯವಾಗುತ್ತಿಲ್ಲ. ಭಾವವಿಕಾರಗಳ ಒಂದು ತೀವ್ರಘಟ್ಟದಲ್ಲಿ ಕೇವಲ ಆಟಿಗೆಯಾಗಿದ್ದರು ಅಪ್ಪ.ಅವರನ್ನೇಕೆ ದೂರಬೇಕು?

ಸ್ವಾತಂತ್ರ್ಯ, ಸಮಾನತೆ, ಸಮತಾವಾದಗಳ ಅರ್ಥವೇನೂ ನನಗೆ ತಿಳಿಯದು.ನಾಡು, ನಾಡವರೆಂದರೆ ಏನೆಂಬುದೂ ನನಗೆ ತಿಳಿಯದು. ಆದರೆ ಅಪ್ಪಾ, ಈ ಬದುಕು ಹೀಗೆ ಛಿದ್ರವಾಯಿತಲ್ಲ ಎಂದು ಯೋಚಿಸುವಾಗ ಮನಸ್ಸಿಗೆ ತೀವ್ರವಾದ ಸಂಕಟದ ಅನುಭವವಾಗುತ್ತಿದೆ.

ಅಪ್ಪ ಸ್ವಾತಂತ್ರ್ಯ ಚಳುವಳಿಯ ಒಬ್ಬ ಯೋಧನಾಗಿದ್ದರು. ಸತ್ಯಾಗ್ರಹ, ಪಿಕೆಟಿಂಗ್‌ಗಳನ್ನು ನಡೆಸಿದರು. ಸೆರೆಮನೆಗೆ ಹೋದರು. ಘೋಷಣೆಗಳೊಂದಿಗೂ ಮೆರವಣಿಗೆಗಳೊಂದಿಗೂ ಅನಿಯಂತ್ರಿತವಾದ ವಿಕಾರಗಳೊಂದಿಗೂ ಪ್ರಚೋದಿತರಾಗಿ ಮುಳುಗಿಹೋದರು. ಎಲ್ಲವೂ ನಾಶವಾಯ್ತು.ಭತ್ತ ಬೆಳೆಯುವ ಭೂಮಿ, ಪ್ರಚಾರಗಳ ಪತ್ರಗಳು, ಸ್ವಂತ ಆರೋಗ್ಯ ಎಲ್ಲವನ್ನೂ ಕಳೆದುಕೊಂಡು ದೇಹ ಕುಸಿದು ಕೊನೆಗೆ ಮಲಗಿದಲ್ಲೇ ಆದರು.ಆ ಸ್ಥಿತಿಯಲ್ಲೂ ಅಪ್ಪನ ಯೋಚನೆಗಳು, ಮಾತುಗಳು ಅವೇ ಆಗಿದ್ದುವು. ಅವಳಿಗೆ ಯಾವತ್ತೂ ಅರ್ಥಮಾಡಲು ಸಾಧ್ಯವಾಗದ ವಿಚಾರಗಳನ್ನೂ, ಘಟನೆಗಳನ್ನೂ ನಾಡು ಮತ್ತು ನಾಡವರನ್ನೂ ಸಾರ್ವಜನಿಕ ಸಮಸ್ಯೆಗಳನ್ನೂ ಕುರಿತು ಅವರು ಚಿಂತಿಸುತ್ತಿದ್ದರು.ಆ ವಿಚಾರಗಳು ಗುಣವಾಗದ ಅರ್ಬುದ ರೋಗವಾಗಿತಂದೆಯ ಮನೋವೃತ್ತಿಯನ್ನು ಕಾಡುತ್ತಿದ್ದುವು. ಅಪ್ಪ ಮಲಗಿದ ಹೊಸದರಲ್ಲಿ ಯಾರ್‍ಯಾರೋ ಅಪ್ಪನನ್ನು ಭೇಟಿಯಾಗಲು ಬಂದು ಹೋಗುತ್ತಿದ್ದರು. ನಿಧಾನವಾಗಿ ಅದೂ ನಿಂತಿತು.

ಕೊನೆಕೊನೆಯಲ್ಲಿ ವಿಸ್ಮೃತಿಯ ಆಳವಾದ ತಟಾಕದೊಳಗೆ ಬೀಸಿ ಎಸೆದ ಕಲ್ಲಿನೋಪಾದಿಯಲ್ಲಿ ಅಪ್ಪ ಚಾಪೆಯೊಳಗೆ ಮುದುರಿ ಮಲಗಿದರು.

ತ್ಯಾಗೋಜ್ವಲವಾದ
ಒಂದು ಜೀವನದ
ಮಹತ್ವವಾದ ಕೊನೆ
ಅದಾಗಿತ್ತು.

ಆದರೆ
ಒಂದುರೀತಿಯಲ್ಲಿ
ಅಪ್ಪ
ಭಾಗ್ಯವಂತರೆಂದೇ
ಹೇಳಬೇಕು.



ತಾನು ಯಾರದೇ ನೆನಪಿಗೂ ಬಾರದಿರುವವನೆಂದೂ ಕೇವಲ ಸಾವಿರಕ್ಕೆ ಒಬ್ಬನಾಗಿದ್ದೇನೆಂದೂ ಕೊನೆಯ ವರೆಗೂ ಅವರಿಗೆ ಗೊತ್ತಾಗಲಿಲ್ಲವಲ್ಲ! ಬೇರೆಯವರಿಗಲ್ಲದಿದ್ದರೂ ತನ್ನ ಮೂವರು ಸ್ವಂತ ಮಕ್ಕಳಿಗಾದರೂ ಬೆಲೆಬಾಳುವ ಬದುಕೊಂದು ಇಲ್ಲವಾಯಿತೆಂದು ತಿಳಿಯಲು ಸಾಧ್ಯವಾಗಲಿಲ್ಲ. ಆಸೆ, ನಿರೀಕ್ಷೆಗಳನ್ನು ಹೊತ್ತು ಗಂಡುಮಗುವನ್ನು ಹೆತ್ತ ಹೆಂಡತಿ ಆ ಹೆರಿಗೆಯಾದಂದಿನಿಂದ ಕಾಯಿಲೆಗೊಳಗಾದ ಸಂದರ್ಭದಲ್ಲಾದರೂ ಯಾವುದೋ ಅತಿದೂರದ ಕತ್ತಲೆಯ ತೀರದಲ್ಲಿ ಮಲಗದೆ ಇರುತ್ತಿದ್ದರೆ ಒಮ್ಮೆಯೂ ಗಂಡನ ಬಗ್ಗೆ ಯಾವ ಆರೋಪವನ್ನೂ ಮಾಡದ ಮುಗ್ಧೆಯಾದ ಮಡದಿ ಅಕಾಲಮೃತ್ಯುವಶಳಾಗುತ್ತಿರಲಿಲ್ಲವೆಂದು ಅಪ್ಪ ಯೋಚಿಸಲಿಲ್ಲವಲ್ಲ!

ನೀವು ಇಷ್ಟು ಸ್ಪಷ್ಟವಾಗಿ ಅನುಭವಿಸುವ ಈ ಸ್ವಾತಂತ್ರ್ಯವಿದೆಯಲ್ಲ ಅದರಲ್ಲಿ ನನ್ನ ಪಾಲೂ ಇದೆ.

ಈ ಜನತಂತ್ರವಿದೆಯಲ್ಲ. ಅದನ್ನು ಸಾಧಿಸಲು ನಾನು ನನ್ನ ಬದುಕನ್ನೇ ತ್ಯಾಗಮಾಡಿದ್ದೇನೆ.

ಎಂದು ಕೂಗಿ ಕರೆದು ಸ್ವಯಂ ನಿರ್ಮಿಸಿದ ಆತ್ಮಸಂತೃಪ್ತಿಯೊಂದಿಗೆ ಅಜ್ಞಾತಲೋಕದಲ್ಲಿ ಮೈಮರೆತು ಮಲಗುವುದಕ್ಕಷ್ಟೇ ಅಪ್ಪನಿಗೆ ಸಾಧ್ಯವಾದುದು.

ನಾನೇನೂ ಸಂಪಾದನೆ ಮಾಡಲು ಹೋಗಲಿಲ್ಲ. ಶಿಫಾರಸ್ಸಿಗೋ ಅಧಿಕಾರಕ್ಕೋ ಹೋಗಲಿಲ್ಲ. ನನ್ನ ಸಂಕಷ್ಟಗಳಿಗೆ ವರಮಾನವನ್ನು ಪಡೆಯಲೂ ಪ್ರಯತ್ನಿಸಲಿಲ್ಲ. ಅರ್ಥವಾಯ್ತೇ..?

ಆದರೆ, ಇರುವುದಕ್ಕೆ ಒಂದು ಆಶ್ರಯವಲ್ಲದೆ ಅಪ್ಪನಿಗೆ ಬೇರೇನೂ ಇರಲಿಲ್ಲ. ಒಲೆಯಲ್ಲಿ ಬೆಂಕಿ ಹಚ್ಚುವುದಕ್ಕೂ ಮನೆಯಲ್ಲಿ ಏನೂ ಇರಲಿಲ್ಲ.

ಆದರ್ಶದ ಆತ್ಮಾರ್ಥವಾದ ಬದುಕಿನ ಬೆಂಕಿಯಲ್ಲಿ ರೆಕ್ಕೆ ಸುಟ್ಟು ಒದ್ದಾಡಿ ಬಿದ್ದ ಒಂದು ಯಕಶ್ಚಿತ್ ಪತಂಗವಾಗಿದ್ದರು ಅಪ್ಪ.

ಅಂಥ ಅಸಹಾಯಕತೆಯ ಸಂದರ್ಭದಲ್ಲಿ ಅವಳ ವಿದ್ಯಾಭ್ಯಾಸ ನಿಂತುಹೋಯ್ತು.ಎಷ್ಟೇ ಚಿಕ್ಕದಾದರೂ ಪರವಾಗಿಲ್ಲ ಒಂದು ಉದ್ಯೋಗ ಬೇಕಾಗಿತ್ತು.45–75 ರ ಕಟ್ಟಡದಲ್ಲಿ ಲೋವರ್ ಸೆಕೆಂಡರಿ ಕ್ಲಾರ್ಕ್ ಆಗಿ ಸೇವೆಗೆ ನಿಯುಕ್ತಳಾದಾಗಲೇ ಅವಳೊಂದು ಹೊಸತೀರ್ಮಾನಕ್ಕೆ ನಾಂದಿ ಹಾಡಿದ್ದಳು.

ಎಲ್ಲವೂ ನಿನ್ನೆ ನಡೆದಂತೆ ಭಾಸವಾಗ್ತಿದೆ.ತೀವ್ರವಾದ ದುಃಖ, ನೋವುಗಳಿಂದಲೇ ಕಾಲೇಜು ವಿದ್ಯಾಭ್ಯಾಸಕ್ಕೆ ಮಂಗಳ ಹಾಡಿದ್ದು. ಒಡನಾಡಿಗಳೊಂದಿಗಿನ ಆ ಉಲ್ಲಾಸಕರವಾದ ಬದುಕು ಎಲ್ಲ ಬಗೆಯ ನೋವು, ಸಂಕಟಗಳನ್ನು ಮರೆಸುವ ಆಹ್ಲಾದಕರವಾದ ಕ್ಷಣಗಳಾಗಿದ್ದುವು. ಏನೆಲ್ಲ ಆಸೆ, ಆಕಾಂಕ್ಷೆಗಳಿದ್ದುವು! ಎಲ್ಲ ಕನಸುಗಳೂ ಬಣ್ಣಕುಂದಿ ಛಿದ್ರಗೊಂಡು ಬಿದ್ದುಹೋದುವು. ಕೈಗಳನ್ನು ಅಲಂಕರಿಸಿ ಕಿಂಕಿಣಿ ನಾದವೆಬ್ಬಿಸುತ್ತಿರುವ ಗಾಜಿನ ಬಳೆಗಳೆಲ್ಲ ಪುಡಿಪುಡಿಯಾಗಿ ಚೆಲ್ಲಾಪಿಲ್ಲಿಯಾದುವು. ಬದುಕು ಅವಳನ್ನು ಭಾರಹೊರುವುದಕ್ಕಷ್ಟೇ ಸೀಮಿತಗೊಳಿಸಿತು.ಯಾವ ಆಕ್ಷೇಪವಾಗಲೀ, ಆರೋಪವಾಗಲೀ, ಗೊಣಗಾಟವಾಗಲೀ ಇಲ್ಲದೆ ವಿಧಿಯ ಸಂಕಲ್ಪಕ್ಕೆ ಅವಳು ಶಿರಬಾಗಿದಳು.ನಿಗೂಢವಾದ

ಯಾವುದೋ ಒಂದು ತೀರ್ಮಾನದ ಬುನಾದಿಯ ಮೇಲೆ ಅವಳು ನಡೆದಳು.ಎಡಬಲಗಳನ್ನು ನೋಡದೆ ಒಂದು ಕ್ಷಣದ ಚಾಂಚಲ್ಯಕ್ಕೂ ಒಳಗಾಗದೆ ಅವಳು ನಡೆದಳು.

ಹಾಂ. ಒಂದು ನಿಮಿಷದ ಚಾಂಚಲ್ಯಕ್ಕೂ ಒಳಗಾಗದೆ.. ಹೌದೇ? ಹಾಗೆ ಹೇಳಲು ಸಾಧ್ಯವೇ? ಎಲ್ಲೋ ನೆನಪುಗಳು ಎಡವುತ್ತವೆ. ಚೆದರಿದ ಮೋಹಗಳು ಭೋರೆಂದು ವಿಲಪಿಸುತ್ತವೆ. ಹಳೆಯ ದಿನಗಳ ನೋವುಗಳು ಬಾತು, ಕೀವುಗಟ್ಟಿ ಒಸರುತ್ತವೆ. ತ್ಯಾಗವೆನ್ನುವ ಅದೆಷ್ಟೋ ಮಧುರವೂ ಕೋಮಲವೂ ಆದ ಹೆಸರಿಟ್ಟು ಕರೆದರೂ ಅದೊಂದು ಕೊಲೆಪಾತಕವಾಗಿರಲಿಲ್ಲವೇ..? ತನ್ನದು ಮಾತ್ರವಲ್ಲ ಮತ್ತೊಬ್ಬ ವ್ಯಕ್ತಿಯ ಜೀವನಾಸಕ್ತಿಯ ಕತ್ತು ಹಿಸುಕಿ ಸಾಯಿಸಿದ್ದಾಗಿತ್ತದು.

ಅದೆಲ್ಲವೂ ಯಾಕಾಗಿ?ಏನೂ ಸಿಕ್ಕಿರಲಿಲ್ಲ. ಎಲ್ಲಿಗೂ ತಲಪಲಾಗಿರಲಿಲ್ಲ. ಗುರಿಯಿಲ್ಲದ ಅರ್ಥಶೂನ್ಯವಾದ ಒಂದು ಪಯಣವಾಗಿತ್ತದು.

ದೇವರೇ! ನನ್ನನ್ನು ಕ್ಷಮಿಸು..!

ಒದ್ದೆಯಾದ ಕಣ್ಣುಗಳ ಮುಂದೆ ಈಗಲೂ ಬಾಲಚಂದ್ರ ಬಂದು ನಿಲ್ಲುತ್ತಾನೆ. ಇವತ್ತಿನಂತೆ ನರೆತ ಕೂದಲುಗಳಿಂದಲ್ಲ, ವಿಶಾಲವಾದ ಹಣೆಯಿಂದಲ್ಲ, ಮುಖವೆಲ್ಲ ಸುಕ್ಕುಗಟ್ಟಿ ನೆರಿಗೆ ಬಿದ್ದು ಒಳಗೆ ಸೇರಿ ಬಳಲಿದ ಅಸಿಸ್ಟಂಟ್ ಸೆಕ್ರೆಟರಿಯಾಗಲ್ಲ.

ದಪ್ಪಗಿನ ಫ್ರೇಮ್‌ನ ಕನ್ನಡಕದೊಳಗಿನಿಂದ ಉನ್ನತವಾದ ಮುಗುಳ್ನಗೆಯನ್ನು ಹರಿಸುತ್ತ ಬೆಳ್ಳಗೆ ತೆಳ್ಳಗೆ ಆರೋಗ್ಯ ಪುಟಿಯುವ ಯುವಕನಾಗಿ ಯಾರನ್ನಾದರೂ ನಿರಾಯುಧರನ್ನಾಗಿಸುವ ಸೌಮ್ಯಶೀಲನಾದ ಪುರುಷನಾಗಿ.

ಬಾಲಚಂದ್ರ ಆಗ ಸೂಪರಿಂಟೆಂಟ್ ಆಗಿದ್ದರು.ಅವರ ವಿಭಾಗದಲ್ಲೇ ಮೊದಲು ಕೆಲಸಕ್ಕೆ ಸೇರಿ ಶಾರದಾ ಪರಿಣತಿ ಪಡೆದುದು.ಆತನೇ ಶಾರದಾಗೆ ಆಫೀಸಿನ ಕಾರ್ಯಭಾರಗಳನ್ನು ನಿರ್ವಹಿಸಲು ತರಬೇತಿ ನೀಡಿ ಒಬ್ಬ ಸಮರ್ಥ ಉದ್ಯೋಗಿಯನ್ನಾಗಿ ಮಾಡಿದ್ದು.

ಒಂದು ರಜಾದಿನ ಡ್ಯೂಟಿ ಮುಗಿಸಿ ಹಿಂತಿರುಗುವಾಗ ಆಫೀಸಿನ ಹಿಂಭಾಗದ ಬೆಟ್ಟದ ಗುಡಿಯಲ್ಲಿರುವ ಹೂವಿನ ತೋಟದ ಸಮಿಪದಲ್ಲಿ ಅರಳಿದ ಗುಲ್ಮೊಹರ್ ಗಿಡದ ಬುಡದಲ್ಲಿ ನಿಂತು ಬಾಲಚಂದ್ರ ಅವಳಲ್ಲಿ ಕೇಳಿದ್ದ:

ಶಾರದೆಯನ್ನು ಪ್ರೀತಿಸಲು ನನಗೆ ಅರ್ಹತೆಯಿದೆಯೇ?

ಆ ಗುಲ್‌ಮೊಹರ್ ಗಿಡದಂತೆಯೇ ಮನಸ್ಸು ಅಸ್ತವ್ಯಸ್ತವಾಯ್ತು. ಹೂವುಗಳು ಉದುರಿದುವು. ಎಲೆಗಳು ಹರಡಿದುವು.

ಅಂಥ ಒಂದು ಪ್ರಶ್ನೆಯನ್ನು ತನ್ನ ಜೀವಿತಕಾಲದಲ್ಲಿ ಯಾರಿಂದಲೂ ಕೇಳಲು ಸಾಧ್ಯವಿಲ್ಲವೆಂದು ಅವಳು ತೀರ್ಮಾನಿಸಿದ್ದಳು.ಮನಸ್ಸಿನಲ್ಲಿ ಸ್ಥಿರವಾಗಿ ಸಂಕಲ್ಪಿಸಿದ ಆ ವಿಚಾರಗಳ ಕಿಟಿಕಿಗಳನ್ನು ಭದ್ರವಾಗಿ ಮುಚ್ಚಿಟ್ಟಿದ್ದಳು. ಹಾಗಿರುವಾಗ ಇದೀಗ..

ನೀನು ಯಾರಿಂದ ತಪ್ಪಿಸಿಕೊಳ್ಳಲು ಇಚ್ಛಿಸಿದ್ದೆಯೋ ಅತನೇ ಈಗ..

ಅಂಥ ಪ್ರಶ್ನೆಗೆ ಒಂದು ಉತ್ತರವನ್ನು ಮನಸ್ಸಿನಲ್ಲಿ ಸಿದ್ಧಮಾಡಿರಲೇ ಇಲ್ಲ. ಅದರ ಬಗ್ಗೆ ಯೋಚಿಸಲು ಸಾಧ್ಯವಾಗಿದ್ದರೆ ತಾನೆ? ಅವಳು ತಾಯಿಯಿಲ್ಲದ ಪಕ್ಷಪಾತಕ್ಕೊಳಗಾಗಿ ಹಾಸಿಗೆ ಹಿಡಿದ ಅಪ್ಪನ ತಬ್ಬಲಿ ಮಗಳಾಗಿದ್ದಳು. ಪ್ರಾಯಕ್ಕೆ ಬರುತ್ತಿದ್ದ ತಂಗಿ ಮತ್ತು ಶಿಶುವಾಗಿದ್ದ ತಮ್ಮನ ಹಿರಿಯಕ್ಕ ಅವಳು. ಒಂದು ಕುಟುಂಬವನ್ನು ಸಾಗಿಸಿಕೊಂಡು ಹೋಗಬೇಕಾದ ಜವಾಬ್ದಾರಿಯನ್ನು ಒಡಲಲ್ಲಿ ಹೊತ್ತ ನಾವೆಯಾಗಿದ್ದಳವಳು.ಆ ಬಗೆಯ ಒಂದು ಪ್ರಶ್ನೆಗೆ ಅವಳ ಬದುಕಿನಲ್ಲಿ ಅವಕಾಶವಿರಲಿಲ್ಲ. ಅದ್ದರಿಂದಲೇ ಉತ್ತರಕ್ಕಾಗಿ ಅಲೋಚಿಸಲು ಅವಳಿಗೆ ಸಮಯಾವಕಾಶ ಬೇಕಾಗಿತ್ತು.

ಮೈದಾನದಿಂದ ಬೀಸಿ ಬರುವ ಗಾಳಿ ಮರಬಾಳೆಗಳ ಎಲೆಗಳನ್ನು ಸೀಳುತ್ತ ತೋರಣಗಟ್ಟುತ್ತಿತ್ತು. ಗುಲ್ ಮೊಹರ್ ಹೂವುಗಳು ಉದುರಿ ಹರಡುತ್ತಿದ್ದುವು. ಅರುಣೋದಯದ ಮಂದಹಾಸದಂತೆ ಕೆಂಪಾಗಿರುವ ಹೂಗಳನ್ನು ಮುಡಿದುಕೊಂಡು ಯೂಫರ್ಬಿಯಾ ಕಂಟಿಗಳ ಬೇಲಿಯನ್ನು ಒರಗಿಕೊಂಡು ನಿಂತಳು. ಆಕಾಶ ಮುಸ್ಸಂಜೆಯ ಮೋಡಗಳಿಗೆ ಸಾಕ್ಷಿಯಾದುವು.



ಅವಳು ಏನನ್ನೂ ಮಾತನಾಡಲಿಲ್ಲ. ನಿಧಾನವಾಗಿ ನಡೆಯುತ್ತಿದ್ದಳು. ತಿರುಗಿ ನೋಡಲೂ ಇಲ್ಲ. ನೋಡಲು ಸಾಧ್ಯವಾಗಲೂ ಇಲ್ಲ. ಅಲ್ಲ, ಹಾಗೊಂದು ವೇಳೆ ಅವಲಿಗೆ ತಿರುಗಿ ನೋಡಲು ಸಾಧ್ಯವಾಗುತ್ತಿದ್ದರೆ, ಆ ಮುಖದಲ್ಲಿ ತುಂಬಿನಿಂತ ಭಾವವಿಕಾರಗಳನ್ನು ಗಮನಿಸುತ್ತಿದ್ದರೆ ಕಣ್ಣುಗಳ ಅಯಸ್ಕಾಂತೀಯ ಆಕರ್ಷಣೆಯ ಪರಿಧಿಯೊಳಗೆ ಸಿಲುಕಿರುತ್ತಿದ್ದರೆ_

ಹಾಗಿದ್ದರೆ.. ಏನಾಗಿಹೋಗುತ್ತಿತ್ತು..?

ಸಂತಪ್ತಗೊಂಡ ಹೃದಯದ ಎಲ್ಲ ವ್ಯಥೆಗಳೊಂದಿಗೆ ಆ ಕಾಲುಗಳಲ್ಲಿ ಸಂಪೂರ್ಣವಾಗಿ ತನ್ನನ್ನು ತಾನು ಸಮರ್ಪಿಸುತ್ತಿರಲಿಲ್ಲವೇ..? ನಿಧಾನವಾಗಿ ನಡೆದು ಹೋಗುತ್ತಿದ್ದಂತೆ ಹೃದಯದ ಅಂತರಾಳದಲ್ಲೆಲ್ಲೋ ಅನಾಥಗೊಂಡ

ಯಾವುದೋ ಆಕಾಂಕ್ಷೆಯ ನಿಸ್ಸಹಾಯಕತೆಯ ಚೀರಾಟ ಕೇಳುತ್ತಿತ್ತು. ಆಳವಾದ ಒಂದು ತಟಾಕದ ದಂಡೆಯಿಂದಲೋ ಎಂಬಂತೆ ಹೂಂಗುಟ್ಟುವಿಕೆ.ಅದು ಕೇಳದಂತೆ ನಡೆದಳು.ಸ್ವಂತ ನಿರ್ಧಾರದ ಶಿಲಾತಲದಲ್ಲಿ ಭದ್ರವಾಗಿ ಕಾಲೂರಿಕೊಂಡು ನಡೆದಳು.

ದೇವರೇ! ಅಧೀರೆಯಾಗದಿರು.. ಚಂಚಲಗೊಳ್ಳದಿರು.. ಬೀಳದಿರು..

ಆದರೆ, ರಾತ್ರಿ ನಿದ್ರಿಸಲು ಸಾಧ್ಯವಾಗಲಿಲ್ಲ. ಅನಂತರದ ಅನೇಕ ದಿನಗಳು ಆಫೀಸಿಗೆ ಹೋಗಲೂ ಸಾಧ್ಯವಾಗಲಿಲ್ಲ.

ನೆನಪಿನ ಬಾಗಿಲುಗಳನ್ನು ಅರ್ಧತೆರೆದು ಅದಕ್ಕೆ ಬೆನ್ನು ಆನಿಸಿ ನಿಂತು ಕಣ್ಣುಗಳ ದಿವ್ಯಪ್ರಕಾಶದ ತೋರುಬೆಳಕನ್ನು ಬೀರಿ ಸೌಮ್ಯವೂ ವಿಕಾರಮೃದುಲವೂ ಆದ ಸ್ವರದಿಂದ ಕೇಳುತ್ತಿದ್ದಾನೆ:

'ಶಾರದೆಯನ್ನು ಪ್ರೀತಿಸಲು ನಾನು ಯೋಗ್ಯನೇ?'

ವಿನಮ್ರಳಾಗಿ ನಿಲ್ಲಲು ಮಾತ್ರವೇ ಸಾಧ್ಯವಾದುದು. ಬಿಚ್ಚಿ ಹರಡಿದ ತಲೆಕೂದಲೊಳಗೆ ಮುಖದ ಕೆಂಪನ್ನು ಮುಚ್ಚಿಕೊಂಡು ಮೌನವಾಗಿ ನಿಲ್ಲಲು ಮಾತ್ರವೇ ಅವಳಿಗೆ ಸಾಧ್ಯವಾಗಿತ್ತು.

'ಲೇ ಹುಡುಗಿ!ನೀನು ಹುಟ್ಟಿದ್ದೇ ಈ ಪ್ರಶ್ನೆಯನ್ನು ಕೇಳಿಸಿಕೊಳ್ಳಲು ಮಾತ್ರ'ಎಂದು ಯಾರೋ ಸತತವಾಗಿ ಒಳಗಿನಿಂದ ಪಿಸುಗುಟ್ಟುತ್ತಿದ್ದರು.ಆ ಮಾತುಗಳ ಲಹರಿಯಲ್ಲಿ ಆ ನೆನಪುಗಳ ಸೌರಭ್ಯದಲ್ಲಿ ಎಲ್ಲವೂ ಮರೆಯಾಗಿ ಕರಗಿಹೋಗುತ್ತಿತ್ತು.ಅಂತರಾತ್ಮದೊಳಗೆ ಒಂದು ಗುಲ್‌ಮೊಹರ್ ಹೂವು ಅರಳಿ ನಿಂತಿತ್ತು.

ಅದರ ಸ್ವಾಭಾವಿಕವಾದ ಪರಿಣಾಮ ಏನಾಗಿರುತ್ತಿತ್ತು...? ಹೆಣ್ತನದ ಆ ಮರ್ಮರವೇ ಜೀವನದ ಸಂಗೀತವಾಗಿ ಅರಳುತ್ತಿರಲಿಲ್ಲವೇ? ದಿಗಂತಗಳ ಶ್ರವಣೇಂದ್ರಿಯಗಳಲ್ಲೂ ಆ ಆಹ್ಲಾದಗಾನದ ರಾಗಧಾರೆ ತಲಪಿ ಲಯವಾಗುತ್ತಿರಲಿಲ್ಲವೇ.?

ಆದರೆ ಯಾವುದೂ ಅದರ ಸ್ವಾಭಾವಿಕವಾದ ಪರಿಣಾಮದತ್ತ ತಲಪಲೇ ಇಲ್ಲವಲ್ಲ! ವಿಧಿಯ ನಿಗೂಢವಾದ ಹಸ್ತ ಅವುಗಳನ್ನು ಮಗುಚಿ ಹಾಕಿತು. ಎಲ್ಲವೂ ಬಿದ್ದು ಒಡೆಯಿತು. ಅಲ್ಲದಿದ್ದರೆ ವಿಧಿಯನ್ನೇಕೆ ಹಳಿಯಬೇಕು..

ಎಲ್ಲದಕ್ಕೂ ಕಾರಣ ತಾನೇ..

ಮದವೇರಿದ ಆನೆಯಂತಿರುವ ಕಪ್ಪಾದ ಮೇಘರಾಶಿಗಳಿಂದ ಕೂಡಿದ ಆಕಾಶ. ವರ್ಷಧಾರೆ ಯಾವಾಗ ಬೇಕಾದರೂ ಸುರಿಯಬಹುದು.

ಅಪ್ಪ ಇದ್ದಕ್ಕಿದ್ದಂತೆ ತೀರಿಹೋದರು. ಮೃತ್ಯು ಸ್ವಚ್ಛಂದವಾಗಿ ಬಂದು ಅಪ್ಪನ ತಲೆ ಸವರಿದಾಗ ಅವಳು ನಿರ್ವಿಕಾರಚಿತ್ತಳಾಗಿ ನಿಂತು ನೋಡಿದಳು. ಎದೆಒಡೆದು ರೋದಿಸಲಿಲ್ಲ. ಪ್ರಜ್ಞೆ ತಪ್ಪಿ ಬೀಳಲಿಲ್ಲ. ನಿರ್ನಿಮೇಷಳಾಗಿ ನೋಡುತ್ತ ನಿಂತಳು.

ಇನ್ನು ಅಪ್ಪನಿಲ್ಲ. ಅಪ್ಪನಿಗೆ ಮಗಳನ್ನು ಲಾಲಿಸಲು ಗೊತ್ತಿರಲಿಲ್ಲ. ವಾತ್ಸಲ್ಯವನ್ನು ತೋರಿಸಲು ಸಾಧ್ಯವಾಗಿರಲಿಲ್ಲ. ಅಪ್ಪನ ಮನಸ್ಸಿನ ತುಂಬ ಇದ್ದುದು ಸಾವಿರಾರು ಮೈಲಿ ದೂರದ

ಬ್ರಿಟಿಷರ ವಿರುದ್ಧ ದ್ವೇಷಭಾವನೆಯೊಂದೇ. ಸಾಹಸ ಮತ್ತು ದ್ವೇಷ– ಇಷ್ಟೇ ತುಂಬಿಕೊಂಡಿದ್ದ ಜೀವನವಾಗಿತ್ತು ಅಪ್ಪನದ್ದು. ಬದುಕುವುದನ್ನೇ ಮರೆತ ವ್ಯಕ್ತಿಯಾಗಿದ್ದರು ಅವರು.

ಆದರೆ, ಅದ್ಭುತವೆಂಬಂತೆ ಸಾಯುವ ಮೊದಲು ಯಾವುದೋ ಪ್ರೇರೇಪಣೆಗೊಳಗಾದವರಂತೆ ತಂದೆ ಅವಳನ್ನು ಸಮೀಪಕ್ಕೆ ಕರೆದರು. ಮುಚ್ಚಿಗೆಯ ತೂತಿನೊಳಗಿನಿಂದ ಕೆಂಪಾದ ವೃತ್ತಾಕಾರದ ಸೂರ್ಯನ ಕಿರಣಗಳು ಬೀಳುತ್ತಿದ್ದ ಸಾಯಂಕಾಲದ ಸಮಯವಾಗಿತ್ತದು. ಬಯಲಿನ ಅಂಚಿನಲ್ಲಿರುವ ದಟ್ಟವಾದ ಕಾಡಿನ ಕಡೆಯಿಂದ ಕಪ್ಪಾದ ನೆರಳುಗಳು ವೆರಾಂಡದ ಮೇಲೆ ನೀಳವಾಗಿ ಬೀಳುತ್ತಿದ್ದುವು. ಅವಳು ಹತ್ತಿರ ಬಂದು ಏನೆಂಬಂತೆ ನೋಡಿ ನಿಂತಾಗ ಅವರ ಕಣ್ಣುಗಳು ತುಂಬಿಕೊಂಡಿದ್ದುವು.ರೋಮಾವೃತವಾದ ಮುಖದ ಆಳದಲ್ಲಿ ಎರಡು ಕಣ್ಣೀರ ತಟಾಕಗಳು.

ಒಮ್ಮೆಯೂ ಅಳದ ತಂದೆ ಈಗ ಅಳುತ್ತಿದ್ದಾರೆಯೇ?

ಶಿಥಿಲವಾದ ಕೈಗಳಿಂದ ಅವಳನ್ನು ಹತ್ತಿರಕ್ಕೆ ಎಳೆದುಕೊಂಡು ಅಸ್ಪಷ್ಟವಾದ ಧ್ವನಿಯಿಂದ ಅಪ್ಪ ಹೇಳಿದರು:

ನನ್ನ ನಿರ್ಭಾಗ್ಯ ಮಗಳೇ..., ಇಡೀ ಜೀವಿತಕಾಲದ ವಾತ್ಸಲ್ಯವೆಲ್ಲವನ್ನೂ, ಸ್ನೇಹಭಾವವನ್ನೂ ಒಳಗೊಂಡ ಮಾತುಗಳಾಗಿದ್ದುವು ಅವು.ಪುನಃ ಏನೋ ಹೇಳಲೆಂಬಂತೆ ಆತುಟಿಗಳು ಚಲಿಸಿದುವು.ಆದರೆ, ಸ್ವರ ಹೊರಗೆ ಬರಲಿಲ್ಲ. ಏನನ್ನೂ ಹೇಳದೆಯೇ ಆ ಬದುಕು ಅಸ್ತಂಗತವಾಯ್ತು.

ಅವಳು ತತ್ತರಿಸಿದಳು.ತಂಗಿಯೂ ತಮ್ಮನೂ ಗೋಳಿಡುವಾಗಲೂ ಅವಳು ಸ್ತಬ್ಧಳಾಗಿ ನಿಂತಳು.

ಆ ತುಟಿಗಳಿಂದ ಹೊರಬರಲಿಚ್ಛಿಸಿದ ಮಾತುಗಳು ಏನಾಗಿರಬಹುದು? ಕೊನೆಗಾಲದಲ್ಲಿ ಅಪ್ಪ ಏನನ್ನು ಹೇಳಬೇಕೆಂದು ಭಾವಿಸಿರಬಹುದು? ಸಂವತ್ಸರಗಳು ತುಳಿಯುತ್ತ ಗುಲ್ಲೆಬ್ಬಿಸುತ್ತ ಧೂಳೆಬ್ಬಿಸುತ್ತ ಕಣ್ಣಮುಂದಿನಿಂದ ಹಿಂದುಹಿಂದಕ್ಕೆ ಸಾಗಿ ಹೋದುವು... ಬೃಹತ್ತಾದ ಘೋಷಯಾತ್ರೆಗಳೂ.. ಸಮಾವೇಶಗಳೂ.. ಸತ್ಯಾಗ್ರಹಗಳೂ.. ಪಿಕೆಟಿಂಗ್‌ಗಳೂ.. ಎಲ್ಲದರ ಸಮಕ್ಷಮದಲ್ಲಿ ಖಾದಿಯ ಟೊಪ್ಪಿ ಧರಿಸಿದ ಓರ್ವ ಆಜಾನುಬಾಹುವನ್ನು ಕಾಣಬಹುದಾಗಿತ್ತು. ಪತ್ರಿಕೆಗಳಲ್ಲೆಲ್ಲ ಆ ವ್ಯಕ್ತಿಯ ಭಾವಚಿತ್ರವನ್ನು ಕಾಣಬಹುದಾಗಿತ್ತು.ಅವರ ಭಾಷಣಗಳು ಪ್ರಕಟವಾಗುತ್ತಿದ್ದುವು. ಅವರು ಅಪ್ಪ!

ಅಂದು ಕೇವಲ ಬಾಲಿಕೆಯಾಗಿದ್ದಳು ಅವಳು. ಲಂಗ, ಜಾಕೀಟು ಧರಿಸಿ ಹೆಗಲಲ್ಲಿ ಚೀಲವನ್ನು ತಗಲಿಸಿಕೊಂಡು ಶಾಲೆಗೆ ಹೋಗುವಾಗ ಜನರು ಅಭಿಮಾನ, ಗೌರವದಿಂದ ಅವಳತ್ತ ತೋರಿಸಿ ಹೇಳುತ್ತಿದ್ದುದನ್ನು ಅವಳು ಕೇಳೀಸಿಕೊಂಡಿದ್ದಳು:

'ನೋಡಿ... ಅವರ ಮಗಳು ಈಕೆ.ಗೊತ್ತಿಲ್ವೇ?'

ಅಂಥ ತಂದೆಯ ಮಗಳು ಹೀಗೆ..

ಅಲ್ಲದಿದ್ದರೆ ಆ ತಂದೆಯ ಪರಿಸ್ಥಿತಿಯಾದರೂ ಏನಾಯ್ತು ಕೊನೆಗೆ..?

ಯಾರ ಗಮನಕ್ಕೂ ಬರದೆ, ಯಾರಿಂದಲೂ ಗುರುತಿಸದೆ, ಯಾರ ಗೌರವಕ್ಕೂ ಪಾತ್ರರಾಗದೆ.. ಆರಡಿ ಮಣ್ಣಿನಲ್ಲಿ ಎಲ್ಲವೂ ಹುದುಗಿತು.

ಕಾಡುಗಿಡಗಳೂ, ಕಾಡು ಎಕ್ಕೆಗಳೂ ಮಾತ್ರ ಬೆಳೆಯುವ ಶ್ಮಶಾನದಲ್ಲಿ ಹೊಸದಾಗಿ ನೆಟ್ಟ ತೆಂಗಿನ ಎಳೆಯ ಗರಿಗಳತ್ತ ನೋಡುತ್ತ ನಿಂತಳು. ಆ ತೆಂಗಿನ ಬುಡದ ಮಣ್ಣಿನೊಳಗೆ ಒಂದು ಜೀವನ ಮುಕ್ತಾಯಗೊಂಡು ಮಲಗಿತ್ತು.ಗಾಢವಾದ ನಿದ್ರೆಯಲ್ಲಿ ಮುಳುಗಿ ಮಲಗಿತ್ತು.ವಿಸ್ಮೃತಿಯ ತಣ್ಣಗಿನ ಅಂಧಕಾರದಲ್ಲಿ ಅದೃಶ್ಯವಾಗಿ ಮಲಗಿತ್ತು.

ಈಗಲೂ ಆ ಕಣ್ಣುಗಳು ತುಂಬಿಕೊಂಡಿರಬಹುದೇ..? ಆ ತುಟಿಗಳು ಕಂಪಿಸುತ್ತಿರಬಹುದೇ..? ಅವಸಾನದ ಮಾತುಗಳು ಈಗಲೂ ಅಲ್ಲಿ ತಡವರಿಸುತ್ತಿರಬಹುದೇ..?

ಅಪ್ಪಾ, ದಯವಿಟ್ಟು ಹೇಳಿ  ಕೊನೆಗಾಲದಲ್ಲಿ ನೀವು ಹೇಳಬೇಕೆಂದುಕೊಂಡ ಮಾತುಗಳು ಯಾವುದು?

ಬದುಕಿನ ಶೂನ್ಯಭೂಮಿಯಲ್ಲಿ ಆಸರೆಯಿಲ್ಲದೆ ಬಿಟ್ಟುಹೋಗುತ್ತಿರುವ ಮಕ್ಕಳ ಬಗ್ಗೆಯಾಗಿರಬಹುದೇ? ರೆಕ್ಕೆ ಬಲಿಯದ ಪುಟ್ಟ ತಮ್ಮನ ಭವಿಷ್ಯದ ಬಗ್ಗೆಯಾಗಿರಬಹುದೇ..? ಯಾವುದನ್ನೂ ಮಾಡಿ ಮುಗಿಸದೆ ಬಿಟ್ಟು ಹೋಗುತ್ತಿರುವ ತಂಗಿಯ ಬಗ್ಗೆಯಾಗಿರಬಹುದೇ?

ಬದುಕಿರುವಾಗಲೂ ಅಪ್ಪನಿಗೆ ಸ್ವಸ್ಥತೆಯಿರಲಿಲ್ಲ. ಸಾವಿನಲ್ಲಾದರೂ ಅದು ಲಭಿಸಲಿ.ನಿದ್ರೆಮಾಡಿ. ಸ್ವಸ್ಥಚಿತ್ತರಾಗಿ ಪ್ರಶಾಂತಚಿತ್ತರಾಗಿ ನಿದ್ರಿಸಿ. ಕೊನೆಯ ಕ್ಷಣದಲ್ಲಿ ಹೇಳಬೇಕೆಂದುಕೊಂಡ ಎಷ್ಟು ಕಷ್ಟಪಟ್ಟರೂ ಹೇಳಲಾಗದೆ ಉಳಿದ ಆ ಮಾತುಗಳಿಗೆ ನಾನೀಗ ಉತ್ತರ ಕೊಡುತ್ತೇನೆ:

'ಎಲ್ಲ ಜವಾಬ್ದಾರಿಗಳನ್ನೂ ನಾನು ವಹಿಸುತ್ತೇನೆ. ಅಪ್ಪನ ಉತ್ತಮ ಹೆಸರನ್ನೂ, ಗೌರವವನ್ನೂ ತಮ್ಮ ತಂಗಿಯರ ಭವಿಷ್ಯದ ಬದುಕನ್ನೂ ಎಲ್ಲವನ್ನೂ ನಾನು ವಹಿಸುತ್ತೇನೆ.'

ಆ ಪ್ರತಿಜ್ಞೆಯನ್ನು ನೆರವೇರಿಸಲು ಬೇಕಾದ ಸಂಪೂರ್ಣ ಸಮರ್ಪಣಾಭಾವದಿಂದಲೇ ಹೊರಟ ಏಕಾಗ್ರತೆಯ ಮುಂದಿನ ಪ್ರಯಾಣ. ಆ ಪ್ರಯಾಣದಲ್ಲಿ ಮನಸ್ಸಿಗೆ ಪ್ರಿಯವಾದ ಅನೇಕ ವಿಚಾರಗಳನ್ನು ಜಾಡಿಸಿ ದೂರಮಾಡಬೇಕಾಯ್ತು. ಬೆಲೆಬಾಳುವ ಹಲವನ್ನು ಕಿತ್ತು ಎಸೆಯಬೇಕಾಯ್ತು. ಒಬ್ಬ ಹೆಣ್ಣಿಗೆ ಅತಿ ಅಮೂಲ್ಯವಾಗಿರುವ ಜೀವನದ ಮೋಹವನ್ನು ಕೂಡ. ನಿರ್ಣಾಯಕವಾದ ಆ ಧರ್ಮಸಂಕಟದ ಸನ್ನಿವೇಶ ಈಗಲೂ ಚೆನ್ನಾಗಿ ನೆನಪಿದೆ.

ಅಪ್ಪನ ಸಾವಿನ ವಾರ್ತೆಯನ್ನು ಕೇಳಿದಾಕ್ಷಣ ಬಾಲಚಂದ್ರ ಧಾವಿಸಿ ಬಂದಿದ್ದ. ಶವಯಾತ್ರೆಯಿಂದ ಮೊದಲ್ಗೊಂಡು ಅಂತಿಮ ಸಂಸ್ಕಾರದ ವರೆಗೂ ಮನೆಯವರೆಂಬಷ್ಟು ಆತ್ಮೀಯತೆಯಿಂದಲೂ ಜವಾಬ್ದಾರಿಯಿಂದಲೂ ಎಲ್ಲ ಕಾರ್ಯಗಳಲ್ಲೂ ಭಾಗವಹಿಸಿದ್ದ.ಅನಂತರದ ದಿನಗಳಲ್ಲೂ ಆಗಾಗ್ಗೆ ಬಂದು ಹೋಗುತ್ತಿದ್ದ.ತನ್ನ ಸೌಮ್ಯವಾದ ಸಾನ್ನಿಧ್ಯದಿಂದ ಆ ಮನೆಗೆ ಬೆಳಕಿನ ಕಿರಣವಾಗಿದ್ದ. ಕಣ್ಣೀರು ತುಂಬಿದ ಅವಳ

ಏಕಾಂತಭಯಂಕರವಾದ ರಾತ್ರಿಗಳಿಗೆ ಆತ ವಸಂತ ಪೌರ್ಣಮಿಯಾಗಿದ್ದ. ಆ ಸಂದರ್ಶನಗಳು ಹೆಚ್ಚಿದಂತೆಲ್ಲ ಸಮಸ್ಯಾತ್ಮಕವಾಗಿದ್ದ ತನ್ನ ಜೀವನ ಇನ್ನಷ್ಟು ಕೆಟ್ಟುಹೋಗಬಹುದೇ ಎಂಬ ಭಯ. ಅದೇ ಭಯದಲ್ಲಿ ಅವನ ಮುಂದೆ ಅದನ್ನು ಮುಕ್ತವಾಗಿ ಅಭಿವ್ಯಕ್ತಿಸಿದಳು. ಸ್ನೇಹವನ್ನೂ, ಸಹಾಯವನ್ನೂ, ಸಹಾನುಭೂತಿಯನ್ನೂ ನೀಡುತ್ತಿರುವ ಓರ್ವ ಮಹಾನುಭಾವನನ್ನು ಮರ್ಯಾದೆಯಿಲ್ಲದವಳಂತೆ ಹೇಳಿದಳು:

'ನಾನು ಎಂದಿಗೂ ಮದುವೆಯಾಗಲಾರೆ.'

ಬಿಳಿಚಿಕೊಂಡ ಮುಖದಲ್ಲಿ ವೇದನೆಯ ಭಾರವನ್ನು ಅದುಮಿಕೊಂಡೇ ಆತ ಹೇಳಿದ:

'ಎಷ್ಟು ಸಮಯ ಬೇಕಿದ್ದರೂ ನಾನು ಕಾಯುತ್ತೇನೆ.'

ಸ್ತ್ರೀಸಹಜವಾದ ಬದುಕಿನ ಆಸೆಗಳೂ ಯೌವನದ ಬಯಕೆ. ವಿಕಾರಗಳೂ ಕೈಹಿಡಿದು ತಡೆಯುವ ಮುನ್ನವೇ ಅವಳು ಒತ್ತಿ ಹೇಳಿದಳು:

'ಬೇಡ, ಅದು ಬೇಡ.. ನನಗೆ ಎಂದೆಂದಿಗೂ ಮದುವೆಯಿಲ್ಲ. ಇದು ಖಂಡಿತ.ನನ್ನನ್ನು ಯಾರೂ ಕಾಯುವುದು ಬೇಡ.'

ಬೀಸಿ ಹೊಡೆದ ಖಡ್ಗದ ಹರಿತವಾದ ಧಾರೆಯಂತೆ ಆ ಮಾತುಗಳು ನಿಷ್ಕಳಂಕವಾದ ಸ್ನೇಹದ ಎದೆಯಾಳಕ್ಕೆ ಹೋಗಿ ನೆಟ್ಟಿದುವು. ಮತ್ತೇನನ್ನೂ ಆಡದೆ ಆತ ಹೊರಟುಹೋದ. ಹಾದಿಯಲ್ಲಿ ಒಂದಿಷ್ಟು ನೆರಳಿನ ಛಾಯೆಯನ್ನೂ ಉಳಿಸದೆ ಹೊರಟೇಹೋದ.

ಅನಂತರದಲ್ಲಿ ಬದುಕು ಅವಳನ್ನು ಏಕಾಗ್ರವಾದ ಓರ್ವ ತಪಸ್ವಿನಿಯಾಗಿಸಿತು. ಮನಸ್ಸು ಅದರ ಎಲ್ಲ ದೌರ್ಬಲ್ಯಗಳನ್ನೂ ಒಂದು ಹಳೆಯ ಕಾಲದ ಫೈಲಿನಂತೆ ಕೆಂಪಾದ ರಿಬ್ಬನಿನಲ್ಲಿ ಬಿಗಿಯಾಗಿ ಕಟ್ಟಿ ಇಟ್ಟಿತು. ಸಮುದಾಯದ ಗತಾನುಗತಿಕ ನಿಯಮಗಳೆಲ್ಲವನ್ನೂ ಪಾಲಿಸುತ್ತ ಹೊಂದಿ ನಡೆದಳು.ರಸ್ತೆಯ ಎಡಭಾಗದಲ್ಲೇ ಅವಳ ಸಂಚಾರವಾಗಿತ್ತು. 45–75ರಿಂದ 50–120ಕ್ಕೂ ಅಲ್ಲಿಂದ 90–200ಕ್ಕೂ ಮಾತ್ರ ಅವಳು ದಾರಿ ಬದಲಿಸಿ ನಡೆದಳು. ವರ್ಷಾನುವರ್ಷಗಳ ಕಾಲ ಕಲ್ಲು ಚಪ್ಪಡಿಗಳನ್ನು ತುಳಿದಳು.ಏಕತಾನತೆಯ ದಿನಗಳ ಬೇಸರದ ಆವರ್ತನಗಳನ್ನು ಅನುಭವಿಸಿದಳು. ಈ ಮಧ್ಯದಲ್ಲಿ ಮಾಡಿ ಮುಗಿಸಬೇಕಾಗಿದ್ದ ಅನೇಕ ಜವಾಬ್ದಾರಿಗಳನ್ನು ಒಂದೊಂದಾಗಿ ಮುಗಿಸಿದ ಆತ್ಮಸಂತೃಪ್ತಿಯನ್ನೂ ಅನುಭವಿಸಿದಳು.ತಂಗಿಯ ವಿವಾಹವನ್ನು ನಡೆಸಿದಳು. ಮಕ್ಕಳು, ಸಂಸಾರದೊಂದಿಗೆ ಬಹುದೂರದ ನಗರಕ್ಕೆ ಅವಳು ಹಾರಿದಳು. ತಮ್ಮನಿಗೂ ಒಂದು ನೆಲೆ ಆಯ್ತು.ಈ ನಡುವೆ ಮನೆ, ಒತ್ತಿಲುಗಳನ್ನು ಮಾರಬೇಕಾಯ್ತು. ಆದರೇನು ಕರ್ತವ್ಯಗಳ ಭಾರವನ್ನು ಒಂದೊಂದಾಗಿ ಇಳಿಸುತ್ತ ಬಂದ ತೃಪ್ತಿ. ಇನ್ನು ಯಾವ ಜವಾಬ್ದಾರಿಯೂ ಬಾಕಿ ಉಳಿದಿಲ್ಲ ಎಂಬ ಸಮಾಧಾನ. ಇದರೆಡೆಯಲ್ಲಿ ಕಾಲವೆಂಬುದು ಅವಳ ತಲೆಗೆ ಬೆಳ್ಳಿಯ ಹೂಗಳನ್ನು ಮುಡಿಯಿಸಿತು.ಕೆನ್ನೆಗಳ ಕೆಂಪನ್ನು ಮಾಸಿಹಾಕಿತು. ಯೌವನ ಸ್ವಲ್ಪ ಸ್ವಲ್ಪವಾಗಿ ಬೀಳ್ಕೊಡುತ್ತ ಹೋಯ್ತು. ಹೊತ್ತು ಅಪರಾಹ್ನಕ್ಕೆ ಬಂದು ಕೂತಿದೆ. ಬದುಕಿನಲ್ಲಿ ಹಲವರು ಬಂದುಹೋದರು. ಹಲವರು ದೂರವಾದರು. ಹಗಲು ರಾತ್ರಿಗಳು, ದೀರ್ಘವಾದ

ವಸಂತಗಳು ಈ ಹಳೆಯ ವನಿತಾಹಾಸ್ಟೆಲಿನ ಕತ್ತಲೆಯ ಕೋಣೆಯಿಂದ ಸೆಕ್ರೆಟೇರಿಯಟ್ ವರೆಗಿರುವ ಇಕ್ಕಟ್ಟಾದ ದಾರಿಯ ಎಡಭಾಗವನ್ನು ಕರಗಿಸುತ್ತ ಹೋಯ್ತು. ಎಷ್ಟೋ ಜನ ಒಡನಾಡಿಗಳು ಬಂದು ಹೋದರು!

ಸುಮತಿ, ಆನಿ, ರಾಧ, ಮೇರಿ, ಇಂದಿರ, ಶ್ರೀದೇವಿ..

ಒಬ್ಬೊಬ್ಬರಾಗಿ ದೂರವಾದರು. ಪ್ರತಿಯೊಬ್ಬರೂ ತಮ್ಮ ಪುಟ್ಟ ಕುಟುಂಬದ ಒಪ್ಪವಾದ ಗೋಡೆಯೊಳಗೆ.. ಕಿಣಿ ಕಿಣಿ ನಾದದ ಕಾಲ್ಗೆಜ್ಜೆಗಳಿಂದ ಪುಟ್ಟ ಪುಟ್ಟ ಪಾದಗಳ ಪುಟಾಣಿಗಳು ಆಟವಾಡುವ ಅಂಗಳದೊಳಗೆ..ಒಂದು ಶತಾವರಿ ಹೂವಿನಂತೆ ಸಪೂರವಾಗಿದ್ದ, ಒಂದು ಪುಟ್ಟ ಪಾರಿವಾಳದಂತೆ ಮುದುಡಿಕೊಂಡಿದ್ದ ಆ ಮೈತ್ರೇಯಿ ಕೂಡ ಒಂದು ಪ್ರೇಮವಿವಾಹದ ಬಂಧನದಲ್ಲಿ ಸಿಕ್ಕಿದಳು. ಅವರೆಲ್ಲರೂ ಅಮ್ಮಂದಿರಾದರು. ಕೆಲವರು ಅಜ್ಜಿಯರೂ ಆದರು. ಸ್ವಂತ ಗೃಹಸ್ಥ ಸೌಂದರ್ಯದ ಸುಖಕರವಾದ ಆನಂದದಿಂದ ರೆಕ್ಕೆ ಬಿಚ್ಚಿ ಮುದುಗಿ ಕುಳಿತ ಆ ತಾಯಿಹಕ್ಕಿಗಳನ್ನು ಕೇವಲ ಒಬ್ಬ ವೀಕ್ಷಕಳಂತೆ ನೋಡುತ್ತ ನಿಂತಳು. ಅತೃಪ್ತವಾದ ಬಾಯಾರಿಕೆಯಿಂದ ನಿರಾಶೆಯ ನೋವಿನಿಂದ ದಯನೀಯವಾದ ಪರವಶತೆಯಿಂದ ನೋಡುತ್ತ ನಿಂತಳು.

'ತಾನು ಮಾತ್ರವೇ ಹೊರಗಾಲಿನಿಂದ ತುಳಿದು ಎಸೆಯಲ್ಪಟ್ಟಿದ್ದೇನೆ.'

ಜನರು ಓಡಾಡುವ ವಿಶ್ರಮಿಸುವ ಹಾದಿಯ ಮಧ್ಯದ ದೇವಾಲಯದ ಸಾಯಂಕಾಲದಂತಾಗಿತ್ತು ಬದುಕು. ಒಂದೇ ಅಡಿಪಾಯದ ಹಾಸುಗಲ್ಲುಗಳ ಮೇಲೆ ಆಫೀಸಿಗೂ ಹಾಸ್ಟೆಲ್ಲಿಗೂ ನಡೆದಾಡುತ್ತ ಅನುಸ್ಯೂತವಾಗಿ ನಡೆಯುತ್ತಲೇ ಇತ್ತು.ಅವಿಶ್ರಾಂತವಾದ ಒಂದು ಜೀವಿತವೃತ್ತದಂತೆ ಸ್ವಂತವಾಗಿ ನಿರ್ಮಿಸಿದ ಬಲೆಯಲ್ಲಿ ಸಿಲುಕಿ ಅಲೆದಾಡುತ್ತಿದ್ದಳು.ಶೂನ್ಯವಾದ ಬಲೆಯಲ್ಲಿ ಎಲ್ಲವೂ ಸಮಾಪ್ತವಾಗುತ್ತದೆ.

ತನಗೆ ಯಾವತ್ತೂ ಮದುವೆಯಾಗುವುದಿಲ್ಲ ತನ್ನನ್ನು ಯಾರೂ ಕಾಯಬೇಕಾಗಿಲ್ಲ.

ಭೂತಕಾಲದ ಚಪ್ಪಡಿಕಲ್ಲುಗಳಲ್ಲಿ ತಾನೇ ತಾನಾಗಿ ಚೆದರಿಜಿದ್ದ ಮುಳ್ಳುಗಳು ನೆನಪಿನ ಕಾಲುಗಳನ್ನು ಚುಚ್ಚಿ ರಕ್ತವನ್ನು ಹರಿಸುತ್ತವೆ. ನೋವುಂಟುಮಾಡುತ್ತವೆ.

ಬಾಲಚಂದ್ರ, ನೀನೇಕೆ ಆಷಾಡದ ಮೊದಲ ಹೂವಿನಂತೆ ನಿನ್ನ ಹೃದಯಸೌಂದರ್ಯದೊಂದಿಗೆ ನನ್ನ ಬಳಿಗೆ ಬಂದು ಕರೆದು ಎಚ್ಚರಿಸಿದೆ? ಕಾಲ ನಿನ್ನ ಕಣ್ಣೀರಿನ ಹನಿಗಳನ್ನು ತೊಡೆದಿದ್ದಾನೆ. ಆದರೆ ನನ್ನದನ್ನು..?

ಬಾಲಚಂದ್ರ ಕಾಣಸಿಗುತ್ತಿದ್ದ.ಕಷ್ಟಪಟ್ಟು ತನ್ನ ವಿಭಾಗದಿಂದ ಬೇರೆ ಕಡೆಗೆ ವರ್ಗಾಯಿಸಿದ ಬಳಿಕವೂ.ಆದರೆ ಒಮ್ಮೆಯೂ ಆಬಗ್ಗೆ ನೆನಪು ಮಾಡುತ್ತಿರಲಿಲ್ಲ. ಸೌಹಾರ್ದಯುತವಾದ ಮಂದಹಾಸವನ್ನು ಮಾತ್ರ ಬೀರುತ್ತ ಸಾಗಿದ.ಆತ ಕಂಡಾಗಲೂ ಕಾಣದಿರುವಾಗಲೂ ನಷ್ಟ ಸೌಭಾಗ್ಯಗಳ ವಿಷಾದಪೂರಿತವಾದ ನೆನಪುಗಳನ್ನು ಎಚ್ಚರಿಸಿ ತೀವ್ರವಾದ ನೋವಿನ ಬೆಂಕಿಯ ಜ್ವಾಲೆಗಳಲ್ಲಿ ಬೇಯುತ್ತ ನಿಂತಳು.

ಆತ ವಿವಾಹಿತನಾದ.ತಂದೆಯಾದ. ಬದುಕಿನ ಯಾತ್ರೆಯಲ್ಲಿ ಬಹಳ ದೂರ ಸಾಗಿದ.ಆದರೂ ಅಜ್ಞಾತವಾದ ಯಾವುದೋ ಶಕ್ತಿ ಅವಳನ್ನು ಯಾವಾಗಲೂ ಆಕಡೆಗೇ ಸೆಳೆಯುತ್ತಿತ್ತು. ಆತನ ಜೀವನದ ಬಗ್ಗೆಯೂ ಸುಖದ ಬಗ್ಗೆಯೂ ಯಾವಾಗಲೂ ಉತ್ಕಂಠಿತವಾದ ಅಸ್ವಸ್ಥತೆಯಿಂದ ಮೌನವಾದ ಶೋಧನೆಯನ್ನು ನಡೆಸಿತು. ಆಕಾಂಕ್ಷೆಯಿಂದ ಕೂಡಿದ ಪ್ರೀತಿಯಿಂದ ಮನಸ್ಸು ಆತನನ್ನೇ ಹಿಂಬಾಲಿಸಿತು.ಯಾವಾಗಲೂ ನಿಶ್ಶಬ್ದವಾಗಿ ಪ್ರಾರ್ಥಿಸಿತು.

ಆತನನ್ನು ದೇವರು ಅನುಗ್ರಹಿಸಲಿ.

ಆತನ ಕುಟುಂಬದೊಂದಿಗೆ ಪರಿಚಯವಾಯ್ತು.ಕ್ರಮೇಣ ಆ ಕುಟುಂಬದವರೊಂದಿಗೆ ಭೇಟಿ ಹೆಚ್ಚಾಯ್ತು.ಆ ಮನೆಯ ಮಕ್ಕಳ ಆಟಕೂಟಗಳೊಂದಿಗೆ ಭಾಗಿಯಾದಳು.ಆ ಮಕ್ಕಳನ್ನು ತಬ್ಬಿಕೊಂಡು ಮುದ್ದಿಸುವಾಗ ಮಾತ್ರ ಎದೆಯೊಳಗೆಲ್ಲೋ ಮಾತೃತ್ವದ ಒಸರು ಹನಿಯುತ್ತಿತ್ತು.



ಆದರೆ, ಆ ಸಂಬಂಧವನ್ನು ಕುರಿತು ಜನರಾಡುವ ಕಥೆಗಳೊಂದೂ ಅವಳ ಅರಿವಿಗೆ ಬರಲಿಲ್ಲ. ತಲೆಕೂದಲು ನರೆಯುತ್ತಿದ್ದ ಮಧ್ಯವಯಸ್ಕಳಾದ ಈ ಹಳೆಯ ಅಪ್ಪರ್ ಡಿವಿಷನಲ್ ಕ್ಲರ್ಕ್‌ನ ಹೊಸ ಸಂಬಂಧವನ್ನು ಕುರಿತು ಏನೇನೋ ಕಥೆಗಳು ಹರಡಿದುವು!ಅವಳಿಗೆ ಗೊತ್ತಿಲ್ಲದೆಯೇ ಅವಳು ಜನಗಳ ಮಾತಿಗೆ ಆಹಾರವಾದಳು.

ಹೊಸದಾಗಿ ಕೆಲಸಕ್ಕೆ ಸೇರಿದ ಚಿಕ್ಕವರಾದ ಉದ್ಯೋಗಿಗಳಿಗೆ ಮಧ್ಯವಯಸ್ಕಳಾದ ಈ ವ್ಯಕ್ತಿಯ ಪರಿಹಾಸ್ಯಪೂರ್ಣವಾದ ಚಾಪಲ್ಯ ಬಿಸಿ ಬಿಸಿ ವಾರ್ತೆಯಾಗಿತ್ತು. ಪೋನಿಟೈಲ್ ಕಟ್ಟಿ ಲಿಪ್‌ಸ್ಟಿಕ್ ಹಚ್ಚಿಕೊಂಡು ತೆಳ್ಳಗಿನ ನೈಲಾನ್ ಬಟ್ಟೆಯೊಳಗಿನಿಂದ ದೇಹದ ಅಂಗಾಂಗಗಳನ್ನು ಪ್ರದರ್ಶಿಸುತ್ತ ನಡೆಯುವ ಯುವತಿಯರು ವೈಟಿಂಗ್ ರೂಮಿನಲ್ಲಿ ಅವಳನ್ನು ನೋಡಿದ ಕೂಡಲೇ ತಮ್ಮತಮ್ಮೊಳಗೆ ಪಿಸು ಪಿಸು ಮಾತುಗಳನ್ನು ಆಡುತ್ತಿದ್ದರು:

'ಮುದುಕ ಮುದುಕಿಯರ ಒಂದು ಪ್ರೇಮ...' ತಮ್ಮ ವಯಸ್ಸಿಗೆ ಅದೆಷ್ಟೊ ಕಥೆಗಳನ್ನು ಸ್ವಯಂ ಸೃಷ್ಟಿಸಿದ ಆ ಯುವತಿಯರು ಏನೇನೋ ಸೇರಿಸಿ ಹೇಳಿದರು:

ಅಲ್ಲೇ ನನ್ನ ವಾಸ. ಇತ್ತೀಚೆಗೆ ಒಮ್ಮೆ ಅವರನ್ನು ಕನ್ಯಾಕುಮಾರಿಯಲ್ಲಿ ಕಂಡುದಾಗಿ ನನ್ನ ಕಸಿನ್ ಹೇಳಿದ.'

'ಇಷ್ಟು ವಯಸ್ಸಾಗಿದ್ದರೂ ನಾಚಿಕೆಯಿಲ್ವಲ್ಲ!ಅದೇ ನನಗೆ ಆಶ್ಚರ್ಯ.'

ಅವಳಿಗೆ ಇದ್ಯಾವುದೂ ಗೊತ್ತಾಗುತ್ತಿರಲಿಲ್ಲ. ನಿನ್ನೆ ಮೊತ್ತಮೊದಲ ಬಾರಿಗೆ ಅವಳದನ್ನು ಕೇಳಿಸಿಕೊಂಡಿದ್ದಳು. ಕ್ರೂರವಾದ ಒಂದು ವಿರೋಧಾಭಾಸದಂತೆ ಅವಳದನ್ನು ಬಾಲಚಂದ್ರನಿಂದಲೇ ತಿಳಿಯಬೇಕಾಯ್ತು.

ಎಲ್ಲವೂ ಹಳೆಯ ರೀತಿಯಲ್ಲಿಯೇ ಸಂಭವಿಸಿತು.... ಆಫೀಸಿನ ಹಿಂಭಾಗ ಮುಳುಗುವ ಸೂರ್ಯನ ಕೆಂಪಾದ ಕಾಂತಿಯಿಂದ ಮುಳುಗಿತ್ತು. ಮೈದಾನದಿಂದ ಕಾರು ವೇಗವಾಗಿ ಬರುತ್ತಿತ್ತು. ಅಪ್ರತೀಕ್ಷಿತವಾಗಿ ಬಾಲಚಂದ್ರನನ್ನು ನೋಡಿದ್ದು. ರಂಗವೂ ಪಾತ್ರಧಾರಿಗಳೂ ಅದೇ ಹಳಬರಾಗಿದ್ದರು. ಅಭಿನಯಿಸಬೇಕಾದ ಸನ್ನಿವೇಶಗಳು ಮಾತ್ರ ಪರಸ್ಪರ ಬದಲಾಯಿಸಿದ್ದುವು. ಅಷ್ಟೇ.

ತುಂಬಿದ ಕಣ್ಣುಗಳಿಂದ ಆತನದನ್ನು ಹೇಳಿ ಮುಗಿಸಿದ್ದ:

'ನನ್ನ ಕುಟುಂಬಜೀವಿತವನ್ನು ಹಾಳುಮಾಡದಿರು ಶಾರದಾ. ನೀನು ಆಶಿಸಿದಂತೆ ನಾನು ನಿನ್ನಿಂದ ಅಗಲಿ ದೂರಹೋದೆ.ಇನ್ನು ಈ ದಾರಿಯಲ್ಲಾದರೂ ನಾನು ಕ್ಷೇಮವಾಗಿ ಸಾಗುವುದಕ್ಕೆ ಅವಕಾಶ ಕೊಡುವುದಿಲ್ಲವೇ?'

ಕೇಳುತ್ತಿದ್ದಂತೆ ಸ್ತಬ್ಧಳಾದಳು.ನಿರ್ವಿಕಾರಳಾಗಿ ಆಲಿಸಿದಳು.ಪ್ರತಿಯಾಗಿ ಒಂದು ಅಕ್ಷರವನ್ನೂ ಉಚ್ಚರಿಸಲಿಲ್ಲ. ಒಳಗೆಲ್ಲ ಸುಳಿಗಳೆದ್ದು ಗಿರಗಿರನೆ ಸುತ್ತುತ್ತ ಚಂಡಮಾರುತವೆಬ್ಬಿಸಿ ಸಿಡಿಯುತ್ತಿದ್ದುವು. ನೀರಿನ ಅಲೆಗಳು, ನೊರೆಗಳು ಭೋರ್ಗರೆದು ಅಲ್ಲೋಲಕಲ್ಲೋಲಗೊಳ್ಳುತ್ತಿದ್ದುವು. ನೀಳವಾಗಿ ಬೀಳುತ್ತಿದ್ದ ತನ್ನ ನೆರಳುಗಳ ಹಿಂದೆ ಆತ ಬಸವಳಿದು ನಡೆದು ಹೋಗುತ್ತಿದ್ದುದನ್ನು ನೋಡಿ ನಿರ್ನಿಮೇಷಳಾಗಿ ನೋಡುತ್ತ ನಿಂತುಕೊಂಡಳು.

ಎಲ್ಲೂ ಯಾರೂ ಇರಲಿಲ್ಲ. ಇಲ್ಲ. ಹೂಬಿಟ್ಟ ಗುಲ್ ಮೊಹರ್ ಇಲ್ಲ. ಹಳೆಯ ಕಾಲದ ಕಥೆಗಳನ್ನು ನೆನಪಿಸಲು ಯಾರೂ ಇಲ್ಲ. ಶೂನ್ಯವಾದ ಆಕಾಶ ಮಾತ್ರ ವ್ಯಾಪಿಸಿತ್ತು.ಕಾಲ

ಎವೆಮುಚ್ಚದೆ ನೋಡುತ್ತಿತ್ತು. ಅಂದು ಹೂಬಿಟ್ಟ ಗುಲ್ ಮೊಹರ್ ಇದ್ದ ಜಾಗದಲ್ಲಿ ಹೊಸ ಕಟ್ಟಡಗಳನ್ನು ನಿರ್ಮಿಸಲು ತಂದು ಹಾಕಿದ ಕಗ್ಗಲ್ಲ ರಾಶಿಗಳು ಕಾಣುತ್ತಿದ್ದುವು.

ಕಗ್ಗಲ್ಲಿನ ತುಂಡುಗಳು! ತಮ್ಮದೇ ಆದ ಕನಸುಗಳನ್ನು ಹೊತ್ತುಕೊಂಡು ಸುಖಕರವಾದ ಆಹ್ಲಾದತೆಯಿಂದ ಮೈಮರೆತ ಆ ಹೂವುಗಳು ಇವತ್ತು ಈ ಕಗ್ಗಲ್ಲಿನ ರಾಶಿಯ ಅಡಿಯಲ್ಲಿ ಅಮರಿ ಜಜ್ಜಿ ಹೋಗಿರಬಹುದು.

ಜಜ್ಜಿಹೋದ ಮನಸ್ಸಿನೊಂದಿಗೆ ರಾತ್ರಿಯಿಡೀ ಅತ್ತಳು. ಒಂದು ಕ್ಷಣವೂ ಕಣ್ಣುಮುಚ್ಚಲಾಗದೆ ಬಿಕ್ಕಿ ಬಿಕ್ಕಿ ಅತ್ತಳು.ಎಲ್ಲವೂ ನಾಶವಾಗಿತ್ತು. ಅಸ್ತವ್ಯಸ್ತವಾಗಿತ್ತು. ನಿದ್ರೆ ಬಾರದ ರಾತ್ರಿಗಳ ಅಂಧಕಾರದ ಜಾವಗಳಲ್ಲಿ ಗಟ್ಟಿ ನಿರ್ಧಾರವನ್ನು ತೆಗೆದುದಾಯ್ತು. ಬೆಳಗ್ಗೆ ಆಫೀಸಿಗೆ ಹೋದ ತಕ್ಷಣ ತಮ್ಮನಿಗೆ ಫೋನು ಮಾಡಬೇಕು:

ಸಂಜೆ ಹಾಸ್ಟೆಲ್ಲಿಗೆ ಬಾ. ಖಂಡಿತ ಬರಬೇಕು.ಬರಲೇಬೇಕು.

ಆಮೇಲೆ ಅವನಿಗೆ ಹೇಳಬೇಕು:

'ಇಲ್ಲ, ನನಗಿನ್ನು ಸಾಧ್ಯವಿಲ್ಲ. ಆಗುವುದಕ್ಕಿಂತ ಹೆಚ್ಚು ಜವಾಬ್ದಾರಿಗಳನ್ನು ವಹಿಸಿದ್ದೇನೆ. ಮಾಡಬೇಕಾದುದಕ್ಕಿಂತ ಹೆಚ್ಚು ಮಾಡಿದ್ದೇನೆ. ಈಗ ಸಾಕಷ್ಟು ಬಳಲಿದ್ದೇನೆ. ನನಗಿನ್ನು ಕೆಲಸ ಮಾಡಲು ಸಾಧ್ಯವಿಲ್ಲ. ನೀನು ಹೇಳ್ತಿದ್ದೆಯಲ್ಲ, ಅದರಂತೆ ಕೆಲಸಕ್ಕೆ ರಾಜೀನಾಮೆ ಕೊಟ್ಟಾಯ್ತು.ಎಲ್ಲಾದರೂ ಹೋಗೋಣ.ನಾನೀಗ ಸಿದ್ಧಳಾಗಿದ್ದೇನೆ.'

ಟ್ರೈನಿಂಗ್ ಮುಗಿಸಿ ಬಂದಮೇಲೆ ಅವನು ಹಲವು ಸಾರಿ ಹೇಳಿದ್ದ:

'ಯಾಕೆ ನಿನಗೀ ಜುಜುಬಿ ಕೆಲಸ ಇನ್ನು? ಬಿಟ್ಟುಬಿಡಕ್ಕ..ನಿನಗೂ ಆಗುವಷ್ಟು ವರಮಾನ ನನಗೇ ಬರುತ್ತದಲ್ಲ!'

ಜಗತ್ತು ನನಗೆ ಮಾತ್ರ ಅನೀತಿಯನ್ನು ತೋರಿಸಬಹುದು ಎನ್ನುವ ಮೂಲಭೂತವಾದ ಮನೋಭಾವವೋ ಅಥವಾ ಕಪ್ಪುಗಾಜಿನ ಕನ್ನಡಕದೊಳಗಿಂದ ನೋಡಿದ ಪರಿಣಾಮವೋ ಎಂದು ಅಂದು ಭಾವಿಸಿದ್ದೆ.

ಒಬ್ಬ ಐ.ಪಿ.ಎಸ್.ನ ಅಕ್ಕ ಕೇವಲ ಓರ್ವ ಕ್ಲರ್ಕ್ ಆಗಿದ್ದಾಳೆನ್ನುವುದು ಅವನಿಗೆ ಅಪಮಾನದ ವಿಷಯವಾಗಿತ್ತು! ಬಂದಿರುವ ದೊಡ್ಡಮನೆತನದ ವಿವಾಹವಿಚಾರಗಳ ಮಧ್ಯೆ ಅವಿಭಕ್ತಕುಟುಂಬದ ಬಂಧುಜನಗಳ ಮುಂದೆ ಅಕ್ಕನ ಉದ್ಯೋಗ ಅವನಿಗೆ ಜುಜುಬಿಯೆಂದೂ ಚೆನ್ನಾಗಿಲ್ಲವೆಂದೂ ಅವನ ಪ್ರತಿಷ್ಠೆಗೆ ಕುಂದು ಎಂದೂ ಅನಿಸಿರಬಹುದು. ಅಥವಾ ವಿವಾಹವಾಗಲಿರುವ ಬಂಧುಜನಗಳಲ್ಲಿ ಯಾರಾದರೂ ಅದನ್ನು ಪ್ರಸ್ತಾಪಿಸಿರಬಹುದು.

ನಿನಗೆ ಐ.ಪಿ.ಎಸ್ ಹುದ್ದೆಯನ್ನು ದೊರಕಿಸಿ ಕೊಟ್ಟುದು ಈ ಅಕ್ಕನ ಕೆಟ್ಟ ಜುಜುಬಿ ಉದ್ಯೋಗದಿಂದ ಬಂದ ಅಲ್ಪ ಸಂಬಳದಿಂದ ಎನ್ನುವುದನ್ನು ನೀನು ಅರ್ಥಮಾಡುವುದಿಲ್ಲ.

ನಿನ್ನ ದುರಭಿಮಾನದ ಕಳಂಕವನ್ನು ತೊಡೆದು ಹಾಕಲು ಈ ನಿನ್ನ ಉದಾರವಾದ ಉಪದೇಶ! ಆದರೆ ನನಗದು ಅರ್ಥವಾಗುತ್ತದೆ.

ಆದರೆ ಅವಳಿಗೆ ಇನ್ನೊಂದು ಭಯವೂ ಇತ್ತು. ತಮ್ಮನಿಗೆ ಮದುವೆಯಾದ ಬಳಿಕ ಆತ ಸಂಸಾರವಂದಿಗನಾಗಿ ಬಾಳುವಾಗ ತನ್ನ ಉಪಸ್ಥಿತಿ ಅನಪೇಕ್ಷಿತವಾಗುವುದಿಲ್ಲವೇ? ಅವನ ಕುಟುಂಬಸಂಗೀತದೊಳಗೆ ತಾನೊಂದು ಅಪಸ್ವರವಾಗಲಾರೆನೇ? ಯಾವಾಗಾದರೊಮ್ಮೆ ಮಾತ್ರ ಬರುತ್ತಿದ್ದ ತಂಗಿಯ ಪತ್ರಗಳಲ್ಲೂ ಸೂಚ್ಯವಾಗಿ ಕಾಣಿಸುವ ಆ ಸಹತಾಪ ಮತ್ತು ದಯೆಯಲ್ಲಿ ಅದೇ ವಿಕಾರಗಳನ್ನಲ್ಲದೆ ಬೇರೇನನ್ನು ನಿರೀಕ್ಷಿಸಲು ತನಗೆ ಸಾಧ್ಯ?

'ಪಾಪ, ದೊಡ್ಡಕ್ಕ. ಯಾರೂ ಇಲ್ಲ. ಎಲ್ಲೂ ಹೋಗುವುದಕ್ಕಿಲ್ಲ. ಏನಾದರೂ ಹೇಳಿದರೂ ನಿನಗೆ ಅದನ್ನು ಕ್ಷಮಿಸಬಹುದಲ್ಲ..!'

ಭವಿಷ್ಯದ ಅಗೋಚರವಾದ ಭಿತ್ತಿಗಳಾಚೆ ಅದುಮಿದ ಶಬ್ದಗಳಿಂದ ಕೇಳಿಸುವ ಈ ಪುರುಷ ಧ್ವನಿ ತಮ್ಮನದಲ್ಲವೇ..?

ಆದರೆ, ಆ ಭಯವೊಂದೂ ಹೊರಗೆ ತೋರಿಸದೆ ಅವನ ಸೂಚನೆಗಳನ್ನು ಗಂಭೀರವಾಗಿ ತೆಗೆದುಕೊಂಡು ಏನೂ ಯೋಚಿಸದವಳಂತೆ ಹೇಳಿದ್ದು ಮಾತ್ರ:

ಹೇಗೋ ಇಷ್ಟು ಸಮಯ ಆಯ್ತಲ್ಲವೇ? ಬೇರೆ ಯಾವುದೇ ತೊಂದರೆಯಿಲ್ಲವಲ್ಲ. ಮಾಡಲು ಆಗುವುದಿಲ್ಲವೆನಿಸಿದಾಗ ಬಿಟ್ಟರೆ ಆಯ್ತಲ್ಲ!

ಆದರೆ ಈಗ ಮಾತ್ರ, ಅತಂತ್ರ ಸ್ಥಿತಿ. ನೆಲೆಯಿಲ್ಲದ ಸ್ಥಿತಿ.ಇನ್ನು ಮುಕ್ತವಾಗಿ ತಿಳಿಸುವುದೇ ಒಳ್ಳೆಯದು.

'ಇಲ್ಲ, ತಮ್ಮಾ, ಸಾಧ್ಯವಿಲ್ಲ. ನಾನು ಬಳಲಿದ್ದೇನೆ.'

ಆಕ್ಷೇಪಾರ್ಹವಾದ ಅವಹೇಳನ, ಆರೋಪಗಳಿಗಿಂತ ಉಳಿದ ಯಾವುದೂ ಸಹ್ಯ.

ಆದರೆ ಬೆಳಿಗ್ಗೆ ಆಫೀಸಿಗೆ ಹೋಗಬೇಕಾಗಿ ಬರಲಿಲ್ಲ. ಫೋನೂ ಮಾಡಬೇಕಾಗಲಿಲ್ಲ. ಅದಕ್ಕಿಂತ ಮೊದಲು ಅವನೇ ಬಂದ. ತಮ್ಮ ಬಂದ ವಿಚಾರ ತಿಳಿದು ಏಣಿಯ ಮೆಟ್ಟಲುಗಳನ್ನು ಇಳಿಯುತ್ತಿರುವಾಗ ಯೋಚನೆ ಬಂತು:



ದೇವರು ಎಲ್ಲವನ್ನೂ ಮೊದಲೇ ತಿಳಿಯುತ್ತಾನೆ. ಅವನನ್ನು ಮುಂದಾಗಿಯೇ ಕಳುಹಿಸಿದ್ದಾನೆ.

ಆದರೂ ಅವನನ್ನು ನೋಡಿದಾಕ್ಷಣ ಬೆಕ್ಕಸಬೆರಗಾಯ್ತು. ಎಂದಿಲ್ಲದಂತೆ ಉದ್ಯೋಗದ ಸಮವಸ್ತ್ರವನ್ನೇ ಧರಿಸಿ ಬಂದಿದ್ದ.ಕೆಲಸದ ಒತ್ತಡದ ಮಧ್ಯೆ ಧಾವಿಸಿಬಂದಂತೆ. ಮುಖ ಬೆಂಕಿಯ ಜ್ವಾಲೆಯಂತೆ ಕೆಂಪಗೆ ಉರಿಯುತ್ತಿತ್ತು.ಆಯಾಸ ಪರಿಹಾರವಾಗುವ ಮುನ್ನವೇ ಸಿಡಿಲು ಮೊಳಗಿತು.

'ನಿನ್ನನ್ನು ನನ್ನ ಅಕ್ಕನೆಂದು ಹೇಳುವುದಕ್ಕೇ ನಾಚಿಕೆಯಾಗ್ತದೆ. ತಲೆಯೆತ್ತಿ ನಡೆಯಲು ಸಾಧ್ಯವಾಗುತ್ತಿಲ್ಲ. ನಾಚಿಕೆ.. ಮಾನ.. ಮರ್ಯಾದೆ ಇಲ್ಲದೆ..ಥೆ! ನಾನು ನಿನ್ನ ತಮ್ಮನಲ್ಲ. ಇನ್ನುಮುಂದೆ ನಿನ್ನೊಂದಿಗೆ ನನಗೆ ಯಾವ ಸಂಬಂಧವೂ ಇಲ್ಲ. ಆ ಮುದುಕ ಅಸಿಸ್ಟೆಂಟ್ ಸೆಕ್ರೆಟರಿಯ ಇಟ್ಟುಕೊಂಡವಳಾಗಿಯೇ ನೀನು ಇದ್ದುಬಿಡು.'

ನಿರ್ಲಿಪ್ತಳಾಗಿ ನಿಂತು ಕೇಳಿದಳು.ಕಣ್ಣೀರು ಬತ್ತಿ ಹೋಗಿದ್ದುದರಿಂದ ಅಳು ಬರಲಿಲ್ಲ. ಮಾನ. ಮರ್ಯಾದೆ ಇಲ್ಲದವಳಲ್ಲವೇ? ಅದಕ್ಕಾಗಿ ತಲೆ ತಗ್ಗಿಸಲಿಲ್ಲ. ನಿರ್ವಿಕಾರಚಿತ್ತಳಾಗಿ ಎಲ್ಲವನ್ನೂ ಆಲಿಸಿದಳು. ಹೇಳಿ ಮುಗಿಸಿದ ತಕ್ಷಣವೇ ಅತ ಬಿರುಗಾಳಿಯಂತೆ ಹೊರಟುಹೋದ.

ಚಿಕ್ಕಂದಿನಿಂದಲೇ ತಮ್ಮ ಮುಂಗೋಪಿಯಾಗಿದ್ದ. ಒಮ್ಮೆಗೇ ಸಿಡುಕುವ ಸ್ವಭಾವ ಅವನದಾಗಿತ್ತು. ತಾಳ್ಮೆಯೆಂಬುದು ತೀರಾ ಕಡಿಮೆ. ಅಸಹಿಷ್ಣುವಾಗಿದ್ದ. ದುರ್ಬಲನಾಗಿದ್ದ.

ಅಸಿಸ್ಟೆಂಟ್ ಸೆಕ್ರೆಟರಿಯ ಇಟ್ಟುಕೊಂಡವಳು!

ಈ ಮಾತುಗಳನ್ನು ನನ್ನ ಮುಖದತ್ತ ನೋಡಿ ಹೇಳಲುನಿನಗೆ ಹೇಗೆ ಸಾಧ್ಯವಾಯಿತು ತಮ್ಮಾ!

ಕಾಲ ನಿನ್ನನ್ನೂ ಸದೃಢನನ್ನಾಗಿಸಿರಬಹುದು.

ಅವಳ ಮಡಿಲಲ್ಲಿ ಮಲಗಿ ಅವನು ದೊಡ್ಡವನಾದುದು.ಅವಳ ಕೊಟ್ಟ ತುತ್ತನ್ನೇ ತಿನ್ನುತ್ತಿದ್ದುದು. ಅವಳ ಹಾಡು ಕೇಳಿಯೇ ಅವನು ನಿದ್ದೆ ಮಾಡುತ್ತಿದ್ದುದು. ಅವಳೇ ಅವನಿಗೆ ತಾಯಿಯೂ ಅಣ್ಣನೂ ಅಕ್ಕನೂ ಎಲ್ಲವೂ ಆಗಿದ್ದಳು.ಮುದ್ದಿನಿಂದ ಸಾಕಿದಳು.ಯಾವ ನಿರೀಕ್ಷೆಯನ್ನೂ ಇಟ್ಟುಕೊಳ್ಳಲಿಲ್ಲ.

ಬದುಕಿನಿಂದ ಏನನ್ನೂ ನಿರೀಕ್ಷಿಸಬಾರದೆಂಬ ಸತ್ಯವನ್ನೂ ಬಹಳ ಹಿಂದೆಯೇ ಕಲಿತಿದ್ದಳು. ಆದರೆ ಇದು..

ಕ್ರೂರವಾದ ಈ ಆಘಾತ!.. ಇದನ್ನು ಯಾವತ್ತೂ ನಿರೀಕ್ಷಿಸಿರಲಿಲ್ಲ.

ಆಸರೆಗಾಗಿ ಬಂದ ಕ್ಷಣದಲ್ಲಿ.. ಸಾಂತ್ವನದ ಮಾತುಗಳನ್ನು ನಿರೀಕ್ಷಿಸಿದಾಗ..

'ನಿನ್ನೊಂದಿಗೆ ನನಗಿನ್ನು ಯಾವುದೇ ಸಂಬಂಧವಿಲ್ಲ.'

ಎಲ್ಲವೂ ಎಷ್ಟು ಸುಲಭವಾಗಿ ನಡೆಯಿತು! ಕೇವಲ ಜಲರೇಖೆಗಳಂತೆ.. ಕಳೆದ ಕಾಲಘಟ್ಟಗಳ ಕಪಾಟುಗಳಿಗೆ ಬೀಗಮುದ್ರೆ ಜಡಿಯಿತೆಂದರೆ ಅದಷ್ಟು ನಿಸ್ಸಾರವಾದ ಕಾರ್ಯವೇ..?

ಮನಸ್ಸು ರೇಶ್ಮೆಯ ಲಂಗೋಟಿಯನ್ನೂ ಸೊಗಸಾದ ಪಂಚೆಯನ್ನೂ ಉಟ್ಟು ಬಾಲ್ಯಕಾಲದ ಹಚ್ಚಹಸುರಾದ ಕಣಿವೆಗಳತ್ತ ಹೊರಟುಹೋಯ್ತು.ಉಡಿದಾರವನ್ನೂ ಕಾಲ್ಗೆಜ್ಜೆಯನ್ನೂ ಕಿಣಿಕಿಣಿ ಸದ್ದುಗೈಯುತ್ತ ಓಡಿ ಹೋಯ್ತು.ಅಲ್ಲಿ ಧಾರಾಳವಾಗಿ ಹೂಗಳು ಅರಳಿದ್ದುವು.ಆ ಹೂವುಗಳನ್ನು ಕುಯ್ಯಲೆಂದು ನಡೆಯಿತು. 'ಹೂವುಗಳೇ ತುಂಬಿಬನ್ನಿ' ಎಂದು ಕಾತರತೆಯಿಂದ ಕರೆಯಿತು.ಕಾಲಿಗೆ ಮುಳ್ಳು ಚುಚ್ಚಿದರೇನು? ಕೈಗಳಲ್ಲಿ ಗೀರುಗಳಾದರೇನು? ಹಿಂತಿರುಗುವಾಗ ಬಿಂದಿಗೆ ತುಂಬ ಹೂವುಗಳಿದ್ದುವು. ಆ ಹೂವುಗಳಂತೆಯೇ ಅರಳಿದ ಮುಖವಿತ್ತು.

ಆದರೆ ಎಲ್ಲವೂ ಅದೆಷ್ಟು ಬೇಗ ಬಾಡಿ ಮುದುರಿತು! ಪೂಜಾ ಕೋಣೆಯ ಹೊಸ್ತಿಲಲ್ಲಿ ತಂದಿಟ್ಟಾಗ ಅಜ್ಜಿ ಹೇಳಿದಳು:

ಇದೆಲ್ಲಾ ಪೂಜೆಗೆ ಅರ್ಹವಲ್ಲದ ಹೂವುಗಳು ಮಗಳೇ..!

ಒಂದಕ್ಕೂ ಹೂದಾನಿಯಲ್ಲೂ ಜಾಗವಿರಲಿಲ್ಲ. ಅಂಗಳ ಮೂಲೆಯ ತಿಪ್ಪೆಯ ರಾಶಿಯಲ್ಲಿ ಬಿದ್ದು ಅವು ಚೀರಿಟ್ಟುವು.ಆಮೇಲೆ ನಿಧಾನವಾಗಿ ಬಾಡಿ ಕರಿಕಲಾದುವು.

ಪೂಜೆಗೆ ಅರ್ಹವಲ್ಲದ ಹೂವುಗಳು!

ವರ್ಷಾನುವರ್ಷಗಳ ಸಂಕಟವೆಲ್ಲವೂ ಘನೀಭೂತವಾಯ್ತು. ಹೃದಯದಾಳದ ಶಾಂತಚಿತ್ತತೆಯಿಂದ ನಾನೀಗ ಕೇಳುತ್ತಿದ್ದೇನಜ್ಜಿ.. ಯಾವ ಅವಮಾನವೂ ಇಲ್ಲದೆ ಕೇಳುತ್ತಿದ್ದೇನೆ..

ಆದಿನ ಆ ಮಾತುಗಳನ್ನಾಡಿದ್ದು ಸ್ನೇಹಪೂರ್ಣವಾದ ಆ ನಾಲಗೆಯಿಂದಲೇ ಅಲ್ಲವೇ? ಅಥವಾ ಕತ್ತಲೆಯ ಭವಿಷ್ಯವನ್ನು ಕುರಿತಾದ ವಿಧಿಯ ಕರಿನಾಲಗೆಯಿಂದಲೇ?

ಆಕಾಶದ ಅಗಾಧವಾದ ಅಂಧಕಾರದಿಂದ ಒಂದು ಶಾಪವೋ ಎಂಬಂತೆ ಆ ನಾಲಗೆಯಿಂದ ಬಿದ್ದ ಮಾತುಗಳು ಇವತ್ತು ತನ್ನ ಬದುಕಿನಲ್ಲಿ ಅವತರಿಸಿ ಅಸಹನೀಯವಾದ ನೋವಿನಲ್ಲಿ ಬೇಯಿಸುತ್ತವೆ. ಸುಟ್ಟು ಕರಿಕಾಗಿಸುತ್ತವೆ.

'ಪೂಜೆಗೆ ಅರ್ಹವಲ್ಲದ ಹೂವುಗಳು ನಾನೇ ಆಗಿದ್ದೇನಜ್ಜಿ.. ನಾನೇ ಆಗಿದ್ದೇನೆ..!'

ಯಾರಿಗೂ ಬೇಡವಾಗಿ ಯಾವುದಕ್ಕೂ ಯೋಗ್ಯವಲ್ಲದೆ ಇದೋ ಕಿತ್ತು ಎಸೆಯಲ್ಪಟ್ಟಿದ್ದೇನೆ.

ಪೂಜೆಗೂ ಬೇಡ..

ಪೂಜಾರಿಗೂ ಬೇಡ..

ಬದುಕಿನ ಕೊಚ್ಚೆಯಲ್ಲಿ ಬಿದ್ದು ವಿಲಪಿಸುತ್ತೇನೆ ಕರಟಿಹೋಗುತ್ತೇನೆ..





# ಎಲ್.ಬಿ. ಅವರ ಗ್ರಂಥ ಸಂಪಾದನೆಯೂ : ಸಾಮಾಜಿಕ ನ್ಯಾಯಾನುಸಂಧಾನವೂ

**ಮುತ್ತು ಮುಳುಗ**

**ಕ**ನ್ನಡ ನವೋದಯ ಗ್ರಂಥ ಸಂಪಾದನಾ ಕ್ಷೇತ್ರದ ಮೊದಲ ಪಂಕ್ತಿಗೆ ಸೇರುವ ಹೆಸರು ಡಾ. ಎಲ್. ಬಸವರಾಜು ಅವರದು. ಗ್ರಂಥ ಸಂಪಾದನೆ ಎಂದರೆ, ಉಪಲಬ್ಧ ಪ್ರಾಚೀನ ಗ್ರಂಥಗಳನ್ನು ಸಂಗ್ರಹಿಸಿ, ತರುವಾಯ ಮಾಡುವ ಮೂಲಗ್ರಂಥ ಸಂಸ್ಕರಣ ಅಥವಾ ಪರಿಷ್ಕರಣ. ಆಮೇಲೆ ಅಚ್ಚು ಹಾಕಿಸುವುದು. ಇಂಗ್ಲೀಷಿನಲ್ಲಿ ಇದನ್ನು ಖಿಜಿಥಣಣಾಚಿಟ ಛಿಜಿಣಿಬಿಛಿಟ ಎಂದು ಕರೆಯುತ್ತಾರೆ. ಹಿಂದಿನ ಕಾಲದಲ್ಲಿ ಯಾವುದೇ ಗ್ರಂಥಗಳನ್ನು ಕೈಯಿಂದಲೇ ಬರೆದಿಡಬೇಕಾಗಿತ್ತು. ಈಗಿನಂತೆ ಪ್ರಿಂಟಿಂಗ್ ಪ್ರೆಸ್‌ಗಳಿರಲಿಲ್ಲ. ದೊರೆತ ಪ್ರಾಚೀನ ಕೃತಿಗಳನ್ನು ಹಾಗೇ ಅಚ್ಚು ಹಾಕಿಸಿದರೆ ಅದು ಸಂಸ್ಕರಣ ಎನ್ನಿಸಿಕೊಳ್ಳಲಾರದು. ಅದರಲ್ಲಿ ಅನೇಕ ತಪ್ಪುಗಳು ಉಳಿಯುವ ಸಾಧ್ಯತೆ ಇರುತ್ತದೆ. ಪ್ರತಿಕಾರ ಮೂಲಕೃತಿಯ ಪ್ರತಿ ಎತ್ತುವಾಗ ಹಾಗೂ ಅವು ತ್ರುಟಿತವಾದಾಗ ಅವುಗಳನ್ನು ಮತ್ತೆ ಪ್ರತಿ ಮಾಡುವಲ್ಲಿ ತಪ್ಪುಗಳು ಸಂಭವಿಸುವುದುಂಟು. ಅಂಥವುಗಳನ್ನು ತಿದ್ದಿ ಮೂಲ ಪಾಠವನ್ನು ಗ್ರಹಿಸಿ ಮುದ್ರಿಸಬೇಕು. ಇದು ಬಹು ಸವಾಲಿನ ಕೆಲಸ. ಪ್ರವಾಹದ ವಿರುದ್ಧ ಈಜಿ ಹೋಗುವ ಹತ್ತು ಮೀನಿನ ಸಾಹಸ. ಉಪಲಬ್ಧವಿರುವ ಗ್ರಂಥರಾಶಿಗಳ ಪಾಠಾಂತರಗಳನ್ನು ಶೋಧಿಸಿ ಯಾವುದು ಮೂಲ ಪಾಠ ಇರಬಹುದೆಂಬುದನ್ನು ಗ್ರಹಿಸಿ ನಿರ್ಣಯಿಸುವುದು ಸಿ.ಐ.ಡಿ. ಹುಡುಕಾಟದಂತೆ. ಡಾ.ಎಲ್. ಬಿ. ಅವರು ಇದರಲ್ಲಿ ನಿಷ್ಣಾತರು, ನಿರಂತರ ಕಾರ್ಯಶೀಲರು. ಅದನ್ನು ತಮ್ಮ ಜೀವಮಾನದುದ್ದಕ್ಕೂ ವ್ರತದಂತೆ ನಡೆಸಿಕೊಂಡು

ಬಂದವರು ಅವರು. ಅವರಿಗೆ ಗ್ರಂಥ ಸಂಪಾದನೆ ಎಂಬುದು ಒಂದು ಕರ್ಮಯೋಗ; ಸಾಗರತಳದ ಮುತ್ತುಗಳನ್ನಾಯ್ದು ತರುವ ಮುತ್ತು ಮುಳುಗ (Pearl Piver)ನ ಸಾಹಸದಂತೆ. ಆರಂಭದಲ್ಲಿ 'ಶಿವದಾಸ ಗೀತಾಂಜಲಿ' ಯೆಂಬ ಕೃತಿಯನ್ನು ಸಂಪಾದಿಸಿ, ವಿಮರ್ಶಿಸಿ, ವಿಶ್ಲೇಷಿಸಿ ಡಾಕ್ಟರೇಟ್ ಪಡೆದರು. ತದನಂತರ ಬಸವಣ್ಣನ, ಅಲ್ಲಮನ, ಅಕ್ಕನ ಹಾಗೂ ಸರ್ವಜ್ಞನ ವಚನಗಳನ್ನು ಸಂಪಾದಿಸಿದರು; 'ಶಬ್ದಮಣಿ ದರ್ಪಣ' ಹಾಗೂ 'ಕನ್ನಡ ಛಂದಸ್ಸು ಸಂಪುಟ' ಗಳನ್ನು ಪರಿಷ್ಕರಿಸಿ ಪ್ರಕಟಿಸಿದರು. ಶಿವಗಣ ಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆಯೊಟ್ಟಿಗೆ ಉಳಿದ ಮೂರುಜನ ಶೂನ್ಯ ಸಂಪಾದನಾ ಕಾರರ ಸಂಪಾದನೆಗಳನ್ನೂ ಸಂಸ್ಕರಿಸಿ ಪ್ರಕಟಿಸಿದರು.

ಆದರೆ ಹೀಗೆ ಸಂಪಾದಿಸಿದ ಕೃತಿಗಳು ಕೇವಲ ಲೈಬ್ರರಿಗಳ ಕಪಾಟುಗಳನ್ನು ತುಂಬುತ್ತಿದ್ದವು, ಅಷ್ಟೇ. ಆಗ ಹಳಗನ್ನಡ ಕೃತಿಗಳು ಓದುಗರಿಗೆ ಪೆಡಸಾಗಿವೆ ಎಂಬುದು ಇವರ ಗ್ರಹಿಕೆಗೆ ಬಂದಿತು. ಸಾಮಾನ್ಯ ಓದುಗರಿಗೆ, ಶಾಲಾ ಮಕ್ಕಳು, ಕಾಲೇಜು ವಿದ್ಯಾರ್ಥಿಗಳು ಇವರಿಗೆಲ್ಲಾ ತಲುಪುವಂತೆ ಮಾಡಬೇಕೆಂಬ ಹಂಬಲ ಹುಟ್ಟಿತು. ಆಂಗ್ಲ ಭಾಷಾ ಕೃತಿಗಳನ್ನು ಬ್ರಿಟನ್ನಿನಲ್ಲಿ ಅವರು ಹೇಗೆ ಕಲಿಸುತ್ತಾರೆಂಬ ಮಾದರಿ ಇವರ ಕಣ್ಣು ಮುಂದೆ ಇತ್ತೋ ಏನೋ? ಗೊತ್ತಿಲ್ಲ. ಅಲ್ಲಿ ಮಿಲ್ಟನ್, ಷೇಕ್ಸ್‌ಪಿಯರ್ ಮುಂತಾದವರ ಕೃತಿಗಳನ್ನು ಮೂರು ಹಂತದಲ್ಲಿ ಬೋಧಿಸುವ ಕಲಿಕಾವಿಧಾನ ಜಾರಿಯಲ್ಲಿದೆ. ಮೊದಲಿಗೆ ಶಾಲಾ ಮಕ್ಕಳಿಗೆ ಆ ಪ್ರಾಚೀನ ಕಾವ್ಯ ನಾಟಕಗಳ ಚಿತ್ರ ಸಹಿತ ಕಥಾ ಸಾರವನ್ನು ಹೇಳುವುದು; ಎರಡನೆಯದಾಗಿ ಕಾಲೇಜು ವಿದ್ಯಾರ್ಥಿಗಳಿಗೆ ಹಳೇ ಇಂಗ್ಲೀಷಿನ ಸಂಯುಕ್ತ ಶೈಲಿಯನ್ನು ಬಿಡಿಸಿ ಪೂರ್ಣ ಪಠ್ಯವನ್ನು ಯಥಾವತ್ ಸಂಪಾದಿಸಿ ಕೊಡುವುದು; ಮೂರನೆಯದಾಗಿ ಸಂಶೋಧಕರಿಗೆ, ವಿದ್ವಾಂಸರಿಗೆ ನೆರವಾಗುವಂತೆ ಪಾಠ ಸಂಸ್ಕರಣ ಮಾಡಿ ವ್ಯಾಖ್ಯಾನ, ಅಡಿ ಟಿಪ್ಪಣಿ ಇತ್ಯಾದಿ ನೀಡಿ ಸಂಪಾದಿಸುವುದು. ಇಂಗ್ಲೀಷ್ ಭಾಷಾ ಕಲಿಕೆಯ ಮಾದರಿಯಲ್ಲಿ ಎಲ್.ಬಿ. ಅವರು ಪ್ರಜ್ಞಾ ಪೂರ್ವಕವಾಗಿಯೇ ಈ ಮೂರೂ ಹಂತದಲ್ಲಿ ಹಳಗನ್ನಡ ಕೃತಿಗಳನ್ನು ಸಂಪಾದಿಸ ತೊಡಗಿದರು. ಮೊದಲನೆಯದಾಗಿ ಪಂಪ ರನ್ನರ ಹಳಗನ್ನಡ ಕೃತಿಗಳನ್ನು, ಶಾಲಾ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕಥಾಸಾರವನ್ನು ಕೊಟ್ಟರು. ಪಂಪನ ಸಮಸ್ತಭಾರತ ಕಥಾಮೃತ, ಆದಿಪುರಾಣ ಕಥಾಮೃತ ಈ ಮಾದರಿಯವು.

ಎರಡನೆಯದಾಗಿ ಇದೇ ಕೃತಿಗಳನ್ನು ಸರಳ ಪಂಪ ಭಾರತ, ಸರಳ ಆದಿ ಪುರಾಣ, ಸರಳ ರನ್ನನ ಗದಾಯುದ್ಧ ಮುಂತಾದ ಕೃತಿಗಳನ್ನು ವ್ಯಾಖ್ಯಾನ ಸಹಿತ ಸಂಧಿ, ಸಮಾಸಗಳನ್ನು ಬಿಡಿಸಿ ಪ್ರಕಟಿಸಿದರು. ಇವು ಕಾಲೇಜು ಅಧ್ಯಾಪಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಹಾಗೂ ಸಾಮಾನ್ಯ ಓದುಗರಿಗೂ ಉಪಯುಕ್ತವಾದುವು. ಮೂರನೆಯದಾಗಿ ಸಂಶೋಧಕ, ವಿದ್ವಾಂಸರಿಗೆ ಅನುಕೂಲವಾಗುವಂತೆ ಇದೇ ಕೃತಿಗಳಿಗೆ ಅರಿಕೆ, ಮುನ್ನುಡಿ, ಅಡಿ ಟಿಪ್ಪಣಿ, ಪಾಠಾಂತರ ಹಾಗೂ ವ್ಯಾಖ್ಯಾನಗಳನ್ನು ನೀಡಿ ಸಂಪಾದಿಸಿದರು. ಹೀಗೆ ಮಾಡಿದುದರಿಂದ ಪಂಪನ ಆದಿಪುರಾಣ (2007, 600+18 ಪುಟಗಳು) ಮತ್ತು ಪಂಪ ಭಾರತ (2009, 550+36 ಪುಟಗಳು) ಇವು ಪಾತ್ರದಲ್ಲಿ ಎಂತೋ ಅಂತೆಯೆ ಗಾತ್ರದಲ್ಲೂ ಭವ್ಯವಾಗಿ ಕನ್ನಡಿಗರ ಎರಡು ಕಣ್ಣುಗಳಂತೆ

ಕಂಗೊಳಿಸಿದವು. ಇವುಗಳ ಪ್ರಕಾಶಕರು ಮುದ್ರುಶ್ರೀ ಗ್ರಂಥ ಮಾಲೆಯ ಡಾ. ಎಂ. ಭೈರೇಗೌಡರು. ಇವರು ಲೇಖಕರಿಗೆ ಸಹಕರಿಸಿ ಮಾಡಿದ ಕೆಲಸ ದಾಖಲಾರ್ಹವೆನಿಸಿದೆ.

### ಹುಸಿನುಸುಳು

ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಹುಸಿ ನುಸುಳು ಹೀಗೇ ಮೆಳೆ ಹೊಕ್ಕಂತೆ ಹಲವಾರು ಎಡರು ತೊಡರುಗಳಿವೆ. ಕೆಲವೊಮ್ಮೆ ಕೆಲವು ಗ್ರಂಥಗಳು ಮತೀಯ ದುರಭಿಮಾನಕ್ಕೆ ತುತ್ತಾಗಿ ಪ್ರಕ್ಷೇಪಕ್ಕೆ ಒಳಗಾಗಿರುವುದುಂಟು. ಉದಾಹರಣೆಗೆ, ಶೂನ್ಯ ಸಂಪಾದನೆಯಲ್ಲಿ ಸಿದ್ಧರಾಮನಿಗೆ ಸಂಬಂಧಿಸಿದ ವಚನಗಳು. ಡಾ. ಎಲ್. ಬಸವರಾಜು ಅವರು ಇಂಥ ವಚನಗಳನ್ನು ಪರಿಷ್ಕರಿಸಿ ಅಲ್ಲಿರುವ ಮತೀಯ 'ಹುಸಿ ನುಸುಳ'ನ್ನು ತೆಗೆದು ಹಾಕಿ 'ಸೊನ್ನಲಾಪುರದ ಸಿದ್ಧರಾಮನ ನಿಜ ವಚನಗಳು' (2007) ಎಂಬ ಕೃತಿಯನ್ನು ಹೊರತಂದರು. ಇದರಲ್ಲಿ ಅವರು ಮಂಡಿಸಿದ ನಿಜ ವಿಚಾರವೆಂದರೆ ಸಿದ್ಧರಾಮ ವಚನಕಾರರಿಗಿಂತ ಒಂದು ಶತಮಾನ ಆಮೇಲೆ ಬಂದ ಒಬ್ಬ ಸಂತನು ಎಂಬುದಕ್ಕೆ ಶಾಸನಾಧಾರವಿದೆ ಎಂಬುದು; ಮತ್ತು ಎರಡನೆಯದಾಗಿ ಇದೇ ಆಧಾರದಲ್ಲಿ ಸಿದ್ಧರಾಮ 12ನೆಯ ಶತಮಾನದಲ್ಲಿದ್ದ ಬಸವಣ್ಣನವರನ್ನಾಗಲೀ, ಅವರ ಸೋದರಳಿಯ ಚೆನ್ನ ಬಸವಣ್ಣನವರನ್ನಾಗಲೀ ಸಂಧಿಸಿದ್ದು ಮತ್ತು ಚೆನ್ನಬಸವಣ್ಣನಿಂದ ಈತ ಲಿಂಗದೀಕ್ಷೆ ಪಡೆದನೆಂಬುದು (1168) ಶುದ್ಧ ಪ್ರಕ್ಷೇಪವಲ್ಲವೆ? ಎಂದು ಸಾಧಿಸಿದ್ದು. ಯಾಕೆಂದರೆ ಮಾನವರ ಸರಾಸರಿ ಆಯುರ್ಮಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದರೂ ಇದು ಶುದ್ಧ ಅಸಂಬದ್ಧ ಎಂಬುದು ಎದ್ದು ಕಾಣುತ್ತದೆ. ಒಟ್ಟಾರೆ ಶೂನ್ಯ ಸಂಪಾದನೆಯಲ್ಲಿ ಸಿದ್ಧರಾಮನ ಲಿಂಗದೀಕ್ಷಾ ಪ್ರಕರಣವು ಶೂನ್ಯ ಸಂಪಾದನಕಾರರು ಮಾಡಿದ 'ಹುಸಿ ನುಸುಳು' (ಪ್ರಕ್ಷೇಪ) ಎಂಬುದನ್ನು ಸಾದರಪಡಿಸಿದರು. ಆದರೂ ಅವರ ಈ ಮಾತನ್ನು ಯಾವ ಲಿಂಗಾಯತ ಬಾಂಧವರಾಗಲಿ ಮತ್ತು ಯಾವ ಸಂಶೋಧನಕಾರರಾಗಲಿ ಇದುವರೆಗೆ ಆಲಿಸಿದಂತೆ ಕಾಣುವುದಿಲ್ಲ. ಇಂಥ ಮತೀಯ ಅಪ್ರಿಯ ಸತ್ಯಗಳನ್ನು ಹೇಳಲು ಹೋದ ಅನೇಕ ಜನ ಖಂಡಿತವಾದಿ ಲೋಕ ವಿರೋಧಿ ಎಂಬಂತೆ ವಿದ್ವಾಂಸರು ಗುಂಡಿಗೆ ಬಲಿಯಾದದ್ದುಂಟು. ಉದಾಹರಣೆಗೆ ಇತ್ತೀಚೆಗೆ ನಡೆದ ಪ್ರೊ. ಎಂ.ಎಂ. ಕಲಬುರ್ಗಿಯವರ ಹತ್ಯೆ.

### ಸಾಂಸ್ಕೃತಿಕ ಒತ್ತುವರಿ

ಪ್ರೊ. ಎಲ್.ಬಿ.ಯವರು ಕೇವಲ ಸ್ಥಾವರ ಕುಳಿತ ಗ್ರಂಥ ಸಂಪಾದಕರಾಗಿರಲಿಲ್ಲ. ಕನ್ನಡ ನೆಲ,ಜಲ,ಭಾಷೆ,ಸಂಸ್ಕೃತಿಗಳ ನಿಟ್ಟಿನಲ್ಲಿ ಆಗುತ್ತಿದ್ದ ಒತ್ತುವರಿಯನ್ನು ಅಕ್ರಮಗಳನ್ನು ಸಕ್ರಮ ಮಾಡಿಕೊಳ್ಳುತ್ತಿದ್ದವರನ್ನು ಸಹಿಸದೆ ಕಾವಲು ನಾಯಿಯಂತೆ ಕಟ್ಟೆಚ್ಚರದಿಂದಿದ್ದರು. ಉದಾಹರಣೆಗೆ: ಪುಣೆಯ ಭಂಡಾರಕರ್ ಇನ್‌ಸ್ಟಿಟ್ಯೂಟ್‌ನ ವ್ಯಾಸ ಮಹಾಭಾರತದ ಪ್ರಧಾನ ಸಂಪಾದಕರಾಗಿದ್ದ ಪ್ರೊ. ವಿ.ಎಸ್. ಸೂಕ್ತಂಕರರ ಹೆಸರು ವಿದ್ವತ್ ವಲಯದಲ್ಲಿ ಚಿರಪರಿಚಿತ. ಅವರ ನೇತೃತ್ವದಲ್ಲಿ ಸಂಪಾದಿಸಿರುವ ಸಂಸ್ಕೃತ ಮಹಾಭಾರತ ಗ್ರಂಥ ಸಂಪಾದನೆಯ ದಿಸೆಯಲ್ಲಿ ಒಂದು ಮೈಲಿಗಲ್ಲು. ಆದರೂ ಅವರು ಒಂದು ಅಪವಾದದಿಂದ

ಮುಕ್ತರಾಗಲು ಸಾಧ್ಯ ವಾಗಲಿಲ್ಲವೆಂದು ಎಲ್.ಬಿ.ಅವರು ತಮ್ಮ ಸರಳ ಪಂಪಭಾರತದ ಅರಿಕೆಯಲ್ಲಿ ಆಪಾದಿಸುತ್ತಾರೆ. 'ಸೂಕ್ತಂಕರರು ವ್ಯಾಸಭಾರತವನ್ನು ಪರಿಷ್ಕರಿಸುವ ಸಂದರ್ಭದಲ್ಲಿ ನನ್ನಯ್ಯನ ತೆಲುಗು ಭಾರತವನ್ನು ಗಮನಿಸಿದರಾದರೂ ಪಂಪಭಾರತವನ್ನು (ಆಶ್ರಯದಾತ ಅರಿಕೇಸರಿಯನ್ನು ಪುರಾಣ ಪುರುಷ ಅರ್ಜುನನೊಂದಿಗೆ ಸಮೀಕರಿಸಿರುವ ಕಾರಣ) ಕೈ ಬಿಟ್ಟಿರುವುದೊಂದು ದುರದೃಷ್ಟಕರ ಸಂಗತಿ' ಎಂದು ಹೇಳಿದ ಇವರು ಕನ್ನಡಿಗರ ಆತ್ಮ ಪ್ರತ್ಯಯದ 'ಪ್ರತೀಕ'ವಾಗಿದ್ದಾರೆ. ಈ ಮಾತು ರನ್ನನ ಗದಾಯುದ್ಧಕ್ಕೂ ಅನ್ವಯವಾಗುತ್ತದೆ ಎಂದು ಹೇಳುವ ಮೂಲಕ 'ಸೂಕ್ತಂಕರರು ಕನ್ನಡ ಭಾರತಗಳ ಈ ಸೂಕ್ಷ್ಮತೆಗಳನ್ನು ನೋಡದಿರುವುದು ಆ ವಿದ್ವಾಂಸರ ಮಹಾಭಾರತ ಪರಿಷ್ಕರಣೆಯ ಕೊರತೆ' ಎಂಬ ನಿರ್ಣಯಕ್ಕೆ ಬರುತ್ತಾರೆ. ನಿಜ. ಭಾರತವೆಂದರೆ ಹಲವು ಪ್ರಾದೇಶಿಕ ಭಾಷಾವಲಯಗಳ ಒಕ್ಕೂಟ ತಾನೆ? ಈ ಹಿನ್ನೆಲೆಯಲ್ಲಿ ನೋಡಿದರೆ ಉತ್ತರದವರ ಸಾಂಸ್ಕೃತಿಕ ಒತ್ತುವರಿಯ ಪಕ್ಷಪಾತ ದೃಷ್ಟಿ ಆಕ್ಷೇಪಾರ್ಹವೇ. ಆದರೆ ಇದನ್ನು ನಾವು ತಮಿಳರಂತೆ ಅವರ ಮುಖಕ್ಕೆ ಹೇಳುವ ಗಟ್ಟಿ ಧೈರ್ಯ ಮಾಡುವುದಿಲ್ಲ. ಈ ಕೀಳರಿಮೆ ಕಾರಣವಾಗಿಯೇ ಇವತ್ತಿಗೂ ಕನ್ನಡಿಗರು ತಮ್ಮ ನೆಲ, ಜಲ, ಭಾಷಾ ಸಂಪನ್ಮೂಲಗಳ ಒತ್ತುವರಿಗೆ ಒಳಗಾಗುತ್ತಿದ್ದಾರೆ. ಪಕ್ಷ ರಾಜಕಾರಣಿಗಳಿಗಂತೂ ಈ ಬಗ್ಗೆ ಇಚ್ಛಾಶಕ್ತಿ ಎಚ್ಚರವೇ ಇಲ್ಲ. ಉದಾಹರಣೆಗೆ, ಕನ್ನಡವನ್ನು ಶಾಸ್ತ್ರೀಯ ಭಾಷೆ ಎಂದು ಒಪ್ಪಿಕೊಂಡ ಮೇಲೂ ತಮಿಳರೊಬ್ಬರು ಮದ್ರಾಸ್ ಹೈಕೋರ್ಟ್‌ನಲ್ಲಿ ಹೂಡಿದ ದಾವೆಯಿಂದಾಗಿ ಆರ್ಥಿಕ ಅನುದಾನಕ್ಕೆ ಅಡ್ಡಿಯಾಗಿ ಅದು ಬರುವ ದಾರಿಯಲ್ಲೇ ನಿಲುಗಡೆಯಾಗಿದೆ. ಇನ್ನು ನಾವು ಕಾವೇರಿಯನ್ನು ಹರಿಯಬಿಟ್ಟು, ಮಹದಾಯಿ ನೀರಿಗಾಗಿ ಹೋರಾಡುವ ಪರಿಸ್ಥಿತಿ ಒದಗಿಬಂದಿದೆ.

ಪ್ರಸ್ತುತ ಗೋದಾವರಿ–ಕೃಷ್ಣಾ ನದೀ ಜೋಡಣೆಯಿಂದ ಕರ್ನಾಟಕಕ್ಕೆ ಬರಬಹುದಾದ 283 ಟಿಎಂಸಿ ನೀರಿಗೂ ಸಂಚಕಾರ ಬಂದಿದೆ ಎಂದು ಈಚೆಗೆ ನಮ್ಮ ನೀರಾವರಿ ಸಚಿವ ಬಿ.ಎಸ್. ಪಾಟೀಲರು ಹೇಳುತ್ತಿದ್ದಾರೆ. ನಮ್ಮ ಆದಿಕವಿ ಪಂಪನ ಅರಿಕೇಸರಿ'



ಇತ್ತ ಕೈ ಅಲ್ಲದೆ ಒಡ್ಡಿದ ಕೈ ಅಲ್ಲ'. ಅವರೆ ನಾವೀಗ ಪ್ರತಿಯೊಂದಕ್ಕೂ ಉತ್ತರದವರ ಮರ್ಜಿಗೆ ಕಾದು ನಿಲ್ಲಬೇಕಾದ ಪ್ರಸಂಗ ಬಂದಿದೆ. ಇಂಥ ಪಕ್ಷಪಾತವನ್ನು ಕಂಡು ಕೆಂಡ ಮಂಡಲವಾಗಿ ಪ್ರತಿರೋಧಿಸಿದವರು ಪ್ರೊ. ಎಲ್. ಬಸವರಾಜು ಅವರು.

**ಯಾರಪರ?**

ಪ್ರೊ. ಎಲ್.ಬಿ. ಅವರು ಹಳಗನ್ನಡ ಗ್ರಂಥ ಪರಿಷ್ಕರಣೆಯಲ್ಲಿ ಎಷ್ಟು ನಿಷ್ಣಾತರೋ ಅಷ್ಟೇ ನಿಷ್ಣಾತರಾಗಿದ್ದರು ಗ್ರಂಥಾನುವಾದ ಹಾಗೂ ಗ್ರಂಥ ಸಂಗ್ರಹ ನಿಟ್ಟಿನಲ್ಲೂ ಸಹ. ಇವರ ಮೇಲೆ ಬುದ್ಧ ಬೆಳಕು ಧಾರಾಳ ಪ್ರಭಾವ ಬೀರಿದೆ. ಅವನ ಬೆಳಕಿನ ಹಾದಿಯಲ್ಲಿ ನಡೆದ ಈ ವಿದ್ವಾಂಸರು ಅಶ್ವಘೋಷ ಮಹಾಕವಿಯ ಸಂಸ್ಕೃತ ಮಹಾಕಾವ್ಯಗಳಾದ ಬುದ್ಧ ಚರಿತೆ ಮತ್ತು ಸೌಂದರನಂದ ಎಂಬ ಕಾವ್ಯಗಳನ್ನು ಅನುವಾದಿಸಿದ್ದಾರೆ. ಹೀಗೆ ಬುದ್ಧ ಸಂದೇಶಕ್ಕೆ ಅವರು ಪ್ರಜ್ಞಾಪೂರ್ವಕವಾಗಿ ಮಾರು ಹೋದವರು. ಇದಕ್ಕೆ ಪೂರಕವಾಗಿ ಅವರು ಚಿತ್ರದುರ್ಗದಲ್ಲಿ ನಡೆದ 75ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣವನ್ನು ಪರಾಮರ್ಶಿಸಿ ನೋಡಬಹುದು. ಶತಶತಮಾನಗಳ ಕಾಲ ಇಲ್ಲಿ ನಡೆದು ಬಂದ ದಲಿತರೆನಿಸಕೊಂಡವರ ಮೇಲಿನ ದಬ್ಬಾಳಿಕೆ ದೌರ್ಜನ್ಯಕ್ಕೆ ಇತಿಮಿತಿ ಎಂಬುದಿರಲಿಲ್ಲ. ಈ ಕೆಳವರ್ಗದ ಜನ ಹಿಂದೆ ಬೌದ್ಧರಾಗಿದ್ದರೆಂಬುದಕ್ಕೆ 'ದೇವನಾಂಪ್ರಿಯ' ಅಶೋಕನ ರಾಯಚೂರು (ಮಸ್ಕಿ), ಕೊಪ್ಪಳ, ಚಿತ್ರದುರ್ಗ (ಬ್ರಹ್ಮಗಿರಿ) ಜಿಲ್ಲೆಗಳಲ್ಲಿ ಕಂಡು ಬರುವ ಶಾಸನಗಳು ಆಧಾರವಾಗಿವೆ. ಅಲ್ಲದೆ ಕವಿರಾಜ ಮಾರ್ಗದಲ್ಲಿ ಉಕ್ತವಾಗಿರುವ ಚತ್ತಾಣ, ಬೆದಂಡೆ ಎಂಬ ಕಾವ್ಯ ಪ್ರಕಾರಗಳು ದಲಿತರ ಕಂಠೋಕ್ತ ಬೀದಿ ಪದ-ಹಾಡುಗಬ್ಬಗಳಾಗಿರಬಹುದೆಂದು ಹೇಳುವ ಮೂಲಕವೂ ಇಂದಿನ ದಲಿತ ಪೂರ್ವಜರು ಹಿಂದೆ ಬೌದ್ಧರೇ ಆಗಿದ್ದರಾದರೂ ಬ್ರಾಹ್ಮಣ ಮತಾಚ್ಛಾದಿತ ಕಾರ್ಮೋಡದಲ್ಲಿ ಅವರು ಸಿಲುಕಿ ಹಿಂದೂಗಳೇ ಎಂಬ ನಂಬಿಕೆ ಪ್ರಬಲವಾಗಿದೆಯೆಂದೂ ಊಹಿಸುತ್ತಾರೆ. ಮತ್ತು ಅಧ್ಯಕ್ಷ ಭಾಷಣದ ಮುಕ್ತಾಯದಲ್ಲಿ ರಾಜ್ಯ ಸರ್ಕಾರ ಇನ್ನಾವರೂ ಶಿಶುವಿಹಾರ ಮೊದಲುಗೊಂಡು ಪ್ರೌಢಶಿಕ್ಷಣದವರೆಗೆ ಈ ದಲಿತ ಮಕ್ಕಳಿಗೆ ಕಡ್ಡಾಯ ಉಚಿತ ಶಿಕ್ಷಣ ನೀಡಬೇಕೆಂದೂ ಒತ್ತಾಯಿಸುತ್ತಾರೆ. (ಜನವರಿ 29, 2015) ಇದರಿಂದ ಎಲ್.ಬಿ.ಯವರು ಯಾರ ಪರ ಎಂಬುದು ನಿಚ್ಚಳವಾಗುತ್ತದೆ.

ಬಸವರಾಜು ಅವರ ಪ್ರಾಜ್ಞ ಸಂಶೋಧನೆಗೆ ಪೂರಕವಾಗಿ ಇನ್ನೊಂದು ಸಂಗತಿಯನ್ನು ಇಲ್ಲಿ ಉಲ್ಲೇಖಿಸಬಹುದು. ದಖನ್ ಪ್ರಸ್ಥಭೂಮಿಯ ಅದೂ ತಮಿಳುನಾಡಿನ ಕೆಳವರ್ಗದ ಜನ, ಇವತ್ತು ನಾವು ಯಾರನ್ನು ದಲಿತರೆಂದು ಕರೆಯುತ್ತೇವೆಯೋ ಅವರೆಲ್ಲಾ ಅಶೋಕನ ಕಾಲಕ್ಕೂ ಮತ್ತು ಆ ಮೇಲಿನ ಕ್ರಿ.ಶ.ಸು 6-7ನೆಯ ಶತಮಾನದವರೆಗೂ ಬೌದ್ಧರೇ ಆಗಿದ್ದರೆಂಬುದನ್ನು 'ತಮಿಳು ಬೌದ್ಧ ದಲಿತ ಹೋರಾಟಗಾರ' ಅಯೋತಿದಾಸ್ (1845-1914) ಎಂಬುವರ ಸಂಶೋಧನೆ ದೃಢಪಡಿಸುತ್ತದೆ. ಅಂಬೇಡ್ಕರ್ ಬೌದ್ಧ ಧರ್ಮ ಸ್ವೀಕರಿಸುವುದಕ್ಕೂ ಅರ್ಧ ಶತಮಾನ ಮೊದಲೇ 'ಪರಯಾರರು' ನಡೆಸಿದ ಸಖ್ಯ ಬೌದ್ಧ ಚಳವಳಿಯ ನೇತೃತ್ವ ವಹಿಸಿದ್ದರು ಪಂಡಿತ್ ಅಯೋತಿದಾಸ್. ಅವರು ಸಾಮಾಜಿಕ

ಮತ್ತು ಸಾಹಿತ್ಯಿಕ ವಲಯದಲ್ಲಿ ಮಾಡಿದ ಅದ್ಭುತವಾದ ಕೆಲಸ ಮುಖ್ಯವಾಹಿನಿಯ ಚರಿತ್ರಕಾರರ ದೃಷ್ಟಿಯನ್ನು ಸೆಳೆಯಲಿಲ್ಲ.

ಒಟ್ಟಾರೆಯಾಗಿ ಕ್ರಿ.ಪೂ. ಅಶೋಕನ ಕಾಲದಿಂದ ಕ್ರಿ.ಶ. ಶಂಕರಾಚಾರ್ಯರ ಶಿಷ್ಯರು ಇಲ್ಲಿಂದ ಬೌದ್ಧರನ್ನು ಮೂಲೋತ್ಪಾಟನ ಮಾಡುವವರೆಗೆ ಇಲ್ಲಿದ್ದ ಕೆಳವರ್ಗದ ಜನ ಬೌದ್ಧ ಧರ್ಮೀಯರಾಗಿದ್ದರೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಹಾಗಾದರೆ ಈ ಎಲ್ಲ ಕೆಳವರ್ಗದವರೂ ದೇಶಬಿಟ್ಟು ಹೋದರೇ? ಎಂಬ ಪ್ರಶ್ನೆಗೆ ಉತ್ತರ ಸರಳ: ಇಲ್ಲಿ ಉಳಿದವರು ಹಿಂದೂಧರ್ಮದ ತೆಕ್ಕೆಗೆ ಬಂದಿರುವ ಸಾಧ್ಯತೆ ಇದೆ. ಏಕೆಂದರೆ ಯಾವತ್ತೂ ಮತ ಧರ್ಮಗಳಿಗಿಂತ ಬದುಕು ದೊಡ್ಡದಲ್ಲವೇ? ಈ ಮಾತಿಗೆ ಇನ್ನೊಂದು ಪೂರಕ ಸಂಶೋಧನೆ ನಮ್ಮ ವಿಚಾರವಾದಿ ಪ್ರೊ. ಕೆ.ಎಸ್. ಭಗವಾನ್ ಅವರದು. ಇವರ ಪ್ರಕಾರ "ಭಾರತೀಯ ಬೇಸಾಯಗಾರರೆಲ್ಲ ಬೌದ್ಧರು" (2014) ಎಂಬುದಾಗಿದೆ. ಈ ಬಗ್ಗೆ ಇನ್ನೂ ತಳಸ್ಪರ್ಶಿ ಅಧ್ಯಯನ ನಡೆಯಬೇಕು. ಮೇಲಿನ ಈ ಕೆಲವು ಸಾಕ್ಷ್ಯಾಧಾರಗಳಿಂದ ತಿಳಿದು ಬರುವುದೇನೆಂದರೆ ಡಾ. ಎಲ್.ಬಿ. ಅವರ ಸಂಶೋಧನಾ ಹಾಗೂ ಪರಿಷ್ಕರಣವು ಯಾವತ್ತೂ ನೆಲಕ್ಕೆ ನೆಟ್ಟ ಗರುಡನ ದೃಷ್ಟಿಯಂತೆ ತಳಸಮುದಾಯದತ್ತಲೇ ನೋಡುತ್ತದೆ ಎಂಬುದು.

## ತಲೆಮರೆಸಿಕೊಂಡ ಪಂಪ

ಪಂಪನ ಆದಿ ಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಕೃತಿಗಳು ಕನ್ನಡ ಹೃದಯ ಶಿವ ಬಡಿವ ಎರಡು ಡಿಂಡಿಮಗಳ ಧ್ವನಿಯಂತಿವೆ. ಈ ಎರಡೂ ಕಾವ್ಯಗಳನ್ನು ಸಂಪಾದಿಸಿ, ಪರಿಷ್ಕರಿಸಿ, ವಿಮರ್ಶಿಸಿ, ವಿಶ್ಲೇಷಿಸಿ ಸಹೃದಯ ಓದುಗರಿಗೆ ಉಣಬಡಿಸುವ ಕ್ರಿಯೆಯಲ್ಲಿ ತಮ್ಮನ್ನು ಅನವರತ ತೊಡಗಿಸಿಕೊಂಡ ಡಾ. ಎಲ್. ಬಸವರಾಜು ಅವರು ಕರ್ಣ ಮತ್ತು ಬಾಹುಬಲಿ ಪಾತ್ರಗಳಲ್ಲಿ ಸ್ವತಃ ಪಂಪ ಹೇಗೆ ತಲೆಮರಿಸಿಕೊಂಡಿದ್ದಾನೆ ಎಂಬುದನ್ನು, ಚಾವುಂಡರಾಯನ ಶಿಲ್ಪಿ ಶ್ರವಣಬೆಳಗೊಳದ ಆ ದೊಡ್ಡ ಬಂಡೆಗಲ್ಲಿನಲ್ಲಿ ಹೇಗೆ ಗೊಮ್ಮಟ ಮೂರ್ತಿ ತಲೆಮರೆಸಿಕೊಂಡಿದ್ದನೆಂಬುದನ್ನು ಕಡೆದು ಕೆತ್ತಿ ತೋರಿಸಿರುವನೋ, ಹಾಗೆ ಇವರು ಆ ಪಾತ್ರಗಳನ್ನು ಕಂಡು–ನೋಡಿ ಅನಾವರಣಗೊಳಿಸುತ್ತಾರೆ. (ಪಂಪ: ಒಂದು ಅಧ್ಯಯನ, ಬೆಂ.ವಿ.ವಿ. 1974) ಬಾಹುಬಲಿಯು ಸಾಮ್ರಾಜ್ಯ ಶಾಹಿ ಚಕ್ರವರ್ತಿ ಭರತನ ಎದುರು ಬಂಡೆ ಬೆಟ್ಟವಾಗಿ, ಅವನ ದೌರ್ಜನ್ಯದ ಎದುರು ಆತ್ಮಗೌರವಕ್ಕಾಗಿ, ಅವನ ಸೋದರ ಪ್ರೇಮದ ಎದುರು ಮಂಜಿನ ಬೆಟ್ಟವಾಗಿ ಕರಗಿ ಹೋದವನು.

'ಬಿದಿವಸದಿಂದೆ ಪುಟ್ಟುವುದು, ಪುಟ್ಟಿಸುವಂಬಿದಿ, ಪುಟ್ಟಿದಂದು ಇವಂಗಿದು ಬಿಯಂ, ಒಳ್ಪು ಇವಂಗಿದು, ವಿನೋದಂಇವಂಗಿದು, ಸಾವಪಾಂಗು ಇವಂಗಿದು, ಪಡೆಮಾತು ಇವಂಗಿದು, ಪರಾಕ್ರಮಂ ಎಂಬುದನೆಲ್ಲ ಮಾಳ್ಕೆಯಿಂ ಬಿದಿಸಮಕಟ್ಟಿ ಕೊಟ್ಟೊಡೆ ಎಡೆಯೊಳ್ (ನಡುವೆ) ಕಿಡಿಸಲ್ ಕುಡಿಸಲ್ ಸಮರ್ಥರಾರ್?(ವಿ.ವಿ. 12–182) ಕರ್ಣ ಮುಖದ ಈ ಮಾತು ಪಂಪ ತನ್ನ ಕಾವ್ಯಕ್ಕೆ ತಾನೇ ಬರೆದ ಸಂದೇಶ. ರಣರಂಗದಲ್ಲಿ ನಿಂತ ಕರ್ಣನಿಂದ ಬಂದ ಗೀತೋಪದೇಶ! ಭಗವದ್ಗೀತೆಯ ಎದುರು ನಿಂತ ಮನುಜ ಗೀತೆ.

ಆದುದರಿಂದ ಕರ್ಣನ ಪಾತ್ರಕ್ಕೆ ಸೂರೆ ಹೋದ ಕವಿ ಪಂಪ 'ಕರ್ಣರಸಾಯನಮಲ್ತೆ ಭಾರತಂ?' ಎಂದು ಉದ್ಗರಿಸಿದ. ಕುಲಹೀನನೆಂದು ಕರೆಸಿಕೊಂಡವನ ಬಾಯಲ್ಲಿ ಮಾನೋನ್ನತ ಮಾತು. ಹೀಗೆ ಬಾಹುಬಲಿ ಮತ್ತು ಕರ್ಣ ಪಾತ್ರದಲ್ಲಿ ಪಂಪ ತಲೆಮರೆಸಿಕೊಂಡು ಮಾತಾಡುತ್ತಿದ್ದಾನೆನ್ನುವ ಎಲ್.ಬಿ. ಅವರ ಪರಾಮರ್ಶೆ ಪಂಪನ ಮೆಸೇಜನ್ನು ಸರಿಯಾಗಿಯೇ ಗ್ರಹಿಸಿದೆ.

## ರಿಯಲ್ ಎಸ್ಟೇಟ್ ಪ್ರವೃತ್ತಿ

ರನ್ನನ ಗದಾಯುದ್ಧ ಕಾವ್ಯವನ್ನು ವಿಮರ್ಶಿಸುತ್ತಾ ಡಾ. ಎಲ್.ಬಿ.ಯವರು, ದುರ್ಯೋಧನನು ಸಾಮ್ರಾಜ್ಯ ಶಾಹಿ ಧೋರಣೆಯುಳ್ಳವನಾದರೆ, ಪಾಂಡವರಾದರೊ ರಾಷ್ಟ್ರೀಯ ಪ್ರಜ್ಞೆಯುಳ್ಳವರು. ಕೌರವನು ಸಹ ಒಂದು ರಾಷ್ಟ್ರದ ಅಖಂಡತೆಯನ್ನು ರಕ್ಷಿಸಬಲ್ಲೆನೆಂಬುದೇನೂ ತಿರಸ್ಕಾರಾರ್ಹವಲ್ಲ. ಆದರೆ, ಯೆಹೂದ್ಯರಿಗೊಂದು ನೆಲೆಬೇಡವೇ? ಎಂದು ಮಧ್ಯಪ್ರಾಚ್ಯದ ಇಸ್ರೇಲ್ ಮತ್ತು ಪ್ಯಾಲೆಸ್ತೇನ್ ದೇಶಗಳ ನಡುವಿನ ಕದನ ಕಿತ್ತಾಟಗಳನ್ನು ತಂದು ಪುರಾಣ ಕಾಲದ ಪಾಂಡವ ಕೌರವ ದಾಯಾದಿ ನಡುವಿನ ಕದನ ಕಿತ್ತಾಟಗಳೊಂದಿಗೆ ಧ್ವನಿಯುಕ್ತವಾಗಿ ಸಮೀಕರಿಸಿ ನೋಡುತ್ತಾರೆ. ಎಲ್.ಬಿ. ಅವರ ಲೋಕದೃಷ್ಟಿ ಹೀಗೆ ಕಾಲ-ದೇಶಗಳನ್ನು ಮೀರಿ ಜಾಗತಿಕ ವಿಶ್ವದ ಆಗುಹೋಗುಗಳನ್ನು ಮನವರಿಕೆ ಮಾಡುತ್ತದೆ. (ನೋಡಿ. ರನ್ನನ ಸರಳ ಗದಾಯುದ್ಧ ಪುಟ, 142. ಮುದ್ದುಶ್ರೀ ಗ್ರಂಥ ಮಾಲೆ) ಅಜ್ಜ ಭೀಷ್ಮನ ಎದುರು ಆ ಕೌರವ ಭೂಪ ಹೇಳುವುದೇನು? 'ಈ ಭೂಮಂಡಲ ಆ ಪಾಂಡವರದಾಗ ಬೇಕು, ಇಲ್ಲ ಈ ಕೌರವ (ಶ್ರೇಷ್ಠ) ದುರ್ಯೋಧನನದಾಗ ಬೇಕು! ಹೀಗೆನ್ನುವ ದುರ್ಯೋಧನ ಒಬ್ಬ ಹಿರಣ್ಯಾಕ್ಷ, ಭೂಗಳ್ಳರ ಪ್ರಪಿತಾಮಹ' ಎಂದು ಆ ಪಾತ್ರದ ಬಗ್ಗೆ ಎಲ್.ಬಿ. ಅವರು ಷರಾ ಬರೆದಿರುವುದು ಇವತ್ತಿನ ನಮ್ಮ ಕಾರ್ಪೊರೇಟ್ ಕಂಪನೀ ಭೂಗಳ್ಳರು ಮಾಡುವ ದುರ್ವ್ಯವಹಾರ ಪಾತಕಗಳನ್ನೇ ಧ್ವನಿಸುತ್ತದೆಯಲ್ಲವೆ?' ಎನ್ನುತ್ತಾರೆ.

## ವಣಿಕಬುದ್ಧಿ



ಎಲ್.ಬಿ. ಅವರು ಗದಾಯುದ್ಧದಲ್ಲಿ ಬರುವ ಮರುಳ್ಗಳ ಪ್ರಸಂಗವನ್ನು ಕುರಿತು ವ್ಯಾಖ್ಯಾನಿಸುವುದನ್ನು ಗಮನಿಸಿದರೆ ಇವರ ಆರ್ಥಿಕ ಸಾಮಾಜಿಕ ನಿಲುವು ಯಾರ ಪರ ಎಂಬುದು ಗೋಚರವಾಗುತ್ತದೆ.

ಆ ಪ್ರಕಾರ ಕೆಲವು ಲೋಭಿ ಮರುಳುಗಳು ಹೆಣದ ಬಣಬೆಯ

ಬಳಿ ಕುಳಿತು ತಾವೂ ತಿನ್ನದೆ ಪರರಿಗೂ ಇಕ್ಕದೆ (ಬಿಡದೆ) ಮೀನಾ ಮೇಷಾ ಎಣಿಸುತ್ತಿದ್ದವಂತೆ. ಇವುಗಳನ್ನು ಎಲ್.ಬಿ. ಅವರು ವೈಶ್ಯ ಮರುಗಳುಗಳು ಎಂದೆನ್ನುತ್ತಾರೆ. ಇವು ರಣರಂಗದ ನಡುವೆ ಹೆಣದ ಮಾಂಸವನ್ನು ಮಾರಾಟ ಮಾಡುತ್ತಿದ್ದವು ಎಂದು ವ್ಯಾಖ್ಯಾನಿಸುತ್ತಾರೆ. ಇಲ್ಲಿ ರನ್ನನ ಸ್ವವಿಮರ್ಶೆ ಅನನ್ಯವೆಂಬಂತಿದೆ. ಎಂದರೆ ಜಾತಿಯಲ್ಲಿ ತಾನೂ ಕೂಡ ವೈಶ್ಯನಾಗಿದ್ದ ರನ್ನ ಮರುಳ್ಗಳ ಈ ಪ್ರಸಂಗದಲ್ಲಿ ವೈಶ್ಯ ಸಮುದಾಯದ ಲೋಭಿಬುದ್ಧಿ (ಕಂಜೂಸ್)ಯನ್ನೇ ವಿಡಂಬಿಸಿದ್ದಾನೆನ್ನುವರು. ತಾನೂ ಅನುಭವಿಸದೆ ಪರರಿಗೂ ಬಿಟ್ಟು ಕೊಡದೆ ಸಂಪತ್ತನ್ನು ಕೂಡಿಟ್ಟುಕೊಂಡು ಮತ್ತಷ್ಟು ಸಂಪಾದಿಸಲು ತೊಡಗಿದ್ದ ಈ ವ್ಯಾಪಾರಿ ಜನಾಂಗವನ್ನು ಒಳಗಿನಿಂದ ನೋಡಿದ್ದ ರನ್ನ ಅವರನ್ನು ಪಿಶಾಚಿಗಳಿಗೂ ಮತ್ತು ಆ ನಿಷ್ಪ್ರಯೋಜಕ ಹಣದ ರಾಶಿಯನ್ನು ಕೊಳೆಯುತ್ತಿರುವ ಹೆಣದ ರಾಶಿಗೂ ಹೋಲಿಸುವ ಅಂತರಾರ್ಥವನ್ನು ಇಟ್ಟುಕೊಂಡಿದ್ದನಾಗಿರಬಹುದು (ಅದೇ ಪುಟ – 106) ಎಂದು ವ್ಯಾಖ್ಯಾನಿಸುತ್ತಾರೆ. ಒಟ್ಟಾರೆ ಬಂಡವಾಳಶಾಹಿ ವಿಡಂಬನೆ.

### ಕುಲ–ಜಾತಿ ಪ್ರಶ್ನೆ

ಎಲ್.ಬಿ. ಅವರದು ಸೂಕ್ಷ್ಮ ಸಂವೇದನಾಶೀಲ ಮನಸ್ಸು. ಗದಾಯುದ್ಧದಲ್ಲಿ ಅಶ್ವತ್ಥಾಮನ ಲಕ್ಷ್ಮೀ ವಿಡಂಬನೆ, ಐಶ್ವರ್ಯ ವಿಡಂಬನೆ, ರಾಜನಿಂದೆ ಮುಂತಾದ ಪ್ರಸಂಗಗಳನ್ನು ಕೈಗೆತ್ತಿಕೊಳ್ಳುವ ಅವರು ಇಲ್ಲಿ ಕುಲಹೀನರೆಂದರೆ ಹೀನ ಜಾತಿಯವರಾಗಿರಬಹುದು ಅಥವಾ ಶೂದ್ರಾತಿ ಶೂದ್ರ ದಲಿತ ವರ್ಗದವರಿರಬಹುದೆಂಬ ಅರ್ಥವೂ ಬರುತ್ತದೆಂದು ಹೇಳುವ ಮೂಲಕ ಪಂಪ ರನ್ನ ಮುಂತಾದ ಕವಿಗಳು ಎಷ್ಟೇ ಅಹಿಂಸೆಯನ್ನು ಕುರಿತು ಮಾತಾಡಿದರೂ ಜಾತಿಯ ಮಾತಾಡಿ ದೀನ ದಲಿತರಿಗೆ ಅತ್ಯಂತ ಹಿಂಸೆಯನ್ನು ಮಾಡಿದ್ದಾರೆ (ಅದೇ ಪು–227) ಎಂದು ಆ ಕವಿಗಳನ್ನೂ ಟೀಕಿಸದೆ ಬಿಡುವುದಿಲ್ಲ. ಇವರು ಯಾರ ಪರ ಎಂಬುದನ್ನು ಇನ್ನೂ ಸರಿಯಾಗಿ ತಿಳಿಯಬೇಕಾದರೆ 1969ರಲ್ಲಿಯೇ ಅವರು ಸಂಪಾದಿಸಿ ಪ್ರಕಟಿಸಿರುವ 'ಅಲ್ಲಮನ ವಚನಗಳು' ಕೃತಿಗೆ ಬರಬೇಕು. ಇದಕ್ಕೆ ಅವರು ಬರೆದಿರುವ ಪೀಠಿಕೆ ಮೌಲಿಕವಾದುದಾಗಿದೆ. ಭಾರತೀಯ ಧರ್ಮ ಚರಿತ್ರೆಯಲ್ಲಿ ಅಲ್ಲಮನಂತವರು ಹಲವರಿಲ್ಲ. ಅವನ ಜೀವನ ವೃತ್ತಾಂತವನ್ನು ಗಮನಿಸುತ್ತಾ ಹೋದರೆ, ಅವನ ಧಾತು–ಧೋರಣೆಯು ಇತರೇತರ ವಚನಕಾರರಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಎಂದರೆ ಎಲ್ಲ ಸಾಧುಸಂತರ ಜೋಗಿ ಜಂಗಮರ ಅಂತರಾಳದ ಅಭೀಪ್ಸೆಯಂತೆ ಅಲ್ಲಮನದೂ ದುಃಖಾರ್ತರ ಪರವಾದ, ಕಟ್ಟ ಕಡೆಯವರನ್ನೂ ತಕ್ಕೈಸಿ ಬರಸೆಳೆವ ಪ್ರೀತಿಯೇ ಅದಾಗಿದೆ. ಅಂದು ಅಲ್ಲಮ ಕೂಗಿದ ಕೂಗು ಉಳ್ಳವರ ಗುಡಿ ಗೋಪುರಗಳನ್ನು ನಡುಗಿಸಿ, ಅವರಿಗೆ ಆಸನ ಕಂಪನವನ್ನುಂಟು ಮಾಡುವುದಾಗಿತ್ತು. ಆ ಚಾರಣಸಿದ್ಧ ಅಲ್ಲಮ ಸಾರಿದ್ದು ವಿಶ್ವ ಕುಟುಂಬಿಗಳಾಗಿಯೆಂದು. ಆದರೂ ಉಳ್ಳವರೆನಿಸಿಕೊಂಡವರು ನಿಧಿಕಾಯುವ ಸರ್ಪಗಳಂತೆ, ಕಾಂಚನವೆಂಬ ನಾಯನೆಚ್ಚಿ ಏಳುಸುತ್ತಿನ ಕೋಟೆಯಲ್ಲಿ ಬದುಕುತ್ತಿದ್ದಾರೆ. ಅವನ ವಾಣಿಗೆ ಬಧಿರರಾಗಿ; ಭ್ರಷ್ಟರು ಮುಗ್ಗರಿಸಿ ಪಾಪಕೂಪಕ್ಕೆ ಬೋರಲು ಬೀಳುತ್ತಲೇ ಇದ್ದಾರೆ; ಆ ಬಿದ್ದವರು ಇನ್ನೂ ಮೇಲೇಳಲಾರದೆ ತಡವರಿಸುತ್ತಿರುವಾಗಲೇ, ಆ ಹುಸುಕಿನ ಪಾಪಕೂಪಕ್ಕೆ ಎಚ್ಚರವಿಲ್ಲದೆ ಉಳಿದವರೂ

ಕುರಿಗಳಂತೆ ಅವರ ಮೇಲೆ ಮುಗಿಬೀಳುತ್ತಿದ್ದಾರೆ.' ಈ ಹೃದಯ ವಿದ್ರಾವಕ ದೃಶ್ಯವನ್ನು ಕಂಡು ಅಲ್ಲಮನು ಬೆಂಕಿಯಾಗಿ ಜ್ಞಾನಿಗಳೆನಿಸಿಕೊಂಡವರ ಕಾಲಿಗೆ ಕೆಂಡದ ಕೊಂಡವಾದನು; ದಲಿತರೆನಿಸಿಕೊಂಡವರ ಕೈಗೆ ಉರಿಯುವ ಪಂಜಾದನು. ಇಂಥ ಭಕ್ತಿ ಲಂಪಟರ ಭಕ್ತಿ ಕೇವಲ ಕುಯುಕ್ತಿ ಎಂದೂ, ಅವರ ವೇದ-ಶಾಸ್ತ್ರ-ಪುರಾಣ-ತರ್ಕ ಎಲ್ಲವೂ ತೋರುಂಬ ಲಾಭವೆಂದೂ ಹಿಯ್ಯಾಳಿಸಿ ಅವರಿಗೆ ಗುಹೇಶ್ವರನೆಂಬುದು ಮೀರಿದ ಘನ' ಎಂದನವನು. ಮಾನವ ಪ್ರಗತಿಗೆ ಮಾರಕವಾಗಿ ಮೇಲಿಂದ ಮೇಲೆ ಬೆಳೆಯು ಬಿಟ್ಟು ಬಂದ ಮತೀಯತೆಯನ್ನು ಅಲ್ಲಮ ಖಂಡಿಸಿದನು. ಹೀಗೆ ಬರೆವ ಬಸವರಾಜು ಅವರಿಗೆ ಗ್ರಂಥ ಸಂಪಾದನೆಯೆಂಬುದು ಒಂದು ನೆಪ ಮಾತ್ರವಾಗಿತ್ತು - ಅವರ ಸಾಮಾಜಿಕ ನ್ಯಾಯಾನುಸಂಧಾನಕ್ಕೆ.

## ಪ್ರತಿಮಾ ನಿರ್ಮಾಣ

'ಅಲ್ಲಮನು ಮೈಮೇಲೆ ಬಂದಾಗ ಕಾಮಲತೆಯ ಕನವರಿಕೆಗಳೂ' ಎಂಬಂತೆ ಅಲ್ಲಮನ ಸುಮಾರು ಎಂಭತ್ತು ವಚನಗಳನ್ನು ಆಯ್ದುಕೊಂಡು ಪ್ರತಿರೂಪಗಳನ್ನು ಸೃಷ್ಟಿಸಿದರು. ಹಾಗೇ ಸುಮಾರು 275 ಸ್ವತಂತ್ರ ವಚನಗಳನ್ನೂ ರಚಿಸಿದರು. ಆದರೂ ಅವರ ದೃಷ್ಟಿ ಇದ್ದಕ್ಕಿದ್ದಂತೆ ರೂಪಾಂತರ ಗೊಂಡದ್ದೇನಲ್ಲ. ಬಸವ, ಅಲ್ಲಮ, ಅಕ್ಕ, ಸಿದ್ಧರಾಮನ ವಚನ ಸಾಗರದಲ್ಲಿ ಕಣ್ಣುಮುಚ್ಚಿಕೊಂಡು ಈಜು ಬಿದ್ದವರು; ಕಲ್ಯಾಣದ ಚಿತ್ರವನ್ನು ಕಣ್ಣು ತುಂಬಿಕೊಂಡು ವಿಹರಿಸುತ್ತಿದ್ದವರು ಇತ್ತ ಎಚ್ಚರಗೊಂಡು ಕಣ್ಣು ತೆರೆದು ನೋಡಿದರೆ 1980ರ ದಶಕದ ರೈತ, ದಲಿತ, ಬಂಡಾಯ ಚಳುವಳಿಗಳ ಕಾವೇರುತ್ತಿತ್ತು; ಬಹಿರಂಗದಲ್ಲಿ ಸಾವು ನೋವಿನ ಬದುಕು ಹಾಗೇ ಬಿದ್ದಿತ್ತು.

ಇದನ್ನು ಕಂಡು ಪರಿಭಾವಿಸಿದ ಅವರಿಗೆ ಅಲ್ಲಮನು ಮೈಮೇಲೆ ಬಂದಂತಾಯಿತು. ತಮ್ಮ ಇದುವರೆಗಿನ ಸಂಶೋಧನೆ, ಪರಿಷ್ಕರಣೆ ಯಾಕೋ ಸಾಲದೆನಿಸಿತು. ಆಗ ಸಮಾಜಿಕರೊಂದಿಗೆ ವಚನಕಾರರಂತೆ ನೇರ ಸಂವಾದಕ್ಕಿಳಿಯಬೇಕೆನಿಸಿತು. ಅದಕ್ಕೆ ಅವರ ನೆರವಿಗೆ ಬಂದದ್ದು ವಚನ ಮಾರ್ಗವೇ. ಈ ಪ್ರೇರಣೆ ಕಾರಣವಾಗಿ ಕವಿತೆ ಬರೆಯಲು ರೂಪಾಂತರ ಗೊಂಡರು. ಆಗ ಅಲ್ಲಮನು ಮೈಮೇಲೆ ಬಂದಾಗ ಕಾಮಾಲತೆಯ ಕನವರಿಗೆಗಳು ಹಾಗೂ ರೂಪಾಂತರ, ಜಾಲಾರಿ ಮತ್ತು ಡೊಂಕು ಬಾಲದ ನಾಯಕರು ಎಂಬ ಮೂರು ಕವಿತಾ ಸಂಗ್ರಹಗಳು ಹೊರಬಂದವು. ಡಾ. ಕೆ.ವೈ. ನಾರಾಯಣ ಸ್ವಾಮಿಯವರು ಸ್ಪಂದಿಸಿರುವಂತೆ 'ಡಾ. ಎಲ್. ಬಸವರಾಜು ಅವರ ಎಲ್ಲಾ ಕವಿತೆಗಳಲ್ಲಿ ಶರತ್ತು



ರಹಿತವಾದ ಜೀವನ ಪ್ರೀತಿ ಅಂತರ ಜಲದಂತೆ ಪ್ರವಹಿಸುತ್ತಿದೆ. ಮನುಷ್ಯತ್ವದ ನೆಲೆಗಳಿಗೆ ಭಗ್ನತೆಯನ್ನುಂಟು ಮಾಡುತ್ತಿರುವ ಜಾತಿ-ಅಧಿಕಾರ-ಜ್ಞಾನ ವ್ಯವಸ್ಥೆಗಳನ್ನು ತೀವ್ರ ವಿಮರ್ಶೆಗೆ ಒಳಗುಮಾಡುತ್ತಿರುವ, ತರಾಟೆಗೆ ತೆಗೆದುಕೊಳ್ಳುತ್ತಿರುವ ಧೋರಣೆಯೇ ಈ ಬರಹಗಳಲ್ಲಿ ಸ್ಥಾಯಿಯಾಗಿದೆ. 'ನಾಡೋಜ' ಪ್ರಶಸ್ತಿಗೆ ಆಯ್ಕೆ ಮಾಡಿದುದಕ್ಕೆ ಪ್ರತಿಕ್ರಿಯಿಸುತ್ತ ಎಲ್.ಬಿ. ಅವರು 'ಪಂಪನೊಬ್ಬನೇ ನಾಡೋಜ, ನಾವು ಅವನ ಸಿಬ್ಬಂದಿ' ಮಾತ್ರ ಎಂದದ್ದು ಅವರ ವಿನಯನಂತಿಕೆಯನ್ನು ತೋರಿಸುತ್ತದೆಯಲ್ಲದೆ, ಲಾಭ-ಲೋಭಕ್ಕೆ ಆಶಿಸುವ ಲೇಖಕರಿಗೆ ಮಾರ್ಮಿಕ ಏಟೂ ಆಗಿದೆ.

## ಶಿಷ್ಯವತ್ಸಲರು

ವಿದ್ಯಾವಿನಯಪಕ್ಷಪಾತಿಗಳೂ, ಶಿಷ್ಯವತ್ಸಲರೂ, ತಾಯ ಅಂತಃಕರಣವುಳ್ಳವರೂ ಆದ ಎಲ್.ಬಿ.ಅವರು ತಮ್ಮ ಅನೇಕ ಕೃತಿಗಳಿಗೆ ತಮಗಿಂತ ಕಿರಿಯ ವಿದ್ವಾಂಸರಿಂದ ಮುನ್ನುಡಿ, ಹಿನ್ನುಡಿ ಬರೆಯಿಸಿಕೊಂಡು, ಆ ಬರೆದವರಿಗೊಂದು ಗೌರವ ದೊರೆಯುವಂತೆ ಮಾಡಿರುವುದು ನನಗೆ ಅಚ್ಚರಿ ಹುಟ್ಟಿಸುತ್ತದೆ. ಆ ಸಾಲಿನಲ್ಲಿ ಸಿ. ನಾಗಣ್ಣ, ಸಿ.ಪಿ. ಸಿದ್ಧಾಶ್ರಮ, ನೀಲಗಿರಿ ತಳವಾರ್, ಜಿ.ಪಿ. ಬಸವರಾಜ್, ಬಿದರಹಳ್ಳಿ ನರಸಿಂಹಮೂರ್ತಿ, ಕೆ.ವೈ. ನಾರಾಯಣಸ್ವಾಮಿ, ಶಿವರಾಮಯ್ಯ, ಎಂ. ಭೈರೇಗೌಡ ಮುಂತಾದವರು ನಿಲ್ಲುತ್ತಾರೆ. ಪ್ರಾಚೀನ ಕಾವ್ಯ ಸಂಪಾದನೆಯನ್ನು ಕೈಗೆತ್ತಿಕೊಂಡ ಎಲ್.ಬಿ. ಯವರು ಒಂದು ವಿದ್ಯಾಸಂಸ್ಥೆ ಮಾಡಲಾಗದ ಕೆಲಸವನ್ನು ದಣಿವು ಮರೆವು ಆಲಸ್ಯಗಳಿಗೆ ಎಡೆಕೊಡದೆ ಅರ್ಧಶತಮಾನಕ್ಕೂ ದೀರ್ಘಾವಧಿ ಕರ್ಮಯೋಗಿಯಂತೆ ನಿರ್ವಹಿಸಿಕೊಂಡು ಬಂದವರು.

'ಎದೆಗೆ ಬಿದ್ದ ಅಕ್ಷರ' ದಿಂದ ಧರೆಗೆ ದೊಡ್ಡವರೆಂಬಂತೆ ಬೆಳೆದು ನಿಂತಿರುವ ದೇವನೂರ ಮಹಾದೇವರ 'ಕುಸುಮ ಬಾಲೆ'ಯನ್ನು 'ಲಯಾಕಾರ ವಿನ್ಯಾಸ'ದಲ್ಲಿ ಕಡೆದು ಅವರ ಕೈಗಿತ್ತ ಸಹೃದಯ ಚೇತನ ಎಲ್.ಬಿ. ಅವರದು, ಹೀಗೇ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ ಮಹಾಕಾವ್ಯ'ವನ್ನು 'ಲಯಾಕಾರ ವಿನ್ಯಾಸ' ದಲ್ಲಿ ಕಡೆದು ಕೊಡಬಾರದಾಗಿತ್ತೆ? ಎಂದು ಆಗಾಗ ನನಗೆ ನಾನೇ ಕೇಳಿಕೊಳ್ಳುತ್ತಿದ್ದೇನೆ-ಅವರನ್ನು ನನ್ನಲ್ಲಿಗೆ ಆವಾಹಿಸಿಕೊಂಡು! ಅವರು ತೋರಿದ ಬೆಳಕಿನ ಹಾದಿಯಲ್ಲಿ ನಡೆದರೆ ನಮ್ಮ ಸೌಭಾಗ್ಯವೇ ಸರಿ. ಗ್ರಂಥ ಸಂಪಾದನೆಯೆಂಬ ಸಪ್ತ ಸಾಗರದ ಸುಪ್ತಾಂತರಾಳಕ್ಕಿಳಿದು 'ಮುತ್ತು ಮುಳಗ' ನಂತೆ ಅಲ್ಲಿಂದ ನಿಜದ ಪಾಠಗಳೆಂಬ ಮುತ್ತುರತ್ನದ ಹೊರೆಯ ಗಂಟಿಕ್ಕಿ ತಂದು ಪಥ್ಯ ಪರಿಷ್ಕರಣೆ ಮಾಡಿದ್ದು ಎಲ್. ಬಸವರಾಜು ಅವರ ಹೆಗ್ಗಳಿಕೆ. ಆ ನೀರ ಯಾತ್ರೆ ಇಲ್ಲಿಗೆ ಸಾಕು ಎನಿಸಿದಾಗ ಸಲ್ಲೇಖನ ಯತಿಯಂತೆ ಅನ್ನಾಹಾರ ವರ್ಜಿಸಿ ಭೌತಿಕ ದೇಹತ್ಯಾಗ ಮಾಡಿದರಾದರೂ ಎಷ್ಟೋ ಜನ ನಮ್ಮಂಥ ಶಿಷ್ಯ ಚೇತನಗಳಲ್ಲಿ ಅವರು ಉಸಿರಾಡುತ್ತಿದ್ದಾರೆ-ಎಂಬಲ್ಲಿಗೆ ನಮಿಸಿ ವಿರಮಿಸುತ್ತಿದ್ದೇನೆ.





# ಜಿ. ಎಸ್ ಎಸ್. ಹಣತೆ ಹಿಡಿದ ಚಾರಣಿಗ

ಡಾ.ನಟರಾಜ ಬೂದಾಳು

ನಂಗಲಿಯವರನ್ನು ಪರಿಚಯಿಸುವುದು ತುಸು ಕಷ್ಟದ ಕೆಲಸ. ಯಾರನ್ನಾದರೂ ಪರಿಚಯಿಸಬೇಕಾದರೆ ಅವರನ್ನು ನಿಲ್ಲಿಸಿ ಪರಿಚಯಿಸಬೇಕು. ನಂಗಲಿಯವರು ಸದಾ ನಾ ನಿಲ್ಲುವಳಲ್ಲ - ಎನ್ನುತ್ತ ಸದಾ ನಡೆಯುತ್ತಲೇ ಇರುವ ಜಂಗಮ ಪ್ರವೃತ್ತಿಯವರು. ಅವರ ಪುಸ್ತಕಗಳೂ ಹಾಗೇ ಒಂಥರಾ ಪ್ರವಾಸ ಕಥನಗಳ ರೀತಿ. ನಂಗಲಿ ಮಾತಿನ ಮನುಷ್ಯ. ಮಾತಾಡಿದ್ದನ್ನು ಬರೆದಿದ್ದಾರೆ. ಬರೆದದ್ದನ್ನು ಮಾತಾಡುತ್ತಿಲ್ಲ. ಅವರ ಪಿಎಚ್‌ಡಿ ನೆಪದ ಅಧ್ಯಯನದ ಪುಸ್ತಕ 'ನೆಲಮುಟ್ಟುವ ಪ್ರೀತಿ'ಯನ್ನು ಬಿಟ್ಟರೆ ಬಹುಪಾಲು ಉಳಿದ ಪುಸ್ತಕಗಳೆಲ್ಲ ಅವರು ಮಾತನಾಡಿದ ಬರಹ ರೂಪಗಳೇ. ಹಾಗಾಗಿ ಇವೊಂಥರಾ ಹೊಸ ಪ್ರಕಾರದ ಕೃತಿಗಳು - ನುಡಿದು ಬರೆದವುಗಳು - ನುಡಿಗೆ ಒಂದು ವಿಶೇಷ ಗುಣವಿದೆ. ಅದು ನಿರಂತರ ತಾಕ್ಷಣಿಕತೆಯನ್ನು ಎಚ್ಚರದಿಂದ ಕಾಪಾಡಿಕೊಳ್ಳುತ್ತದೆ. ಸದಾ ನಡೆಯುತ್ತಲೇ ಇರುವವರ ಗುಣಗಳೆಂದರೆ ನಿರಂತರ ತಾಕ್ಷಣಿಕತೆ, ಆಹ್ವಾನ ಮತ್ತು ವಿಸರ್ಜನೆಯ ಪ್ರಕ್ರಿಯೆ ಮತ್ತು ನಿಚ್ಚಂಪೊಸತಿನ ಗುಣ. ಜಿ.ಎಸ್.ಎಸ್ ಅವರು ಕುವೆಂಪು ಹಚ್ಚಿಕೊಟ್ಟ ಕಂದೀಲು ಹಿಡಿದು ನಡೆದವರು. ಮುಂದಿನ ದಾರಿಯನ್ನೀಗ ನಂಗಲಿಯವರು ನಡೆಯುತ್ತಿದ್ದಾರೆ. ಜಿ ಎಸ್ ಶಿವರುದ್ರಪ್ಪ ಸಾಹಿತ್ಯ ಪ್ರಶಸ್ತಿಯನ್ನು ಪಡೆದ ಚಂದ್ರಶೇಖರ ನಂಗಲಿಯವರಿಗೆ ಅಭಿನಂದನೆಗಳು.

ನಂಗಲಿ ಅಪಾರ ಪ್ರೀತಿಯ ಮನುಷ. ನಿಸರ್ಗದ ಜೀವಾಜೀವ ಸಮಸ್ತವನ್ನೂ ಪ್ರೀತಿಸಬಲ್ಲ ಅಂತಃಕರುಣಿ. ಅವರ ವಿಮರ್ಶನ ಪ್ರಜ್ಞೆಯನ್ನು ಈ ನಿಸರ್ಗಪ್ರೀತಿಯೇ ನಿರ್ದೇಶಿಸಿದೆ ಎಂದರೂ ನಡೆಯುತ್ತದೆ. ಅವರೊಂದು ರೀತಿಯ ಅಲೆಮಾರಿ. ಅದಕ್ಕೋಸ್ಕರವೇ ಸಂಸ್ಥೆಯೊಂದನ್ನು ಕಟ್ಟಿಕೊಂಡಿದ್ದರು. ಅದರ ಹೆಸರು AGANAG –ಅಂತರಗಂಗೋತ್ರಿ ಅಡ್ವೆಂಚರ್ಸ್ ಅಂಡ್ ನೇಚರ್ ಅವೇರ್ನೆಸ್ ಗ್ರೂಪ್ –ಇದೊಂದು ಘನಂದಾರಿ ಸಂಸ್ಥೆಯೇನಲ್ಲ. ಕೋಲಾರದ ಒಂದಿಷ್ಟು ಅಲೆಮಾರಿಗಳು ಸೇರಿಕೊಂಡು ಊರೂರು, ಕಾಡು ಕಾಡು ತಿರುಗಲು ಮಾಡಿಕೊಂಡ ಗುಂಪು.

ಕೋಲಾರದ ಬುದ್ಧಿಜೀವಿ ಗೆಳೆಯರನ್ನು ಕೊಲೇರಿಯನ್ಸ್ ಎನ್ನುವುದು ಚಾಲ್ತಿಯಲ್ಲಿದೆ. ಅವರೇ ಅದನ್ನು ಚಾಲ್ತಿಗೆ ತಂದಿದ್ದಾರೆ. ನಂಗಲಿಯವರನ್ನು ಕೊಲೇರಿಯನ್ಸ್ ವಿಶೇಷಣಗಳೊಡನೆ ಪರಿಚಯಿಸದಿದ್ದರೆ ಒಂಥರಾ ಅಸಮಾಧಾನ ಉಂಟಾಗಿಬಿಡುವ ಭಯ – ಹಾಗಾಗಿ ಒಂದೆರಡು ಮಾತುಗಳನ್ನಾದರೂ ಈ ಸಂದರ್ಭದಲ್ಲಿ ಆಡಬೇಕು. ಥೇಟ್ ಎನ್. ಓ. ಆರ್. ಅವರ ಕನ್ನಡ ಅವತರಣಿಕೆಯಂತಿರುವ ನಂಗಲಿಯವರನ್ನು ಕೈವಾರ ತಾತಯ್ಯ, ಕೋಲಾರದ ಬೆಟ್ಟದ ಬಂಡೆಗಳು, ನಡುಮಂತ್ರಂನ ನೀರಿನ ಝುರಿ, . . . . . ಇತ್ಯಾದಿಗಳ ನಡುವೆ ನಿಲ್ಲಿಸದಿದ್ದರೆ ಅವರು ಗುರುತೇ ಸಿಗುವುದಿಲ್ಲ. ಅವರ ಒಂದು ಪುಸ್ತಕ ಮುಖಪುಟದಲ್ಲಿ ಕೋಲಾರ ಬೆಟ್ಟದ ಬಂಡೆ ತುದಿಯೊಂದರ ಫೋಟೋ ಹಾಕಿಸಿದ್ದಾರೆ. ಅದು ಥೇಟ್ ನಂಗಲಿವರಿಗೇ ಟೋಪಿ ಹಾಕಿ ನಿಲ್ಲಿಸಿದಂತಿದೆ.

ಸುಮಾರು ಎರಡು ದಶಕಗಳ ಕಾಲದ ನಡೆದಾಟದಲ್ಲಿ ನಂಗಲಿಯವರು ಪ್ರಕಟಿಸಿರುವುದು ಈ ಹದಿನಾಲ್ಕು ಪುಸ್ತಕಗಳು.

1. ಮಾರ್ಕ್ಸವಾದಿ ವಿಮರ್ಶೆ (1995)
2. ನಿರ್‌ಬೀಜೀಕರಣದ ವಿರಾಟ್ ಸ್ವರೂಪ (1999)
3. ಕಾಡು ಮತ್ತು ತೋಪು (200)
4. ನಾ ನಿಮ್ಮೊಳಗು (2002)
5. ತಿಟ್ಹತ್ತಿ ತಿರುಗಿ (2003)
6. ನಡೆದುದೆ ದಾರಿ (2004)
7. ಆಲಿಸಯ್ಯಾ ಮಲೆಯ ಕವಿ (2005)
8. ಹಸಿರು ಪಿರಮಿಡ್ (2007)
9. ನೆಲಮುಟ್ಟುವ ಪ್ರೀತಿ (2007)
10. ನಾ ನಿಲ್ಲುವಳಲ್ಲ (2007)

11. ಗಂಗನ ಶಿರಸ್ಸು (2009)
12. ಡಿ ಆರ್ ನಾಗರಾಜ (2009)
13. ಈಗಳೆ ಸಾಧ್ಯ (2010)
14. ಕುವೆಂಪು ಭಾಷಾ ಸಂವಿಧಾನ

ನಂಗಲಿಯವರು ಕನ್ನಡದ ಪಾರಂಪರಿಕ ಓದಿನ ಕ್ರಮವನ್ನು ತೀವ್ರವಾಗಿ ಪ್ರಶ್ನಿಸಿದವರು. ಕನ್ನಡದ ಮಟ್ಟಿಗೆ ಇದು ತೀರಾ ಅಗತ್ಯವಾಗಿತ್ತು. ಮೊದಲನೆಯದಾಗಿ ಕನ್ನಡವೇ ಮುಕ್ತ ಪಠ್ಯ, ಮುಕ್ತ ಓದುಗಳಿಂದ ವಂಚಿತವಾದುದು. ಇಲ್ಲಿ ಅಕ್ಷರವೂ ಮುಕ್ತವಾಗಿ ದೊರಕಲಿಲ್ಲ, ಪಠ್ಯವೂ ಮುಕ್ತವಾಗಿ ದೊರಕಲಿಲ್ಲ, ಓದೆಂಬುದೂ ಎಲ್ಲರಿಗೂ ಮುಕ್ತವಲ್ಲ, ಹಾಗೂ ಮುಕ್ತ ಓದೆಂಬುದು ಸಾಧ್ಯವಾಗಲಿಲ್ಲ. ಇಂತಹ ಇಕ್ಕಟ್ಟಿನಲ್ಲಿ ಟೀಕಿನ ಪರಂಪರೆ, ಸಂಪಾದನಾ ಪರಂಪರೆ, ವ್ಯಾಖ್ಯಾನ ಪರಂಪರೆ, ಮತ್ತು ವಿಮರ್ಶಾ ಪರಂಪರೆಗಳು ಬೆಳೆದು ಬಂದಿವೆ. ಓದಿನ ಸಮಸ್ತ ಪ್ರಕ್ರಿಯೆಯೂ ನಿರ್ಬಂಧಿತವೇ ಆಗಿದ್ದುದು ಕನ್ನಡದ ದೌರ್ಭಾಗ್ಯ. ನಿಜವಾದ ಕನ್ನಡಿಗನಾಗಲು ಸಂಸ್ಕೃತ ಗೊತ್ತಿರಬೇಕು ಎಂದು ನಮ್ಮ ಮುಖಕ್ಕೆ ಹೇಳಿದರೂ ನಾವು ಸುಮ್ಮನೆ ಕೇಳಿಸಿಕೊಳ್ಳುವಷ್ಟು ದಿಕ್ಕೆಟ್ಟಿದ್ದೇವೆ. ಇಂತಹ ಮಾತಿಗೆ ಉತ್ತರವೆನ್ನುವಂತಹ ಬೇಂದ್ರೆಯವರ ಮಾತೊಂದನ್ನು ನಂಗಲಿ ದಾಖಲಿಸಿದ್ದಾರೆ: " ... ನಾನೂ ಆಧುನಿಕ ಮಾನವನೆ. 1969ರಲ್ಲಿ ಬದುಕುತ್ತಿದ್ದೇನೆ. ಇಂಗ್ಲಿಷ್ ಓದಿ ನನ್ನ ಬುದ್ಧಿ ಹಾಳಾಗಿಲ್ಲ. ಸಂಸ್ಕೃತ ಓದಿ ಬಹಳ ಜಾಣನಾದೆ ಅಂತೂ ನಾ ಹೇಳೂದಿಲ್ಲ. ನಾನು ಆಡುವ, ಬರೆದ ಕನ್ನಡ ಮಾತೇ ಕೆಲವರಿಗೆ ತಿಳಿಯುತ್ತದೆ, ಕೆಲವರಿಗೆ ತಿಳಿಯುವುದಿಲ್ಲ" ಅಂತ ಬೇಂದ್ರೆ ಹೇಳುತ್ತಾರೆ. ನಾವು ಪಡೆಯುತ್ತಿರುವ ಪಠ್ಯ ಪ್ರತಿಬಂಧಿತ ಓದಿನ ಮೂಲಕ ದೊರಕಿದ್ದು ಆದುದರಿಂದ ಇಂದು 'ನಿಜಪಠ್ಯವಲ್ಲ'ವೆಂಬ ಎಚ್ಚರವೊಂದನ್ನು ಮುಂದಿಟ್ಟು, ನಂಗಲಿಯವರು ಭಿನ್ನ ಮತ್ತು ಮುಕ್ತ ಓದುಗಳನ್ನು ರೂಪಿಸುವ ಗಂಭೀರ ಪ್ರಯತ್ನ



ಮಾಡಿದವರು. ಈ ಮುಕ್ತ ಓದಿನ ಕೆಲವಂಶಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು ಎಂದುಕೊಂಡಿದ್ದೇನೆ.

ನಂಗಲಿಯವರೆಂದರೆ ತಕ್ಷಣ ನೆನಪಾಗುವುದು ಹಸಿರು ಓದು, ಕೆಂಪು ಓದು, ಜೀವಕೇಂದ್ರಿತ ಓದು, ಸ್ಥಳೀಯ ಭೂಗೋಳದ ಓದು. ಇತ್ಯಾದಿ ಓದುಗಳು. ಬಹುಷ: ಎಂಭತ್ತರ ದಶಕದಿಂದೀಚೆಗೆ ಆದ ಒಂದು ಪರಿಕಲ್ಪನಾತ್ಮಕ ಬದಲಾವಣೆ ಎಂದು ಗುರುತಿಸಬೇಕಾದ ಸಂಗತಿ ಎಂದರೆ ಪಠ್ಯಕ್ಕೆ ಸಿಗುತ್ತಿದ್ದ ಒತ್ತು ಪ್ರತ್ಯಯಕ್ಕೆ ಅಂದರೆ ಅದನ್ನು ಓದುವ ಕ್ರಮ, ಸಂದರ್ಭ, ಕಾಲ-ದೇಶಗಳು ಮತ್ತು ಓದುಗ -ಈ ಸಂಗತಿಗಳ ಕಡೆಗೆ ವರ್ಗಾವಣೆಯಾದದ್ದು. ಪಠ್ಯವೆಂದರೆ ಪಠ್ಯ - ಅದನ್ನು ಹೇಗೆ ಓದಿದರೂ ಅದೇ ಪಠ್ಯವೆನ್ನುವ ನಿಲುವನ್ನು ಸಾರಾ ಸಗಟಾಗಿ ತಿರಸ್ಕರಿಸಿ ಸಿದ್ಧ ಪಠ್ಯಕ್ಕೆ ಬದಲಾಗಿ ತಾತ್ಕಣಿಕ ಪಠ್ಯ ಮಾತ್ರ ಸಾಧ್ಯವೆನ್ನುವ ಪ್ರಕ್ರಿಯಾ ಮೀಮಾಂಸೆ ಮುನ್ನೆಲೆಗೆ ಬಂದ ಕಾಲ. ತಾತ್ಕಣಿಕತೆಯು ಏನನ್ನೂ ಸ್ಥಿತಗೊಳಿಸಬಯಸುವುದಿಲ್ಲ. ಎಲ್ಲವನ್ನೂ ಮುಕ್ತಗೊಳಿಸಿ ಮುಂದಿನ ನಡೆಗೆ ಸ್ವಾತಂತ್ರ್ಯವನ್ನು ನೀಡುವಂಥದ್ದು. ಅಲ್ಲಮನ ಮಾತಿನಲ್ಲಿ ಹೇಳುವುದಾದರೆ:

**ನಡೆದೊಡೆ ಎಡೆಗೆಟ್ಟ ನಡೆಯ ನಡೆವುದಯ್ಯಾ**
**ನುಡಿದೊಡೆ ಪಡಿಗೆಟ್ಟ ನುಡಿಯ ನುಡಿವುದಯ್ಯಾ**
**ಮಾಡಿದೊಡೆ ಮರಹುಗೆಟ್ಟ ಮಾಟವ ಮಾಡುವುದಯ್ಯಾ**
**ಕೂಡಿದೊಡೆ ಕುರುಹುಗೆಟ್ಟ ಕೂಟವ ಕೂಡುವುದಯ್ಯಾ**
**ಗುಹೇಶ್ವರ ನಿಮ್ಮಲ್ಲಿ ನಿಂದ ಶರಣನ ನಿಜಪಥವಿದಯ್ಯಾ**

ಎಡೆಗೆಟ್ಟ ನಡೆ, ಪಡಿಗೆಟ್ಟ ನುಡಿ, ಮರಹುಗೆಟ್ಟ ಮಾಟ, ಕುರುಹುಗೆಟ್ಟ ಕೂಟ - ಇದು ಶೂನ್ಯತೆಯ ದಾರಿ. ಕುವೆಂಪು ಪಯಣವೂ ಉದಾರಿ ಅದ್ವೈತದಿಂದ ಅನಿಕೇತನ ತತ್ವದೆಡೆಗೆ ಸಾಗಿದ್ದು - ಹಾಗೇ ನಂಗಲಿಯವರದ್ದೂ ಮಾರ್ಕ್ಸ್‌ವಾದಿ ಚಿಂತನೆಯಿಂದ ಅದೇ ಅನಿಕೇತನ ತತ್ವವಾದ Be nothing, Do nothing and Think nothing ಕಡೆಗೆ ಸಾಗಿತು . ಅದು ಫುಕುವೋಕಾ ನಿಸರ್ಗದೊಂದಿಗೆ ಸಾಧಿಸಿದ ತಾದಾತ್ಮ್ಯವನ್ನು ತನ್ನದಾಗಿಸಿಕೊಂಡಿತು.

ತಾನೇ ಕಟ್ಟಿದ ತತ್ವ, ತಾನೇ ಕಲ್ಪಿಸಿದ ಕುರುಹು ತನ್ನನ್ನೇ ನಿಯಂತ್ರಿಸುವುದೊಂದು ಸೋಜಿಗ. ಈ ಕುರುಹುಗಳಿಂದ ಬಿಡುಗಡೆ ಪಡೆಯುವುದು ಸುಲಭದ ಸಾಧನೆಯಲ್ಲ. ಇದೊಂದು ಸವಾಲು. ತಮ್ಮ ವ್ಯಕ್ತಿ ವಿಶಿಷ್ಟತೆಗಾಗಿ ತಾವೇ ಸೃಷ್ಟಿಸಿಕೊಂಡ ಕುರುಹುಗಳಲ್ಲಿ ಅವರು ಬಂಧಿಗಳಾಗಿಬಿಟ್ಟಿರುತ್ತಾರೆ. ತನ್ನಿಂದ ತಾನೇ ಹೊರಬರುವುದು ಕೆಲವರಿಗೆ ಮಾತ್ರ ಸಾಧ್ಯ. ಅದೊಂದು ಆಹ್ವಾನ ಮತ್ತು ವಿಸರ್ಜನೆಯ ಪ್ರಯಾಣ. ತನ್ನನ್ನು ನಿರಸನಗೊಳಿಸಿದಾಗ ಮಾತ್ರ ಮರುಸೃಷ್ಟಿ ಸಾಧ್ಯ. ಈ ಎಚ್ಚರವನ್ನು ನಿರಂತರ ಕಾಯ್ದುಕೊಂಡಿರುವ ಚಂದ್ರಶೇಖರ ನಂಗಲಿಯವರ ಟ್ರಾನ್ಸೆಂಡೆಂಟಲಿಸ್ಟ್ ದೃಷ್ಟಿಕೋನ ನಾನು ಕಂಡ ಮೊದಲ ಸಂಗತಿ. ಅವರು ತಮ್ಮ ಈ ಪಯಣದ ಉದ್ದಕ್ಕೂ ಕ್ರಮವೊಂದನ್ನು ಬಳಸಿದ್ದಾರೆ. ತಾವು ಹೇಳುತ್ತಿರುವ ಎಲ್ಲ ಸಂಗತಿಗಳನ್ನೂ ಅವಳಿ ವಿರುದ್ಧಗಳನ್ನಾಗಿಸಿ ಅವುಗಳನ್ನು ಇದಿರು-ಬದಿರಾಗಿಸಿ ಎರಡನ್ನೂ ದಾಟಲು ಸೂಚಿಸುತ್ತಾರೆ. ವಚನಕಾರರು

ಬಳಸಿದ ಮಾದರಿ ಇದು. ತಾನು ಮತ್ತು ಇದಿರನ್ನು ನಿರಸನಗೊಳಿಸಲು ಅವಗಳನ್ನು ಇದಿರಾಗಿಸಿ ಯಾವುದಾದರೂ ಒಂದನ್ನು ನಿರಸನಗೊಳಿಸಿದರೆ ಇನ್ನೊಂದು ತಂತಾನೇ ನಿರಸನಗೊಳ್ಳುತ್ತದೆ. ತನ್ನನ್ನು ಕಾಣಲು ಇರುವ ಒಂದೇ ಆಕರವೆಂದರೆ ಇದಿರು. ಹಾಗೆಯೇ ತನ್ನನ್ನು ಉಂಟಾಗಿಸಿಕೊಳ್ಳಲು ಮತ್ತು ಇಲ್ಲವಾಗಿಸಿಕೊಳ್ಳಲು ಇರುವ ಒಂದೇ ದಾರಿಯೆಂದರೆ ಇದಿರು ಮಾತ್ರ. ತಾನು-ಇದಿರಿನ ಜುಗಲ್‌ಬಂದಿಯನ್ನು ಹದವಾಗಿ ಬೆಸೆಯಬಲ್ಲ ನಂಗಲಿಯವರ ಎಲ್ಲ ಕೃತಿಗಳಲ್ಲೂ ಇಂತಹ ಅವಳಿ ಜೋಡಿಗಳ ಅನೇಕ ಪಟ್ಟಿಗಳು ಪುಟಪುಟಗಳಲ್ಲಿ ಪುಟಿಯುತ್ತವೆ. ತಾನು ಮತ್ತು ಇದಿರನ್ನು ದಾಟುವ ಸವಾಲನ್ನು ನೋಡುಗರೆದುರಿಗೆ ಒಡ್ಡುತ್ತವೆ.

ನಂಗಲಿಯವರದ್ದು ಒಂದು ಹದದಲ್ಲಿ ಅವಧೂತ ಪ್ರಜ್ಞೆ. ನಿರ್ದಾಕ್ಷಿಣ್ಯವಾಗಿ ದ್ವೈತಾದ್ವೈತಗಳನ್ನು ದಾಟಿದ ಶೂನ್ಯತೆಯಲ್ಲಿ, ಬಹುತ್ವದಲ್ಲಿ ವಿಹರಿಸಬಲ್ಲವರು. ಅವರ ಪಾಲಿಗೆ ಅನೇಕಗಳು ಅನೇಕಗಳಾಗುವುದೇ ಸತ್ಯ. ಹರಿವ ನದಿಗೆ ಮೈಯೆಲ್ಲಾ ಕಾಲೆಂಬಂತೆ ಹರಡಿಕೊಂಡಿರುವ ಬಹುತ್ವ ಈ ಕೃತಿಗಳ ಜೀವದ್ರವ್ಯ. ಇಲ್ಲಿನ ಅನೇಕಗಳಲ್ಲಿ ನಾನೆಂಬ ಒಂದು ಕರಗಿ ಹಲವಾಗಿ, ನಿರಾಳವಾಗಿ ನಂತರ ಬಯಲಾಗುತ್ತದೆ.

**ಅಕ್ಷರವ ಬಲ್ಲೆವೆಂದು**
**ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯ**
**ಗುರುಹಿರಿಯರು ತೋರಿದ ಉಪದೇಶದಿಂದ**
**ವಾಗದ್ವೈತವ ಕಲಿತು ವಾದಿಪರಲ್ಲದೆ**
**ಆಗು ಹೋಗೆಂಬುದನರಿಯರು**
**ಭಕ್ತಿಯನರಿಯರು, ಯುಕ್ತಿಯನರಿಯರು, ಮುಕ್ತಿಯನರಿಯರು**
**ಮತ್ತೂ ವಾದಿಸುವರು!**
**ಹೋದರು ಗುಹೇಶ್ವರ, ಸಲೆಕೊಂಡ ಮಾರಿಂಗೆ.**

ಅಲ್ಲಮನ ಈ ವಚನ ನಂಗಲಿಯವರಿಗೆ ತುಂಬಾ ಇಷ್ಟವಾದುದು. ಈ ವಚನವನ್ನು ಅನೇಕ ಕಡೆ ಬಳಸಿದ್ದಾರೆ. ಕೇವಲ ವಾಗದ್ವೈತವು ಮಾಡುವ ಕೇಡನ್ನು ಹೀಗೆ ವಿವರಿಸುತ್ತಾರೆ: ಏನು ಅಕ್ಷರದ ರಾಶಿ, ಪುಸ್ತಕದ ರಾಶಿ, ಮಾಹಿತಿಯ ರಾಶಿ – ಅದು ಸಾಲದು ಅಂತಾ ಇನ್ನಷ್ಟು ಮತ್ತಷ್ಟನ್ನು ಗುರುವಿನಿಂದ,

ಹಿರಿಯರಿಂದ, ಪರಂಪರೆಯಿಂದ ಕಲಿಯಲಿಕ್ಕೆ ತಯಾರು! ಕಲಿತು ವಾದಿಸಲಿಕ್ಕೆ ತಯಾರು! ಯಾವುದನ್ನು ಕಲಿತರೆ ಎಲ್ಲವನ್ನೂ ಕಲಿತಂತಾಗುತ್ತದೆಯೋ ಅದನ್ನೂ ಕಲಿಯಲಿಕ್ಕೆ ರೆಡಿ! ಆದರೆ ತುಂಬಾ ತಡವಾಗಿ ತಿಳಿಯುವುದೇನೆಂದರೆ ಎಲ್ಲವನ್ನೂ ಮರೆಯಲು ಸಾಧ್ಯವಾದರೆ ಎಲ್ಲವನ್ನೂ ಕಲಿತಂತೆ ಆಗುತ್ತೆ! ನಿಸರ್ಗದಲ್ಲಿ ಸಮತೂಕದಲ್ಲಿ ನಡೆಯುತ್ತಿರುವ ಆಹ್ವಾನ ವಿಸರ್ಜನೆಯನ್ನು ಗಮನಿಸಿದರೆ ಸಾಕು ನಮಗೆ ಸರಿದಾರಿ ದೊರಕುತ್ತದೆ!

ನಂಗಲಿಯವರ ಜೊತೆಗಿನ ಚಾರಣವೆಂದರೆ ಒಂದು ಹಿಂಪಯಣ; ಒಂದೊಂದನ್ನೇ ಕಳೆದುಕೊಳ್ಳುತ್ತ ಇಲ್ಲವಾಗಿಸಿಕೊಳ್ಳುತ್ತ ಹಗುರಾಗುತ್ತ ಹೋಗುವ ಪ್ರಯಾಣ. ಅದನ್ನು ಅವರು ಪ್ರತಿಲೋಮ ತತ್ವಚಿಂತನೆ ಎನ್ನುತ್ತಾರೆ. ಅವರು ಹೇಳುವಂತೆ ಅನುಲೋಮ ತತ್ವಚಿಂತನೆ ಸ್ಥಾವರವಾದುದು; ಪ್ರತಿಲೋಮ ತತ್ವಚಿಂತನೆ ಜಂಗಮವಾದದ್ದು. ಕಾಡು

ಮತ್ತು ತೋಪು ಅವರಿಗೆ ಅತ್ಯಂತ ಪ್ರಿಯವಾದ ಜೋಡಿ ರೂಪಕ. ಕಾಡು ದೇಸಿ ಸಂಸ್ಕೃತಿಯ ಪ್ರತಿನಿಧಿಯಾದರೆ ತೋಪು ಮಾರ್ಗ ಸಂಸ್ಕೃತಿಯ ಪ್ರತಿನಿಧಿ. ನಂಗ್ಲಿಯವರೆ ಒಂಥರಾ ಮನ್ನಾಜಂಗ್ಲಿ ಥರಾ. ಯಾರನ್ನೂ ಒಳಗೆ ಬಿಡದ ಕಾಡು ಸಮೃದ್ಧವಾಗಿರುತ್ತಲ್ಲ ಹಾಗೆ. ಅವರ ಮಟ್ಟಿಗೆ ಯಾವುದೂ ಮುಖ್ಯವೂ ಅಲ್ಲ ಅಮುಖ್ಯವೂ ಅಲ್ಲ. ಅದು ಅವರ ಹಸಿರು ಓದಿನ ಫಲ. ಹೀಗೆ ನಿಸರ್ಗವನ್ನು ಪವಿತ್ರೀಕರಿಸುವ ಹಿಂದೆ ಬೇರೆ ಬೇರೆಯವರಿಗೆ ಬೇರೆ ಬೇರೆ ತತ್ವಗಳು ಪ್ರಭಾವ ಬೀರಿರಲು ಸಾಧ್ಯ. ಕುವೆಂಪು ಅವರಿಗೆ ಸಮಸ್ತ ನಿಸರ್ಗವೂ ಆ ಅದ್ವಯ ಬ್ರಹ್ಮದ ಮೂರ್ತರೂಪ. ಆದರೆ ನಂಗಲಿಯವರ ಈ ಪವಿತ್ರೀಕರಣದ ಹಿಂದೆ Do nothing, Be nothing ಎಂಬ ಫುಕುವೋಕಾ ಶೂನ್ಯತತ್ವದ ಆಶಯವಿದೆ. 'ಬಿತ್ತದೆ ಬೆಳೆಯದೆ ತುಂಬಿದ ರಾಸಿಯ ಕಂಡಲ್ಲಿ ಸುಖಿಯಾಗಿ ನಿಂದವರಾರೋ? ಎಂಬ ಅಲ್ಲಮನ ನುಡಿಯಿದೆ.

ಮನುಷ್ಯಕೇಂದ್ರಿತ ದೃಷ್ಟಿಕೋನದ ವಿಸರ್ಜನ ಮತ್ತು ಜೀವಕೇಂದ್ರಿತ ದೃಷ್ಟಿಕೋನದ ಆಹ್ವಾನ ಅವರು ಹಸಿರು ಓದಿನ ಮತ್ತೊಂದ ಮುಖ. ನಂಗಲಿ ಯಾವುದನ್ನು ಬೂಮಾತ್ತಾಯಿ ತತ್ವವೆನ್ನುತ್ತಿದ್ದಾರೋ ಅದೊಂದು ರೀತಿಯ ಕನ್ನಡದ ಬಹುತ್ವವನ್ನು ಒಟ್ಟು ಮಾಡಿದ ಹಲವು ಮಕ್ಕಳ ತಾಯಿಯ ಥರಾ –ಅದರಲ್ಲಿ ಬೇಂದ್ರೆ ಹೇಳಿರುವ 'ಅಭೇಧದ ಕಟ್ಟಡ' ಕುವೆಂಪು ಅವರ 'ಅಂದದ ಒಪ್ಪಂದ', ಕಾರಂತರು ಹೇಳಿರುವ 'ನೇಯ್ದ ಅರಿವೆ' ಪುತಿನ ಅವರ 'ಸೃಷ್ಟಿಯ ವಿಧ ವಿಧ ವಿಕಸನ' ಇವೆಲ್ಲ ಸೇರಿವೆ. ಈ ಬಹುತ್ವವೆ ಬೂಮಾತ್ತಾಯಿ ತತ್ವ. ಅವರ ಹಸಿರು ಪಿರಮಿಡ್ಡಿನ ಬ್ಲಾಕ್ ಡಯಾಗ್ರಾಮ್ ಬಲು ಆಕರ್ಷಕವಾದುದುದು. ಅದು ಮನುಷ್ಯ ಪರಿಸರ –ತಿರ್ಯಕ್ ಪರಿಸರ – ಸಸ್ಯ ಪರಿಸರ ಎಂಬ ಮೂರು ಸ್ತರಗಳಿಂದಾದದು. ಈ ಜೈವಿಕ ಪಿರಮಿಡ್ಡಿನ ತುತ್ತ ತುದಿಯಲ್ಲಿ ಮನುಷ್ಯ ಸಮುದಾಯಗಳಿವೆ. ಕೆಳಕ್ಕೆ ಹೋದಂತೆ ಬಹುಸಂಖ್ಯಾತ ಪ್ರಾಣಿ ಪಕ್ಷಿಗಳು, ಕ್ರಿಮಿಕೀಟಗಳು, ನಂತರ ಸಸ್ಯ ವೃಕ್ಷಗಳೇ ಮುಂತಾದ ಅರಣ್ಯ ಸಮುದಾಯಗಳು,



ಪರ್ವತ ಶ್ರೇಣಿಗಳು ನದಿ ಜಲಪಾತ ಸರೋವರಗಳು ಹರಡಿಕೊಂಡಿವೆ. ಹಾಗಾಗಿ ಈ ಪಿರಮಿಡ್ಡಿನ ತಳ ಕುಸಿಯದಂತೆ ನೋಡಿಕೊಳ್ಳಬೇಕಾದ ಅನಿವಾರ್ಯತೆ ನಮ್ಮೆಲ್ಲರಿಗೆ ಇದೆ.

ಒಮ್ಮೆ ಒಂದಷ್ಟು ಗೆಳೆಯರನ್ನು, ಅವರು ಈಗ ಕೃಷಿ ಮಾಡುತ್ತಿರುವ ಘಾಟಿಯ ಹತ್ತಿರವಿರುವ ನಡುವಂತ್ರಂ ಎಂಬ ದಟ್ಟ ಕಾಡಿನ ಕಣಿವೆಯೊಂದಕ್ಕೆ ಕರೆದುಕೊಂಡು ಹೋಗಿ ಬಂಡೆ ಮೇಲೆ ಮಲಗಿಸಿ, ನಿನ್ನೆ ಮೊನ್ನೆ ಒಂದು ಒಂಟಿ ಸಲಗ ಯಾರನ್ನೋ ತುಳಿದು ಸಾಯಿಸಿದೆಯಂತೆ, ಆನೆಗಳು ಬಂದರೆ ಈ ಕಡೆಯಿಂದ ಮಾತ್ರ ಬರುತ್ತವೆ, ಅವು ಬರದ ಹಾಗೆ ಬೆಂಕಿ ಉರೀತಿದೆ, ನೀವಿನ್ನು ನೆಮ್ಮದಿಯಾಗಿ ಮಲಗಬಹುದು -ಅಂದ್ರು. ಇವರ ಈ ಹಸಿರು ಓದಿನ ಡಿಕ್ಷನರಿಯಲ್ಲಿ 'ನೆಮ್ಮದಿ' ಪದಕ್ಕೆ ಏನರ್ಥವಿರಬಹುದು ಎನ್ನುವುದು ಮಾತ್ರ ಇನ್ನೂ ಗೊತ್ತಾಗಿಲ್ಲ.

ಜನಪದರನ್ನು, ಪಂಪನನ್ನು, ಹರಿಹರನನ್ನು, ರನ್ನನನ್ನು, ರಾಘವಾಂಕನನ್ನು, ವಚನಕಾರರನ್ನು, ಅಷ್ಟೇ ಪ್ರೀತಿಯಿಂದ ಎಸ್ ಜಿ ಸರದೇಸಾಯಿ, ಚಟ್ಟೋಪಾಧ್ಯಾಯ ಮತ್ತು ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಲೇಖಕರನ್ನೆಲ್ಲ ತಮ್ಮ ಭಿನ್ನ ಓದಿಗೆ ಒಳಗು ಮಾಡಿಕೊಂಡಿರುವ ನಂಗಲಿ ಅವರನ್ನು ಅನೇಕ ರೀತಿಯಲ್ಲಿ ನಾವೆಲ್ಲ ಪ್ರೀತಿಯಿಂದ ಅಪ್ಪುವ ವ್ಯಕ್ತಿತ್ವ. ಅದರೂ ನಂಗಲಿ ಅಂದರೆ: ಶಬ್ದ ಜ್ಞಾನ-ಬಿಂಬ ಜ್ಞಾನ, ಕಾಡು-ತೋಡು, ಬೂಮ್ತಾಯಿ ತತ್ವ, ಜೀವಕೇಂದ್ರಿತ ಮಾನವತಾ ವಾದ, ನೆಲಮುಟ್ಟುವ ಪ್ರೀತಿ, ಆಹ್ವಾನ ಮತ್ತು ವಿಸರ್ಜನ ಮತ್ತು ಪ್ರತಿ ಮಾತಿನಲ್ಲಿ ಅವಳಿ ವಿರುದ್ಧದ ರೂಪಕಗಳು! ಇವೆಲ್ಲಾ ಒಟ್ಟೊಟ್ಟಾಗಿ ಬೆಳೆದುಕೊಂಡಿರುವ ಥೇಟ್ ಮನ್ನಾಜಂಗ್ಲೀ ಎಂದೇ ಅನ್ನಿಸುತ್ತದೆ. ಜಿ ಎಸ್ ಎಸ್ ಅವರೇ ನನ್ನೊಳಗಿದ್ದಾರೆ ಎಂದು ಸಂಭ್ರಮಿಸುವ ನಂಗಲಿಯವರಿಗೆ ಮತ್ತೊಮ್ಮೆ ಅಭಿನಂದನೆಗಳು.

[ಪ್ರೊ.ಚಂದ್ರಶೇಖರ ನಂಗಲಿ ಅವರಿಗೆ ಜಿಎಸ್‌ಎಸ್ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಡಾ.ನಟರಾಜ ಬೂದಾಳು ಅವರು ಮಾಡಿದ ಭಾಷಣ]





# ಸ್ವೇಚ್ಛಾ ಹಾದಿಯ ಬೆಳಕು

(80ರ ದಶಕದ ತೆಲುಗು ಕಾದಂಬರಿಗಳ ಮಧ್ಯ)

**ಮೂಲ : ಓಲ್ಗಾ – ಕನ್ನಡಕ್ಕೆ: ಜಿ. ವೀರಭದ್ರಗೌಡ**

"Freedom is the recognition of necessity"-Engles

"ನಮ್ಮ ಜೀವನದಲ್ಲಾಗಲಿ, ನಮ್ಮ ಸುತ್ತಲಿರುವ ಸಮಾಜದಲ್ಲಾಗಲಿ– ಅವುಗಳ ಚಲನಸೂತ್ರಗಳನ್ನು ಅನ್ವೇಷಿಸುವುದೇ ಒಂದು ಅವಶ್ಯಕತೆ.ಆ ಅವಶ್ಯಕತೆಯನ್ನು ಗುರುತಿಸುವುದೇ ಸ್ವೇಚ್ಛೆ.ಆ ದೆಸೆಯಲ್ಲಿ– ಸ್ವೇಚ್ಛೆ ಕಾದಂಬರಿಯಲ್ಲಿಯ ನಾಯಕಿಯ ಬದುಕಿನಲ್ಲಿರುವಂತೆ– ಸಂಕ್ಷೋಭೆಯೂ ಇದೆ.ಸಂಘರ್ಷಣೆಯೂ ಇದೆ.ಅವಶ್ಯಕತೆಯನ್ನು ಗುರುತಿಸಿದ ಮೇಲೆ– ಅಂದರೆ ಸೇಚ್ಛಾನಂತರದ ಜೀವನದಲ್ಲಿ ಸಂಘರ್ಷಣೆಯಾಗಲಿ ಸಂಕ್ಷೋಭೆಯಾಗಲಿ ಇರುವ ಅವಕಾಶ ಇಲ್ಲ."

**– ಸಿ. ವಿ. ಸುಬ್ಬಾರಾವು**

'ಸ್ವೇಚ್ಛೆ' ಕಾದಂಬರಿಯಾಗಿ ಪ್ರಕಟಿಸಿದರೆ ಅದಕ್ಕೆ ಮುನ್ನುಡಿ ಬರೆಯಬೇಕೆಂದು ಬಹಳಷ್ಟು ಕುತೂಹಲ ತಾಳಿದ್ದ ಪ್ರಿಯಮಿತ್ರ ಸುಬ್ಬರಾವು ಇಲ್ಲದೆ 'ಸ್ವೇಚ್ಛೆ' ಕಾದಂಬರಿ ಪ್ರಕಟವಾಗುತ್ತಿರುವುದು ನನ್ನ ಜೀವನದಲ್ಲೊಂದು ದೊಡ್ಡ ವಿಷಾದ.ಸುಬ್ಬರಾವು ಪತ್ರದಲ್ಲಿ ಬರೆದ ನಾಲ್ಕು ವಾಕ್ಯಗಳನ್ನು ಪುನಃ ಬರೆದುಕೊಳ್ಳುವುದರ ಹೊರತು ಮತ್ತೇನು ಮಾಡಲು

ಸಾಧ್ಯ?ನನಗೂ, ಸುಬ್ಬರಾವರಿಗೆ ಮಾತನಾಡಿಕೊಳ್ಳಲು ಬಹಳ ಇಷ್ಟವಾಗಿದ್ದ ವಿಷಯ ಸ್ವೇಚ್ಛಾನಂತರದ ಜೀವನ. ಬಹುಶಃ ನಾವಿಬ್ಬರು ಅಂಥ ಜೀವನದ ಏರಿಳಿತಗಳನ್ನು ಈಜಿದವರಾಗಿರುವುದರಿಂದ ಇರಬಹುದೇನೋ! 'ಸ್ವೇಚ್ಛೆ' ಕಾದಂಬರಿಯು ಬಂದ ಮೇಲೆ ನಾವಿಬ್ಬರು ಭೆಟ್ಟಿಯಾದಾಗೆಲ್ಲ ಸ್ವೇಚ್ಛಾನಂತರದ ಜೀವನದ ಬಗ್ಗೆ ಚರ್ಚಿಸದೇ ಇದ್ದವರಲ್ಲ. ತಾನು ಬರೆಯುವ ಮುನ್ನುಡಿಯಲ್ಲಿ ಆ ಚರ್ಚೆಗಳ ಸಾರಾಂಶವೆಲ್ಲಾ ಇರುತ್ತದೆಂದು ಆಸೆ ತೋರಿಸಿ ಒಂದು ಮಾತು ಸಹ ಹೇಳದೆ ಮಾಯವಾದರು!ಈಗ ನಾನು 'ಸ್ವೇಚ್ಛೆ' ಕಾದಂಬರಿಯ ಕುರಿತು ನಾಲ್ಕು ಮಾತುಗಳನ್ನು ಬರೆಯಲು ಮುಂದಾದರೆ ಏನೂ ಕೈಲಾಗದವಳಂತೆ ಆಗುತ್ತಿದ್ದೇನೆ. ನನ್ನ ಶಕ್ತಿಯನ್ನೆಲ್ಲ ಕೂಡಿಟ್ಟುಕೊಂಡು ಸುಬ್ಬಾರಾವು ಅವರ ಮರಣಾನಂತರವೂ ಸ್ವೇಚ್ಛೆಯನ್ನು ಹೊಂದುವ ಪ್ರಯತ್ನವನ್ನು ಗಟ್ಟಿಯಾಗಿ ನಿರ್ಣಯಿಸಿಕೊಂಡು ನನಗೆ ತೋಚಿದ್ದನ್ನು ಬರೆಯುತ್ತಿದ್ದೇನೆ.

'ಸ್ವೇಚ್ಛೆ', ಮೊದಲು ಚತುರ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮವಾಗಿ ಪ್ರಕಟಗೊಂಡು ಏಳು ವರ್ಷಗಳಾದವು.(1987 ಫೆಬ್ರವರಿ).ಈ ಏಳುವರ್ಷಗಳ ಕಾಲದಲ್ಲಿ ಇಷ್ಟೊಂದು ವಿವಾದಾಸ್ಪದವಾದ ಕಾದಂಬರಿ, ಇಷ್ಟೊಂದು ಚರ್ಚೆಗೆ ಒಳಗಾದ ಕಾದಂಬರಿ ಮತ್ತೊಂದು ಬರಲಿಲ್ಲ. ಈ ಕಾದಂಬರಿ ಬಂದ ವರ್ಷ, ವರ್ಷವಿಡೀ ಆಂಧ್ರಪ್ರದೇಶದ ಎಲ್ಲಾ ಪಟ್ಟಣಗಳಲ್ಲಿಯೂ ಸಾಹಿತ್ಯಾಭಿಮಾನಿಗಳು, ವಾಚಕರು, ವಾಮಪಕ್ಷದವರು, ಈ ಕಾದಂಬರಿಯ ಬಗ್ಗೆ ವಿಸ್ತೃತವಾಗಿ ಚರ್ಚಿಸಿದ್ದಾರೆ.ಆ ಚರ್ಚೆಗಳು ಕ್ರಮೇಣ ಸಾಹಿತ್ಯ ಪ್ರದೇಶವನ್ನು ಬಿಟ್ಟು ನನ್ನ ವೈಯಕ್ತಿಕ ಜೀವನದಲ್ಲಿಯೂ ನುಗ್ಗಿ ಬಂದವು. ನನ್ನ ಜೀವನದಲ್ಲಿ – ನೋವೆನಿಸಿದರೂ – ಅಪರೂಪದಮೌಲಿಕವಾದ, ಅನುಭವಗಳನ್ನುನೀಡಿವೆ. ಸ್ನೇಹ, ಪ್ರೇಮ, ದ್ವೇಷ, ಸಾಹಿತ್ಯ, ಜೀವನ, ರಾಜಕೀಯಗಳು, ಸ್ತ್ರೀಯರಸಂಘಗಳು, ಸ್ತ್ರೀಯರಪರಸ್ಪರಸಹಕಾರ, ಇವೆಲ್ಲವುಗಳಬಗ್ಗೆಬಹಳಷ್ಟುಮೌಲಿಕವಾದಪಾಠಗಳನ್ನು ಕಲಿತಿದ್ದೇನೆ. ಒಬ್ಬವ್ಯಕ್ತಿಯಾಗಿ ಮತ್ತಷ್ಟು ಬಲವಾದ, ಸ್ಥಿರವಾದ ಅಭಿಪ್ರಾಯಗಳಿಂದ ರೂಪಗೊಂಡವಳಾಗಿದ್ದೇನೆ. ಹಾಗೆ ರೂಪಗೊಳ್ಳಬಲ್ಲ ಶಕ್ತಿ ನನಗಿದೆಯೆಂದು ತಿಳಿದುಕೊಳ್ಳುವ ಅವಕಾಶವನ್ನು ಈ 'ಸ್ವೇಚ್ಛೆ' ಕಾದಂಬರಿ ನನಗೆ ತಂದುಕೊಟ್ಟಿದೆ.

ಆ ವಿಷಯಗಳನ್ನು ಪಕ್ಕಕ್ಕಿಟ್ಟು ಸ್ವೇಚ್ಛೆ ಕಾದಂಬರಿ ಯಾಕೆ ಅಷ್ಟೊಂದು ವಿವಾದಾಸ್ಪದವಾಗಿದೆ ಎಂದು ಆಲೋಚಿಸಿದರೆ ಅಂದಿನ ಚಾರಿತ್ರಿಕ ಸಂದರ್ಭವೇ ಅಂತಹದೆಂದು ಅರ್ಥವಾಗುತ್ತದೆ.ಸ್ತ್ರೀವಾದಿ ವಿಚಾರಗಳು ಹೊಸದಾಗಿ ಪ್ರಚಾರವಾಗುತ್ತಿದ್ದ ದಿನಗಳು ಅವು.ಸೈದ್ಧಾಂತಿಕ ವಿಷಯಗಳಾಗಿ ಚರ್ಚೆಯಲ್ಲಿ ನಲುಗುತ್ತಿರುವ ಅಂಶಗಳನ್ನು ಕೌಟುಂಬಿಕ ವಿಷಯಗಳಾಗಿ, ನಮ್ಮೆಲ್ಲರ ಬದುಕುಗಳಿಗೆ ಸಂಬಂಧಿಸಿದ ವಿಷಯವಾಗಿ ಹೇಳುತ್ತಾ – ಒಂದುಸಾಮಾನ್ಯಮಧ್ಯಮವರ್ಗದ ಕುಟುಂಬದಮಹಿಳಾ ಸಮಸ್ಯೆಯಾಗಿ ಚರ್ಚಿಸುವುದರೊಂದಿಗೆ, ಪ್ರತಿಯೊಬ್ಬರೂತಮ್ಮಬದುಕಿನೊಳಗೆ ಒಂದುಸಾರಿ ಕಣ್ಣುಬಿಟ್ಟುನೋಡಿಕೊಂಡರು. ಇಲ್ಲಿಯವರೆಗೆ ತಾವುಪಕ್ಕಕ್ಕೆಸರಿಸುತ್ತಿದ್ದಪ್ರಶ್ನೆಗಳನ್ನು, avoid ಮಾಡುತ್ತಿರುವ ಪ್ರಶ್ನೆಗಳನ್ನು, ಇನ್ನು ಹಾಗೆ ಮುಂದುವರಿಸಲು ಸಾಧ್ಯವಿಲ್ಲದ ರೀತಿಯಲ್ಲಿ ಅವರ ಮಗಳಂತಹ, ತಂಗಿಯಂತಹ, ಹೆಂಡತಿಯಂತಹ ಒಬ್ಬ ಸ್ತ್ರೀಯು ಕೇಳಿದಾಗ




ಬಹಳ ಜನರಿಗೆ ಬಹಳಷ್ಟು ಸಮಸ್ಯೆವುಂಟಾಯಿತು. ಈ ಪ್ರಶ್ನೆಗಳನ್ನು ಕೇಳಲಾಗದ ಸ್ತ್ರೀಯರಿಗೆ, ಈ ಕಾದಂಬರಿ ಪ್ರಶ್ನೆ ಕೇಳುವ ಸಾಮರ್ಥ್ಯವನ್ನು ನೀಡುವುದೇನೋ ಎಂಬ ಭಯವನ್ನು ಸಹ ಉಂಟುಮಾಡಿದೆ. ವಿದ್ಯಾವಂತರಾಗಿ ವಿವಿಧ ಉದ್ಯೋಗಗಳನ್ನು ನಿರ್ವಹಿಸುತ್ತಿದ್ದ ಮಾತ್ರಕ್ಕೆ ಮನೆ ಒಳಗೆ ಹೊರಗೆ ಪ್ರತ್ಯಕ್ಷ ಪರೋಕ್ಷ ದಮನ(ತುಳಿತ)ಗಳಿಗೆ, ಗಾಬರಿಯಾಗುತ್ತಿರುವ ಆಧುನಿಕ ಸ್ತ್ರೀಯ ಜೀವನವನ್ನು, ಆಕೆಯ ಅಸ್ತಿತ್ವವನ್ನು ಪ್ರಶ್ನಿಸುವ ಸಂಚಲನವನ್ನು ಈ ಕಾದಂಬರಿಯು ಉಂಟುಮಾಡಿದೆ.

ಸ್ವೇಚ್ಛೆ ಎಂಬ ಹೆಸರೇ ಇಷ್ಟವಾಗಲಿಲ್ಲ ಕೆಲವರಿಗೆ.ಸ್ವೇಚ್ಛೆ, ಹದ್ದುಬಸ್ತುಗಳಿಲ್ಲದ ಸ್ವೇಚ್ಛೆಯಾಗಿ, ಜವಾಬ್ದಾರಿಯಿಲ್ಲದ ಸ್ವೇಚ್ಛೆಯಾಗಿ ಕಂಡಿದೆ.ಯಾವ ಪ್ರಯೋಜನೆಯನ್ನು ಆಶಿಸಿ ಸ್ವೇಚ್ಛೆಯನ್ನು ಪ್ರತಿಪಾದಿಸಿದ್ದೇನೆಂಬ ಪ್ರಶ್ನೆ ಸಹ ಮೂಡಿದೆ.ಆದರೆ, ಸ್ವೇಚ್ಛೆಗೆ ಅರ್ಥವೇನಿದೆ ಎಂಬುವುದನ್ನು ಬಹಳ ಜನ ಯೋಚಿಸಿದಂತೆ ಕಾಣಿಸುತ್ತಿಲ್ಲ. Liberty, Equality, Fraternity ಎಂಬುದು ಫ್ರೆಂಚ್ ವಿಪ್ಲವ ಘೋಷಣೆ.ಈ ಮೂರು ಅಂಶಗಳಿಗೆ ಒಂದು ಕ್ರಮ ಇದೆ.ಮೂರೂ ಬೇರೆ ಬೇರೆ ವಿಷಯಗಳು.ಸ್ವೇಚ್ಛೆ, ಸಮಾನತೆ ಎಂದು ಬೇರೆ ಬೇರೆಯಾಗಿ ಕರೆದರೂ ಬಹಳ ಜನ ಆ ಎರಡು ಅಂಶಗಳಿಗೆ ಬಹಳ ಅಂತರವಿಲ್ಲದಂತೆ ಯೋಚಿಸುತ್ತಿದ್ದಾರೆ.ಸಮಾನತೆಯನ್ನು ಸಾಧಿಸಿಕೊಂಡರೆ ಸ್ವೇಚ್ಛೆ ಲಭ್ಯವಾಗುತ್ತದೆಂದು ಭಾವಿಸುವವರೂ ಇದ್ದಾರೆ. ಸಮಾನತೆ ಇಲ್ಲದೆ ಸ್ವೇಚ್ಛೆ ಇದ್ದರೂ, ಸ್ವೇಚ್ಛೆ ಇಲ್ಲದೆ ಸಮಾನತೆಗೆ ಅರ್ಥವಿರುವುದಿಲ್ಲ. ಅದು ಸಹ ಉಳಿಯುವುದಿಲ್ಲ. ಸಮಾಜದಲ್ಲಿ ಅಸಮಾನತೆಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸಾಧಿಸಬೇಕೆಂಬ, ಸಮಾನ ಹಕ್ಕುಗಳ ಅವಕಾಶಗಳು ಇದ್ದ ವ್ಯಕ್ತಿಗಳು ಪರಸ್ಪರ ಸಹಕಾರದಿಂದ ಬದುಕಬೇಕೆಂದುಕೊಂಡಾಗ ವ್ಯಕ್ತಿ ಮೊದಲು ಸಾಧಿಸಬೇಕಾದದ್ದು ಸ್ವೇಚ್ಛೆ. ಈ ಸ್ವೇಚ್ಛೆ ಯಾರೋ ಒಬ್ಬರು ಕೊಡುವುದಲ್ಲ. ಯಾರಿಂದಲೋ ಸಾಧಿಸಿಕೊಳ್ಳುವಂತಹದಲ್ಲ. ನಮ್ಮ ಅಗತ್ಯಗಳನ್ನು, ನಮ್ಮ ಅಸ್ತಿತ್ವವನ್ನು, ನಮಗೆ ಅಗತ್ಯವಾದ ವಿಷಯಗಳನ್ನು, ನಾವು ಗುರುತಿಸುವುದೇ ಸ್ವೇಚ್ಛೆ.ನಿಜವಾಗಲೂ ಇದನ್ನು ಸಾಧಿಸುವುದೇ ಬಹಳಷ್ಟು ಕಷ್ಟ.ನಮ್ಮಿಂದ ನಮಗೆ ಸ್ವೇಚ್ಛೆ, ನಮಗೆ ಹುಟ್ಟಿನಿಂದ ಅಭ್ಯಾಸವಾದ ಯೋಚನೆಯಿಂದ, ಅಭಿಪ್ರಾಯಗಳಿಂದ, ಆಚಾರಗಳಿಂದ ಸ್ವೇಚ್ಛೆ.ನಮ್ಮಲ್ಲಿ ಜೀರ್ಣಗೊಂಡ ನಂಬಿಕೆಗಳಿಂದ ಬಿಡುಗಡೆ.ಸಾಮಾಜಿಕ ಬದಲಾವಣೆ ಅನಿವಾರ್ಯವಾದಾಗ ಪ್ರಜೆಗಳಲ್ಲೇ ಈ ಸ್ವೇಚ್ಛಾಕಾಂಕ್ಷೆ ಹುಟ್ಟಿ ಬರುತ್ತದೆ.ಸಮಾಜದ ಬಗ್ಗೆ, ಸಮಾಜದಲ್ಲಿ ತನ್ನ ಅಸ್ತಿತ್ವದ ಬಗ್ಗೆ, ತನಗೂ ಸಮಾಜಕ್ಕೂ ಇರುವ ಸಂಬಂಧದ

ಬಗ್ಗೆ, ಆ ಸಂಬಂಧಗಳಲ್ಲಿರುವ ಶೋಷಣೆ, ದಮನಿಕೆ ಕುರಿತು ಪ್ರಶ್ನಿಸಿಕೊಂಡು ಉತ್ತರವನ್ನು ಹುಡುಕುವ ಪ್ರಯತ್ನ ಮಾಡುವವರು ಸ್ವೇಚ್ಛಾ ಪಥಗಾಮಿಗಳು. ಅವರ ಬದುಕಿನಲ್ಲಿ ಸಂಘರ್ಷಣೆಗಳಿರುತ್ತವೆ ಆದರೆ ಸಂಕ್ಷೋಭೆಗಳಿರುವುದಿಲ್ಲ. ಸಂಕ್ಷೋಭೆಯ ದೆಸೆಯನ್ನು ದಾಟುವ ಕ್ರಮವನ್ನು ಅರುಣಾಳ ಜೀವನವನ್ನು ಆಧರಿಸಿಕೊಂಡು ನಾನು ಈ ಕಾದಂಬರಿಯನ್ನು ಬರೆದಿದ್ದೇನೆ. ಅರುಣಾ ಕಾದಂಬರಿಯ ಕೊನೆಗೆ ಸಂಕ್ಷೋಭೆಯ ದೆಸೆಯನ್ನು ದಾಟಿ ಸಂಘರ್ಷಣೆಯಲ್ಲಿ ಆನಂದವನ್ನು ಹೊಂದಬಲ್ಲ ಹಂತದವರೆಗೆ ಬಂದಿದ್ದಾಳೆ. ಈ ಸ್ವೇಚ್ಛೆ ಎಂಬ ಭಾವವನ್ನು ಅರ್ಥಮಾಡಿಕೊಳ್ಳದೆ, ಜೀವನದಲ್ಲಿ ಅದನ್ನು ಹೊಂದದೆ, ಅನುಭವಿಸದೇ ನಾವು ಮಾಡುವ ಹೋರಾಟಗಳಿಗೆ ಅರ್ಥವಿರುವುದಿಲ್ಲ. ಯಾವ ಅಸಮಾನತೆಗಳರೂಪ ಬದಲಾಯಿಸಬೇಕೆಂದು ಹೋರಾಟ ಮಾಡುತ್ತೇವೆಯೋ ಅವುಗಳನ್ನು ಮತ್ತೊಂದು ರೀತಿಯಲ್ಲಿ ತಂದಿಡುವ ಹೋರಾಟವಾಗುತ್ತಿದೆ ಈ ಸ್ವೇಚ್ಛೆ ಇಲ್ಲದಿದ್ದರೆ ಪ್ರತಿಯೊಬ್ಬ ವ್ಯಕ್ತಿ ತನ್ನ ಸ್ವೇಚ್ಛೆಯನ್ನು– ತಾನು ಯಾರಿಗೂ, ಯಾವ ಯಜಮಾನಿಕೆಗೂ ತಲೆಬಾಗಿರದ ಸ್ವೇಚ್ಛೆಯನ್ನು ಸಾಧಿಸಿಕೊಳ್ಳಬೇಕು.ಆ ಸ್ವೇಚ್ಛೆಯನ್ನು ಸಾಧಿಸಿಕೊಳ್ಳುವ ಕ್ರಮದಲ್ಲಿ ವ್ಯಕ್ತಿಗೆ ತನ್ನ ಸ್ವೇಚ್ಛೆ ಇತರರಿಗೆ ಅಪಚಾರ ಮಾಡಬಾರದೆಂಬ ವಿಷಯ ಅರ್ಥವಾಗುತ್ತದೆ.ಸ್ವೇಚ್ಛೆಯಲ್ಲಿರುವ ಜವಾಬ್ದಾರಿ ಸ್ವೇಚ್ಛಾರಾಹಿತ್ಯದಲ್ಲಿ ಇರಲಾರದು. ಸ್ವೇಚ್ಛಾನಂತರ ಜೀವನದಲ್ಲಿ ವ್ಯಕ್ತಿ ತನ್ನಷ್ಟಕ್ಕೆ ತಾನು, ಸಮಾಜಕ್ಕೆ ಜವಾಬ್ದಾರನಾಗುತ್ತಾನೆ. ಆದ್ದರಿಂದ ಸ್ವೇಚ್ಛೆಯನ್ನು ಸರಿಯಾಗಿ ಅರ್ಥಮಾಡಿಕೊಂಡವರಿಗೆ ಜವಾಬ್ದಾರಿ ರಹಿತವಾದ ಸ್ವೇಚ್ಛೆ ಎಂಬುದು ಇರಲಾರದೆಂದು. ಜವಾಬ್ದಾರಿರಾಹಿತ್ಯವೆಂದರೆ ಯಾವುದೋ ಒಂದಕ್ಕೆ ದಾಸ್ಯವಾಗಿರುವುದೇ ಎಂದು ಅರ್ಥವಾಗುತ್ತದೆ. ಮಹಿಳೆಯರು ಸ್ವೇಚ್ಛೆಯಿಲ್ಲದೆ, ಸಮಾಜವು ಅವರಿಗೆ ನಿರ್ದೇಶಿಸಿದ ಕೆಲಸಗಳನ್ನು ಪ್ರಶ್ನಿಸದೆ, ಆ ಕೆಲಸಗಳು ತಮ್ಮನ್ನೇನು ಮಾಡುತ್ತವೆಯೋ, ತಮ್ಮ ಅಸ್ತಿತ್ವವನ್ನು ಹೇಗೆ ಅರ್ಥರಹಿತವಾಗಿಸುತ್ತವೆಯೋ ಅದನ್ನು ತಿಳಿದುಕೊಳ್ಳದೆ ಇರುವುದೆಂದರೆ ಬಹಳ ಬೇಜವಾಬ್ದಾರಿಯಿಂದ ಇರುವುದು.ಹುಟ್ಟಿದ್ದು ಮದುವೆ ಮಾಡಿಕೊಳ್ಳುವುದಕ್ಕಾಗಿಯೇ ಎಂಬಂತೆ ಬದುಕುವ ಮಹಿಳೆಯರು, ಅದಕ್ಕಿಂತ ತಮ್ಮ ಜೀವನಗಳಿಗೆ ಬೇರೊಂದು ಪರಮಾರ್ಥ ಇಲ್ಲವೆಂದು, ಕುಟುಂಬಗಳಲ್ಲಿಯ ಶಾಂತಿಯನ್ನು ಕಾಪಾಡಿಕೊಳ್ಳುವುದೇ ತಮಗೆ ಶಾಂತಿ ಎಂದುಕೊಂಡು ಬದುಕುವ ಸ್ತ್ರೀಯರು ಬಹಳ ಬೇಜವಾಬ್ದಾರರಾಗಿ ಬದುಕುತ್ತಿದ್ದಾರೆ. ಅವರಿಗೆ ಅವರ ಮೇಲೆ, ಸಮಾಜದ ಮೇಲೆ ವಿಮುಖತೆಯೇ ಹೊರತು ಆಸಕ್ತಿ ಇಲ್ಲ. ಸಮಾಜ ಬದಲಾಗಬೇಕೆಂದು ಬಯಸುವ ಪುರುಷರೂ ಸಹ ಆ ಬದಲಾವಣೆಯನ್ನು ತಾವು ತರುತ್ತೇವೆಂದು, ಸ್ತ್ರೀಯರು ಅಗತ್ಯವಾದಾಗ ತಮಗೆ ಸಹಕರಿಸಿ ಕುಟುಂಬದಲ್ಲಿ ಅವರ ಪಾತ್ರ ಅವರು ಪೋಷಿಸಿದರೆ ಸಾಕೆಂದು ಬಹಳ ಬಲವಾಗಿ ನಂಬುತ್ತಾರೆ. ಮುಖ್ಯವಾಗಿ ಬದಲಾಗಬೇಕಾದದ್ದು ತಮ್ಮ ಬದುಕುಗಳೆಂದು, ತಮ್ಮ ಬದುಕುಗಳ ಬಗ್ಗೆ ಪುರುಷರ ಅಭಿಪ್ರಾಯಗಳೆಂದು ಮಹಿಳೆಯರು ಗ್ರಹಿಸುವುದೆಂದರೆ ಈ ಪುರುಷಾಧಿಪತ್ಯ ಸಮಾಜಕ್ಕೆ ಬಹಳ ದೊಡ್ಡ ಪ್ರಮಾದ.

ತಮ್ಮ ಮೇಲೆ ತಮಗೊಂದು ಜವಾಬ್ದಾರಿ, ಸಮಾಜದ ಮೇಲೆ ಒಂದು ಜವಾಬ್ದಾರಿ ಇದೆಯೆಂಬ ಯೋಚನೆಯು ಆಳದಿಂದ ಬರಲಾರದೆ ಸ್ವೇಚ್ಛೆಯನ್ನು ಯಾರೂ ಆಕಾಂಕ್ಷಿಸಲಾರರು.ಈ ಜವಾಬ್ದಾರಿಗಳ ವಿಷಯದಲ್ಲಿಯೇ ಬಹಳ ಜನರಿಗೆ

ಸಮಸ್ಯೆಯಾಗುತ್ತದೆ.ಈ ಮೊದಲೇ ಹೇಳಿದಂತೆ ಮದುವೆಯಾಗಿ ಗಂಡನ ಜೊತೆ ಸಂಸಾರ ಮಾಡುವ, ಮಕ್ಕಳನ್ನು ಹೆತ್ತು, ಬೆಳೆಸುವುದೇ ತಾನೆ ಮಹಿಳೆಯ ಜವಾಬ್ದಾರಿಯೆಂದು ಪ್ರಶ್ನಿಸುತ್ತಾರೆ.ಈ ಜವಾಬ್ದಾರಿಯನ್ನು ಆಕೆ ಇಷ್ಟದಿಂದ ಸ್ವೀಕರಿಸಿದ್ದಾ, ಆಕೆ ಆಯ್ದುಕೊಂಡಿದ್ದಾ ಇಲ್ಲವೆ ತಲೆತಲೆಮಾರುಗಳಿಂದ ಪಿತೃಸ್ವಾಮ್ಯ ಸಮಾಜವು ಸ್ತ್ರೀಯರ ಮೇಲೆ ಈ ಜವಾಬ್ದಾರಿಯನ್ನು ವಹಿಸಿದೆಯಾ ಎಂಬ ಪ್ರಶ್ನೆಯೇ ಮೊದಲ ಪ್ರಶ್ನೆಗೆ ಉತ್ತರವಾಗಿ ಬರುತ್ತದೆ. ಈ ಪ್ರಶ್ನೆಗೆ ಉತ್ತರ ಹುಡುಕುತ್ತಾ ಹೋದರೆ, ಪಿತೃಪ್ರಧಾನ ಸಮಾಜದ ಮೂಲಗಳಿಂದ ಕದಲಿ ನಮ್ಮ ಕೈಗೆ ಸೇರುತ್ತವೆ. ಮಹಿಳೆಯ ದಮನಿಕೆಯ ಕ್ರಮಗಳನ್ನೆಲ್ಲ, ಆ ಚರಿತ್ರೆಯನ್ನೆಲ್ಲಾ ನಾವು ಅರ್ಥಮಾಡಿಕೊಳ್ಳಬೇಕಾಗುತ್ತದೆ.ಆಗ ಪುನರುತ್ಪತ್ತಿ ರಾಜಕೀಯಗಳ ಪ್ರಾಂಗಣದೊಳಗೆ ನಾವು ಪ್ರವೇಶಿಸುತ್ತೇವೆ. ಕುಟುಂಬದಲ್ಲಿಯ ಕಂಟ್ರೋಲ್, ಅಧಿಕಾರ, ಲೈಂಗಿಕ ಸಂಬಂಧಗಳ ಚರ್ಚಾವೇದಿಕೆ ನಮಗಾಗಿ ಸಿದ್ಧವಾಗುತ್ತದೆ.ಈ ಲೈಂಗಿಕತೆ ಪುನರುತ್ಪತ್ತಿ ಕಾರ್ಯಕ್ರಮವು ಸ್ತ್ರೀಯರ ಜೀವನವನ್ನು ಅಜ್ಞೆಮಾಡಿ ಅವರ ಬದುಕುಗಳಿಗೆ ಒಂದು ಸಾಂಸ್ಕೃತಿಕ ರೂಪವನ್ನು ಕೊಡುತ್ತದೆ ಎಂಬ ವಿಷಯ ನನಗೆ ಈ ಚರ್ಚೆಯಲ್ಲಿ ಅರ್ಥವಾಗುತ್ತದೆ.ಆ ವಿಷಯ ಗೊತ್ತಾದ ಮೇಲೆ ಸತಿತ್ವ, ತಾಯ್ತನ, ವೇಶ್ಯಾವಾಟಿಕೆ, ಎಲ್ಲವು ಸ್ತ್ರೀಯರಿಗೆ ಹೊರಿಸಲ್ಪಟ್ಟ ಶಿಲುಬೆಗಳೆಂದು, ಮುಳ್ಳು ಕಿರೀಟಗಳೆಂದು ನಿಜವಾಗಿ ಸ್ತ್ರೀಯರು ಆಯ್ದುಕೊಂಡ ಜವಾಬ್ದಾರಿಗಳಲ್ಲವೆಂದು ಅರ್ಥವಾಗುತ್ತದೆ. ನಿಜವಾಗಿ ಆಯ್ದುಕೊಳ್ಳುವ ಸ್ವೇಚ್ಛೆ ಹೇಗೆ, ಯಾವಾಗ ಸಾಧಿಸಿಕೊಳ್ಳಬಲ್ಲೆವೆಂದು ಆತುರ ಪಡುತ್ತೇವೆ. ಈ ಜವಾಬ್ದಾರಿ ಬಲವಂತವಾಗಿ ವಿಧಿಸಿದವೆಂಬ ವಿಷಯ ಬಹಳ ಜನ ಮಹಿಳೆಯರಿಗೆ ಅವರ ಜೀವನಾನುಭವಗಳ ಮೂಲಕ, ಉಸಿರಾಡದ ದಮನಿಕೆ, ಅಸ್ತಿತ್ವವನ್ನು ನಾಶಮಾಡುವ ಹಿಂಸೆ– ಇವುಗಳ ಮೂಲಕ ಅರ್ಥವಾಗುತ್ತವೆ. ಅವರು ಜೀವನದಲ್ಲಿ ಸಂಕ್ಷೋಭೆಗೆ ಗುರಿಯಾಗುತ್ತಾರೆ.

ಆ ಸಂಕ್ಷೋಭೆಯಿಂದ ತಮ್ಮ ದಮನಿಕೆಯನ್ನು ನಿರ್ದೇಶಿಸಿ ಮುಂದುವರೆಸುತ್ತಿರುವ ಸಾಮಾಜಿಕ ಚಲನಸೂತ್ರಗಳನ್ನು ಕಂಡುಹಿಡಿಯಬೇಕೆಂಬ ಬಯಕೆ ಉಂಟಾದಾಗ ಆ ಸಂಕ್ಷೋಭೆಯಲ್ಲಿ ಸಂಘರ್ಷಣೆಗೆ ಒಳಗಾಗುತ್ತಾರೆ. ಸಂಘರ್ಷಣೆಗೆ ಒಳಗಾಗುವುದೇ ಸ್ವೇಚ್ಛಾಕಾಂಕ್ಷೆಯ ಸಂಕೇತ.ವ್ಯಕ್ತಿಗಳ ಸ್ವೇಚ್ಛಾಕಾಂಕ್ಷೆಗೆ, ಸಾಮಾಜಿಕವಾಗಿರುವ ನಿರ್ಬಂಧಗಳಿಗೆ ಒಂದು ಘರ್ಷಣೆ ಸದಾ ಇರುತ್ತದೆ.

ಸ್ವೇಚ್ಛ

ಸ್ತ್ರೀಯರ ವಿಷಯಗಳಲ್ಲಿ ಈ ಘರ್ಷಣೆ ಇನ್ನಷ್ಟು ಅಧಿಕ.ಈ ಘರ್ಷಣೆ ಬಹಳ ಮೌಲಿಕವಾದದ್ದು.ಸಮಾಜವು ಮತ್ತಷ್ಟು ಪ್ರಜಾಪ್ರಭುತ್ವದ ರೀತಿಯಲ್ಲಿ ಬದಲಾಗಲು, ವ್ಯಕ್ತಿಗಳ ಬದುಕುಗಳು ಮತ್ತಷ್ಟು ಸುಖವಾಗಿ ಸಾಗಲು ಈ ಘರ್ಷಣೆ ಅತ್ಯವಶ್ಯ.ಎಲ್ಲರಿಗೆ ಆಮೋದ ಯೋಗ್ಯವಾದ ವಿಧಾನವು ಯಾವುದೂ ಇರಲಾರದು.ವ್ಯಕ್ತಿಗಳ ಸ್ವೇಚ್ಛೆಗೆ ಸಾಮಾಜಿಕ ಜವಾಬ್ದಾರಿಯನ್ನು ನಾವು ಅಂದುಕೊಳ್ಳುವುದರ ಮಧ್ಯೆ ಇರುವ ಘರ್ಷಣೆಯನ್ನು ರಾಜಕೀಯವಾಗಿಸಿಕೊಳ್ಳುವುದರಲ್ಲಿಯೇ ಸ್ತ್ರೀವಾದದ ಪ್ರತ್ಯೇಕತೆಯಿದೆ.

ಈ ಕಾದಂಬರಿಯಲ್ಲಿ ಅರುಣಾ ಇಂದಿನ ಮಧ್ಯಮವರ್ಗಕ್ಕೆ ಸೇರುವ ಆಧುನಿಕ ಸ್ತ್ರೀ. ಈ ಸ್ತ್ರೀಯರು ವಿದ್ಯಾವಂತರಾಗುತ್ತಿದ್ದಾರೆ. ವಿವಿಧ ಉದ್ಯೋಗಗಳನ್ನು ನಿರ್ವಹಿಸಿ ಆರ್ಥಿಕವಾಗಿ ಸ್ವತಂತ್ರರು ಎಂದುಕೊಳ್ಳುತ್ತಿದ್ದಾರೆ. ಅವರ ವಿದ್ಯಾಭ್ಯಾಸವಲ್ಲಿ, ಉದ್ಯೋಗದಲ್ಲಿ ಅವರನ್ನು ಗುರುತಿಸುವುದು, ಸ್ವಲ್ಪಮಟ್ಟಿಗೆ ಬೆಳೆದವರ ಸಂದರ್ಭದಲ್ಲಿ, ಸ್ವತಂತ್ರವಾಗಿ ಯೋಚಿಸಬಲ್ಲ ಬುದ್ಧಿ, ಅದರಿಂದ ಬೆಳೆದ ಆತ್ಮಗೌರವ, ವಿವಿಧ ಸಾಮಾಜಿಕ ಸಂಬಂಧಗಳಿಗೆ ಹೋಗುವ ಅವಕಾಶ ಇವೆಲ್ಲವೂ ಅವರ ಮೇಲೆ ಪ್ರಭಾವ ಬೀರುತ್ತವೆ. ಅವರ ಸ್ವಭಾವವನ್ನು, ಜೀವನದ ಬಗ್ಗೆ ಅವರ ದೃಕ್ಪಥವನ್ನು ಬದಲಾಯಿಸುತ್ತವೆ. ಕುಟುಂಬದ ಬಗ್ಗೆ ಅದರಲ್ಲಿಯ ಅಧಿಕಾರದ ಬಗ್ಗೆ ಸಂಪ್ರದಾಯ ಭಾವಗಳಿಗೆ ತಲೆಬಾಗಿಸದ ಹೊಸ ಯೋಚನೆಗಳನ್ನು ಮಾಡುತ್ತಾರೆ. ಸಾಂಸ್ಕೃತಿಕವಾಗಿ ತಮ್ಮ ಮೇಲೆ ಬಲವಂತವಾಗಿ ಹೇರಲ್ಪಟ್ಟ ವಿಚಾರವನ್ನು ಪ್ರಶ್ನಿಸುವುದು ಪ್ರಾರಂಭವಾಗುತ್ತದೆ.ಯಾವಾಗ ಅಮಲಿನಲ್ಲಿರುವ ಯೋಚನೆಯನ್ನು ಪ್ರಶ್ನಿಸುತ್ತಾರೋ ಆಗ ವ್ಯಕ್ತಿಗತ ಸ್ಥಾಯಿಯಲ್ಲಿ, ಸಾಮಾಜಿಕ ಸ್ಥಾಯಿಯಲ್ಲಿ ಘರ್ಷಣೆ ಆರಂಭವಾಗುತ್ತದೆ. ಮನೆಯಲ್ಲಿ ವಿಧೇಯವಾಗಿ ತಗ್ಗಿ ಬಗ್ಗಿ ಪರಾಧೀನವಾಗಿರುವ ಸ್ತ್ರೀ, ಉದ್ಯೋಗದಲ್ಲಿ ಧೈರ್ಯವಾಗಿ, ನೈಪುಣ್ಯತೆವುಳ್ಳವಳಾಗಿ, ಹಠದಿಂದ ಲಕ್ಷ್ಯವನ್ನು ಸಾಧಿಸುವವಳಂತೆ, ಬುದ್ಧಿಯಿಂದ ಜವಾಬ್ದಾರಿಯಿಂದ ಪ್ರವರ್ತಿಸಬೇಕು. ಉದ್ಯೋಗದಲ್ಲಿ, ಸಮಾಜದಲ್ಲಿ ಇಷ್ಟೊಂದು ಬುದ್ಧಿವಂತಿಕೆಯಿಂದ, ಜವಾಬ್ದಾರಿಯಿಂದ ಪ್ರವರ್ತಿಸುವುದನ್ನು ಕಲಿತ ಮಹಿಳೆ ಆ ತಿಳುವಳಿಕೆಯನ್ನು, ಜವಾಬ್ದಾರಿಯನ್ನು ಮನೆಗೂ ಸಹ ಹೊತ್ತು ತರುತ್ತಾಳೆ.ಕುಟುಂಬದ ಹಿರಿಯರನ್ನು ಧೈರ್ಯದಿಂದ ಪ್ರಶ್ನಿಸುತ್ತಾಳೆ.ಅದರಿಂದಲೇ ಉಂಟಾಗುತ್ತವೆ ಸಮಸ್ಯೆ.ಸುಮಾರು ಐವತ್ತು ವರ್ಷಗಳಿಂದ ಸಾಮಾಜಿಕ ಜೀವನದಲ್ಲಿ ಉದ್ಯೋಗ, ವ್ಯವಹಾರ ರಂಗಗಳಿಗೆ ಸ್ತ್ರೀ ಬರುವುದು ದಿನೇ ದಿನೇ ಹೆಚ್ಚಾಗುತ್ತಿದೆ.ಸ್ತ್ರೀಯರ ಮೇಲೆ ಅನೇಕ ಹೊಸ ವಿಧಿಗಳು, ಕೆಲಸಗಳು ಬಂದುಸೇರುತ್ತವೆ– ಹಳೆಯವು ಮಾತ್ರ ಒಂದೂ ಸಹ ಕಳೆದುಹೋಗುತ್ತಿಲ್ಲ. ಈ ಪೂರ್ಣಭಾರದಿಂದ ಗಾಬರಿಗೊಳ್ಳುತ್ತಿರುವ ಮಹಿಳೆಯರು ಆ ಭಾರವನ್ನು ಇಳಿಸಿಕೊಳ್ಳುವ ಮಾರ್ಗಗಳ ಸಲುವಾಗಿ ಹುಡುಕುತ್ತಿದ್ದಾರೆ.ತಮ್ಮನ್ನು ತಾವು ಪೋಷಿಸಿಕೊಂಡು, ರಕ್ಷಿಸಿಕೊಳ್ಳಬಲ್ಲೆವೆಂಬ ಸ್ತ್ರೀಯರು ದೃಷ್ಟಿಯನ್ನು ತಮ್ಮ ಮೇಲಿಂದ ಸಮಾಜದ ಮೇಲೆ ಹೊರಳಿಸುತ್ತಾರೆ.ಇಂಥ ಹೊಸ ಸ್ತ್ರೀಯರು ಅನುಭವಿಸುವ ಕ್ಷೋಭೆಯನ್ನು, ಎದುರಿಸಬೇಕಾದ ಸಮಸ್ಯೆಗಳನ್ನು ಸ್ವಲ್ಪಮಟ್ಟಿಗೆ ಈ 'ಸ್ವೇಚ್ಛೆ' ಕಾದಂಬರಿಯಲ್ಲಿ ಸೆರೆ ಹಿಡಿಯಲಾಗಿದೆ.

ಅರುಣಾ ಬಾಲ್ಯದಿಂದ ತಾನು ತುಳಿತಕ್ಕೆ ಒಳಗಾಗಿದ್ದೇನೆಂದು ಗುರುತಿಸಿದ್ದಾಳೆ. ಆ ತುಳಿತದಿಂದ ಭಯಪಡುವ ಪ್ರಯತ್ನ ಮಾಡಿದಳು.ಆ ಪ್ರಯತ್ನಗಳು ಒಂದು ಸಾರಿ

ಪುನಃ ಆಕೆಯನ್ನು ತುಳಿತದಚಕ್ರದೊಳಗೆ ತಂದು ಹಾಕಿದವು.ತಂದೆ, ಸೋದರತ್ತೆಯರ ನಿರ್ಬಂಧನೆಗಳಿಲ್ಲದಿದ್ದರೆ, ತನಗೆ ಆರ್ಥಿಕ ಸ್ವಾತಂತ್ರವಿದ್ದರೆ ತನ್ನ ಜೀವನ ನೆಮ್ಮದಿಯಿಂದ ಸಾಗುತ್ತದೆಂದು ಮೊದಲು ಭಾವಿಸಿದಳು. ಆ ಎರಡನ್ನೂ ಸಾಧಿಸಿದಳು.ಪ್ರಕಾಶನನ್ನು ಮದುವೆಯಾಗುವುದರಿಂದ ಸ್ವೇಚ್ಛೆ ಹೊಂದುವೆನೆಂದುಕೊಂಡ ಆಕೆಯ ಭ್ರಮೆಗಳು ಎರಡು ತಿಂಗಳಲ್ಲೇ ನಿರಸನಗೊಂಡವು.ಆಕೆ ಗರ್ಭವತಿಯಾದರೆ– ಅಬಾರ್ಷನ್ ಮಾಡಿಸಿಕೊಳ್ಳಬೇಕು ಎಂದುಕೊಂಡರೆ ಸಾಧ್ಯವಿಲ್ಲ ಎಂದನು ಪ್ರಕಾಶ. ಸಾಧ್ಯವಿಲ್ಲ ಎನ್ನುವುದರಲ್ಲಿ ಆತನು ತೋರಿದ ಅಧಿಕಾರ ಅರುಣಾಳನ್ನು ಬಹಳ ಕಳವಳಗೊಳಿಸಿತು.

ತಾನು ಉದ್ಯೋಗಮಾಡಿದರೂ, ಹೊರಗಿನ ಪ್ರಪಂಚದ ಜೊತೆಗಿನ ಸಂಬಂಧಗಳಲ್ಲಿ ಇದ್ದರೂ ತನ್ನ ಪ್ರಧಾನ ಕರ್ತವ್ಯ ಮಾತೃತ್ವವೆಂದು ಅರುಣಾಳಿಗೆ ತಿಳಿಯುತ್ತಿದೆ. ಹಾಗೆ ತನ್ನ ಸಂಪಾದನೆಯ ಮೇಲೆ ತನಗೆ ಅಧಿಕಾರ ಇಲ್ಲವೆಂದು, ತನಗೆ ಕುಟುಂಬದಿಂದ ಬೇರೆಂದರಾಗಿ, ಒಬ್ಬ ವ್ಯಕ್ತಿಂದರಾಗಿ ಸಮಾಜದೊಂದಿಗೆ ಪ್ರತ್ಯಕ್ಷ ಸಂಬಂಧಗಳ ವ್ಯಾಪ್ತಿಗೆ ಒಳಗಾಗುವ ಅವಕಾಶವೂ ಸಹ ಇಲ್ಲವೆಂದು ಗೊತ್ತಾಗುತ್ತದೆ.



ಈ ವಿಷಯಗಳಾವವೂ ಇಲ್ಲದಿದ್ದರೆ ಇವುಗಳನ್ನು ಲಕ್ಷ್ಯವಹಿಸದಿದ್ದರೆ ಸಂಬಳ ತಂದು ಗಂಡನಿಗೆ ಕೊಟ್ಟು, ಮಕ್ಕಳನ್ನು ಹೆತ್ತು, ಅವರನ್ನು ಓದಿಸುತ್ತಾ, ಮನೆಯಲ್ಲಿ ಯಾರಿಗೆ ಏನೂ ಕಡಿಮೆಯಾಗದಂತೆ, ಸಮಸ್ಯೆಯಾಗದಂತೆ ನೋಡಿಕೊಂಡರೆ ಆಕೆಯ ಜೀವನ "ಶಾಂತಿ"ಯಿಂದ ಸಾಗಿಹೋಗುವುದು.ಪ್ರಕಾಶ ಬಹಳ ಒಳ್ಳೆ ಗಂಡನು ಎನಿಸಿಕೊಳ್ಳುತ್ತಿದ್ದ.ಯಾವಾಗ ಅರುಣಾ ತಾನೊಬ್ಬ ಪ್ರತ್ಯೇಕ ವ್ಯಕ್ತಿಯೆಂದು, ತನಗೆ ಕೆಲವು ಅಭಿರುಚಿಗಳು, ಆಸಕ್ತಿಗಳು, ಶಕ್ತಿಗಳು ಇವೆಯೆಂದು, ತನ್ನನ್ನು ತಾನು ರೂಪಿಸಿಕೊಳ್ಳಬೇಕೆಂಬ ಬಯಕೆ ಇದೆಯೆಂದು ವ್ಯಕ್ತಿಯಾಗಿ ತನ್ನಬದುಕಿಗೆ ಅವು ಅತ್ಯಂತ ಅಗತ್ಯವೆಂದು ಗ್ರಹಿಸಿದಳೋ ಆಗ ಆಕೆಯ ಕುಟುಂಬದಲ್ಲಿನಶಾಂತಿ ನಾಶವಾಯಿತು.ಇಲ್ಲಿನಮಗೆ ಎರಡುವಿಷಯಗಳು ಅರ್ಥವಾಗುತ್ತವೆ. ಒಂದು ಕುಟುಂಬವುವ್ಯಕ್ತಿಯಾಗಿ ಸ್ತ್ರೀಗೆ ಇರುವಸ್ಥಾನವನ್ನು ಇಲ್ಲದಂತೆ ಮಾಡುತ್ತದೆ.

ಎರಡನೆಯದು- ಹಾಗೇ ಮಾಡಿ ಆಕೆಯನ್ನು ವ್ಯಕ್ತಿಯಾಗಿ ನಾಶಮಾಡುವುದರಿಂದ ಮಾತ್ರವೇ ತಾನು ಶಾಂತಿಯಿಂದ ಸ್ಥಿರವಾಗಿ ಇರಲು ಸಾಧ್ಯವಾಗುತ್ತದೆ ಕುಟುಂಬ. ಸ್ವಲ್ಪಮಟ್ಟಿಗೆ ಇದನ್ನು ಅರ್ಥಮಾಡಿಕೊಂಡ ಅರುಣಾ ಕುಟುಂಬವನ್ನು ಬಿಟ್ಟು ಬಂದಳು.

ಹೀಗೆ ಒಂದು ಸಾಮಾನ್ಯ ಮಧ್ಯಮವರ್ಗದ ಸ್ತ್ರೀಯ ತೀರ ಸಾಮಾನ್ಯ ವಿಷಯಗಳಿಗೆ, ಎಲ್ಲ ಕುಟುಂಬಗಳಲ್ಲಿ ಸರ್ವೇಸಾಧಾರಣವಾಗಿ ನಡೆಯುವ ವಿಷಯಗಳಿಗೆ ಪ್ರತ್ಯಕ್ಷವಾಗಿ ಎದ್ದು ಕಾಣುವಂತೆ ಕಾಣಿಸದ ಹಿಂಸೆಯನ್ನು, ಎಲ್ಲರಿಗೆ ಸಾಮಾನ್ಯವಾಗಿ ನ್ಯಾಯಬದ್ಧವಾಗಿ, ಧರ್ಮಬದ್ಧವಾಗಿ ಎನಿಸುವ ಹಿಂಸೆಯನ್ನು ಹೊರತೆಗೆದು ದೊಡ್ಡ ವಿಷಯವಾಗಿ ತೋರಿಸುವುದರಿಂದ ಬಹಳ ಜನ ಸಹಿಸಿಕೊಳ್ಳಲಿಲ್ಲ. ಪ್ರಕಾಶನಂತಹ 'ಒಳ್ಳೇ ಗಂಡ' ನನ್ನೇ ಬೇಡವೆಂದುಕೊಂಡರೆ ಇನ್ನು ತಮ್ಮ ಪರಿಸ್ಥಿತಿ ಏನು ಎಂಬುವುದು ಅಂತರಾಳದ ಆಳದಲ್ಲಿ ಎಲ್ಲರನ್ನು ಚುಚ್ಚಿದೆ. ಹೀಗೆ ಸಮಾಜದ ಜೊತೆ ಸಂಬಂಧ ಬೇಕೆಂದು ಕುಟುಂಬಗಳನ್ನು ಬಿಟ್ಟರೆ ವ್ಯವಸ್ಥೆ ಏನಾಗಬೇಕೆಂಬ ಗೊಂದಲಕ್ಕೆ ಒಳಗಾದರು.

ಅರುಣಾ ಕುಟುಂಬವನ್ನು ಬಿಟ್ಟು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಸಮಾಜದಲ್ಲಿ ಚೈತನ್ಯವನ್ನು ತರಲು ಕೆಲಸ ಮಾಡುತ್ತಿರುವ ಸಂಘಗಳು ಹೆಂಗಸರ ಮೇಲೆ ವರ್ತಿಸುವ ರೀತಿಯನ್ನೂ ಸಹ ಪ್ರಶ್ನಿಸಿದ್ದಾಳೆ.ತನ್ನನ್ನು ವ್ಯಕ್ತಿಯಾಗಿ ಅಲ್ಲದೆ ಒಬ್ಬರ ಹೆಂಡತಿಯಾಗಿ ಮಾತ್ರ ನೋಡಿ, ಆ ಸತಿತ್ವವೇ ತನಗೆ ಮುಖ್ಯವೆಂದು ಹೇಳುವ ಸಂಘವನ್ನೂ ಸಹ ಬಿಟ್ಟಳು. ಈ ಸಂಘಟನಾ ರಾಜಕೀಯ ಪಾರ್ಟಿಗಳ ದನಿಗೆ ಅಡ್ಡಿಯಾಯಿತು.ಯಾಕೆಂದರೆ ವಾಮಪಕ್ಷ ರಾಜಕೀಯ ಪಾರ್ಟಿಗಳಿಗೂ ಸಹ ಸ್ತ್ರೀಯ ಸ್ಥಾನಮಾನವು ಚರ್ಚೆಯ ಅಂಶವೇ.ವಿಪ್ಲವ ಚಳುವಳಿಯಲ್ಲಿ.

ವಿಪ್ಲವ ಸಂಘಗಳಲ್ಲಿ ಕೆಲಸ ಮಾಡಿದ ಸ್ತ್ರೀಯರಿಗೆ ಆಯಾ ಚಳುವಳಿಗಳಲ್ಲಿಯೂ ಸಹ ಅಧಿಕಾರಗಳು, ಯಜಮಾನಿಕೆಗಳು ಪ್ರತಿಕೂಲಗಳಂತೆ ಎದುರಾಗಿವೆ. ಸ್ತ್ರೀಯರು 'ಒಳ್ಳೆಯ'ವರಾಗಿ 'ಕುಟುಂಬ ಸ್ತ್ರೀ'ಯರಾಗಿ ಮಾತ್ರ ತಮ್ಮ ಸಂಘಗಳಲ್ಲಿ ಕೂಡಿ ಕೆಲಸ ಮಾಡಬೇಕೆಂದು, ತಮ್ಮ ಸಂಘಗಳ 'ಮರ್ಯಾದೆ' ಕಾಪಾಡಬೇಕೆಂದು, ಕುಟುಂಬ ಗೌರವ ಕಾಪಾಡಿಕೊಳ್ಳಬೇಕೆಂದು, ಇಂಥ ಮಹಿಳೆಯರ ಬಗ್ಗೆ ರಾಜಕೀಯ ಪಾರ್ಟಿಗಳು ಮತ್ತೊಂದು ರಾಜಕೀಯ ಕುಟುಂಬ ವಿಚಾರಧಾರೆಯನ್ನು ತಯಾರು ಮಾಡಿಕೊಂಡಿವೆ. ಆ ಧೋರಣೆಯನ್ನು ಎತ್ತಿ ಅವಲೋಕಿಸಿ ವಿಮರ್ಶಿಸಿದ ಕಾದಂಬರಿಯಾಗಿ 'ಸ್ವೇಚ್ಛೆ' ಅವರಿಗೆ ಕಂಟಕಪ್ರಾಯವಾಗಿದೆ. ಅರುಣ ತಾನು ಕೆಲಸ ಮಾಡುತ್ತಿರುವ ಸಂಘದಿಂದ ಹೊರಗೆ ಬಂದಿದ್ದಾಳೆ. ಆದ್ದರಿಂದ ಇದು ವ್ಯಕ್ತಿವಾದವೆಂದು, ಈ ಕಾದಂಬರಿ ವ್ಯಕ್ತಿವಾದವನ್ನು ಪ್ರೋತ್ಸಾಹಿಸುತ್ತದೆಂದು ಹೇಳಿ ತಮ್ಮ ಭಾರವನ್ನು ಇಳಿಸಿಕೊಳ್ಳಲು ನೋಡಿದರು.ಹತ್ತು ಸಂಘಗಳನ್ನು, ಪಾರ್ಟಿಗಳನ್ನು ಬದಲಾಯಿಸಿದವರೂ ಸಹ. ತಾವು ಪಾರ್ಟಿಗಳಿಂದ ಸಂಘಗಳಿಂದ ಹೊರಗೆ ಬಂದರೆ ಅದು ಸಿದ್ಧಾಂತ ಭೇದಗಳಿಂದ ಎಂದು ಹೇಳಿ, ಅರುಣಾ ಅತಿ ಚಿಕ್ಕ ವ್ಯಕ್ತಿಗತ ವಿಷಯಕ್ಕಾಗಿ ಬಂದಿದ್ದಾಳೆಂದು, ಅವರಿಗೆ ವ್ಯಕ್ತಿಗತವೂ ಸಹ ರಾಜಕೀಯವೇ ಎಂಬ ರಾಜಕೀಯ ಸಿದ್ಧಾಂತವನ್ನು ಅರ್ಥಮಾಡಿಕೊಳ್ಳಿ ಎಂದು ಹೇಳುವುದೇ ಈ ಕಾದಂಬರಿಯ ಉದ್ದೇಶವೆಂದು ಪುನಃ ನೆನಪಿಸುತ್ತಿದ್ದೇನೆ. ಅರುಣಾ ಸಹ ತಮ್ಮಂತೆ ತನಗೆ ಇಷ್ಟವಾಗದ ಸಂಘದಿಂದಲೇ ಬಂದಿದ್ದಾಳೆಂದು, ಸ್ತ್ರೀಯರಿಗೂ

ಸಹ ಅಧಿಕಾರ, ಸ್ಥಳಾವಕಾಶವಿರುವ ಸಂಘವನ್ನು ನಿರ್ಮಿಸುವ ಆಲೋಚನೆ ಆಕೆಗೆ ಮೂಡಿದೆ ಎಂಬ ವಿಷಯವನ್ನು ಸ್ವಲ್ಪವೂ ಸಹ ಗಮನಿಸಲಾರರು. ಗಮನಿಸಿದರೆ ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳಬೇಕು. ಈ ಏಳು ವರ್ಷಗಳಿಂದ ರಾಜಕೀಯ ಪಾರ್ಟಿಗಳಲ್ಲಿ ಸ್ತ್ರೀಯರ ಸ್ಥಿತಿಯ ಬಗ್ಗೆ, "ಸ್ವೇಚ್ಛೆ" ಕಾದಂಬರಿ ಎತ್ತಿದ ಪ್ರಶ್ನೆಗಳ ಬಗ್ಗೆ ಚರ್ಚೆಗಳು ನಡೆಯುತ್ತಲೇ ಇವೆಯೆಂದರೆ, ಈ ಪ್ರಶ್ನೆಗಳು ವಾಸ್ತವವಾದವುಗಳೇ ಎಂಬ ವಿಷಯವನ್ನು ಈಗಲಾದರೂ ಎಲ್ಲರು ಗುರುತಿಸುತ್ತಾರೆಂದು ನಂಬಿದ್ದೇನೆ.

ಒಟ್ಟಿನಲ್ಲಿ ಕುಟುಂಬಗಳಲ್ಲಿ, ರಾಜಕೀಯದಲ್ಲಿ ಸ್ತ್ರೀಯರ ಅನುಭವಗಳನ್ನು ಸ್ತ್ರೀಯರ ದೃಷ್ಟಿಯಿಂದ ಹೇಳಿ ಆ ಅನುಭವಗಳ ಸಾರಾಂಶವನ್ನು ಹೊಸ ರೀತಿಯಲ್ಲಿ ಅರ್ಥಮಾಡಿಕೊಳ್ಳಬೇಕೆಂದು ಸೂಚಿಸುವುದು ಈ ಕಾದಂಬರಿಯ ಬಲ.ಪುರುಷಾಧಿಪತ್ಯವನ್ನು ಸಮರ್ಥಿಸುವವರಿಗೆ ಇಷ್ಟವಾಗದ ಅಂಶವೂ ಸಹ ಅದೇ.

ಈ ಕಾದಂಬರಿಯಲ್ಲಿಯ ಉಮಾ ಎಂಬ ಪಾತ್ರ ಮದುವೆ ಬೇಡವೆಂದು ತಾನು ಪ್ರೀತಿಸಿದ ಯುವಕನೊಂದಿಗೆ ಹೊಸ ಪದ್ಧತಿಯಲ್ಲಿ ಜೀವನ ನಡೆಸುವ ಪಾತ್ರವಾಗಿದೆ. ನಿಜವಾಗಿಯೂ ಮದುವೆಯಿಂದ ಸ್ವಾತಂತ್ರ್ಯ ಹೋಗುತ್ತದೆ ಎಂದುಕೊಂಡು ಮದುವೆ ಬೇಡವೆಂದುಕೊಂಡ ಪಾತ್ರಗಳು ತೆಲುಗು ಸಾಹಿತ್ಯಕ್ಕೆ ಹೊಸವಲ್ಲ. ಕೊಡವಗಂಟಿ ಕುಟುಂಬರಾವ ಅವರ ಕಾದಂಬರಿಗಳು, 'ನೀಕೆಂ ಕಾವಾಲಿ' (ನಿನಗೇನು ಬೇಕು)ಯಲ್ಲಿಯ ಕಸ್ತೂರಿ, 'ಎಂಡಮಾವುಲು' (ಮರೀಚಿಕೆ)ದಲ್ಲಿಯ ಸುಂದರಂ ಇಂಥ ಪಾತ್ರಗಳೆ. ಆದರೆ ಆ ಪಾತ್ರಗಳು ಕುಟುಂಬ ಜೀವನಕ್ಕೆ ಬಾಹ್ಯವಾಗಿರುವ ಪಾತ್ರಗಳು.ವೇಶ್ಯಾವೃತ್ತಿಯಿಂದ ಬಂದ ಪಾತ್ರಗಳು.ಆದ್ದರಿಂದ ಆ ಅಭಿಪ್ರಾಯಗಳು ಯಾರಿಗೂ ಹೆಚ್ಚಿಗೆ ಕಳವಳ ಉಂಟುಮಾಡಲಿಲ್ಲ. ವೇಶ್ಯೆ ಮದುವೆ ಮಾಡಿಕೊಳ್ಳದೆ ಇರುವುದು ಕುಟುಂಬ ವ್ಯವಸ್ಥೆಗೆ ಭದ್ರತೆ ತಾನೆ? ಆದರೆ ಕಸ್ತೂರಿಯನ್ನು, ಸುಂದರಂರನ್ನು ಆದರ್ಶವಾಗಿಟ್ಟುಕೊಂಡು ಕುಟುಂಬ ಸ್ತ್ರೀಯರು ಸಹ ಮದುವೆ ಇಲ್ಲದೆ ಗಂಡಸರೊಂದಿಗೆ ಸಂಬಂಧ ಬೆಳೆಸಲು ಸಿದ್ಧರಾಗುತ್ತಾರೆಂದು ಕೊಡವಗಂಟಿಯವರನ್ನು ಅಭಿಮಾನಿಸುವ ವಾಚಕರು ಊಹಿಸಿರಲಿಕ್ಕಿಲ್ಲ. ಉಮಾಳಂತಹ ಒಳ್ಳೆ ಕುಟುಂಬದಿಂದ ಬಂದ ಹುಡುಗಿ, ವಿದ್ಯಾವಂತಳು ಮದುವೆ ಬೇಡವೆಂದು, ಇಷ್ಟವಾದವನ ಜೊತೆ ಪ್ರೇಮ ಜೀವನದ ಹೊರತು ಕುಟುಂಬವನ್ನು ಬೇಡವೆಂದುಕೊಳ್ಳುವುದು ಬಹಳ ಅಲ್ಲೋಲ ಕಲ್ಲೋಲವನ್ನು ಉಂಟುಮಾಡುತ್ತದೆ. ಮಕ್ಕಳ ವಿಷಯವೇನೆಂಬ ಪ್ರಶ್ನೆ ಬಂದಿದೆ. ಆ ಪ್ರಶ್ನೆ 'ಸ್ವೇಚ್ಛೆ' ಕಾದಂಬರಿಯಿಂದ 'ಪ್ರಯೋಗ' ಕಥೆಯವರೆಗೂ ವೇದಿಸುತ್ತಲೇ ಬರುತ್ತಲಿದೆ. ಗಂಡಸನ್ನು ಒಂದು ಮನೆಯಲ್ಲಿ ಕಟ್ಟಿಹಾಕದಿದ್ದರೆ ಇಲ್ಲಿ ಈಕೆಗೆ ಮತ್ತೊಂದೆಡೆ ಮತ್ತೊಬ್ಬರಿಗೆ ಮಕ್ಕಳನ್ನು ಪಡೆಯುತ್ತಾ ಹೋದರೆ ಆ ಹೆಂಗಸರೆಲ್ಲ ಆತನ ಮಕ್ಕಳನ್ನು ಬೆಳೆಸಬೇಕಾ ಎಂಬ ಚೌಕಾಬಾರಾ ಪ್ರಶ್ನೆಗಳು ಸಹ ಬಂದಿವೆ. ಇಂಥ ಗಂಡಸರು ಅಮಾಯಕರಾದ ಹೆಂಗಸರನ್ನು ಹೀಗೆ ಅವಸ್ಥೆಗೆ ತಳ್ಳುತ್ತಲೇ ಇದ್ದಾರೆ ಎಂಬುವುದು ಒಂದು ವಿಷಯವಾದರೆ, ಅವಕಾಶ ಬಂದರೆ ಪ್ರತಿಯೊಬ್ಬ ಗಂಡಸು ಹೀಗೆ ಹೀನಾಯವಾಗಿ ಪ್ರವರ್ತಿಸುತ್ತಾನೆಂದು ಭಾವಿಸುವ ಇವರು ಸ್ತ್ರೀವಾದಿಗಳನ್ನು ಪುರುಷದ್ವೇಷಿಗಳೆಂದು ಹೇಳುವುದು ಎರಡನೆಯ ವಿಷಯ. ನಿಜವಾಗಲೂ

ಈ ಪ್ರಶ್ನೆಗಳನ್ನು ಕೇಳಬೇಕಾದದ್ದು ಅಂತಹ ಪುರುಷರನ್ನು.ಪುರುಷರ ಬೇಜವಾಬ್ದಾರಿಯನ್ನು ಗಮನಿಸಿಕೊಳ್ಳದೆ ಮಕ್ಕಳ ಜವಾಬ್ದಾರಿಯನ್ನೆಲ್ಲಾ ಮಹಿಳೆಯರ ಮೇಲೆಯೇ ಹಾಕುವುದು, ಆ ಕೆಲಸ ಮಹಿಳೆಯದೆ ಎಂಬಂತೆ ಮಾತನಾಡುವುದು ಅಂದರೆ ಪುರುಷರ ಪ್ರಯೋಜನಗಳನ್ನು ಕಾಪಾಡುವುದೇ ಆಗುತ್ತದೆ.

ವಿದ್ಯಾವಂತರಾಗಿ, ಮದುವೆ ಬೇಡವೆಂದುಕೊಂಡು, ತಮ್ಮ ಜೀವನದ ಬಗ್ಗೆ ತಾನೇ ನಿರ್ಣಯಗಳನ್ನು ತೆಗೆದುಕೊಳ್ಳುವ ಸ್ವತಂತ್ರ ಮಹಿಳೆ, ಜವಾಬ್ದಾರಿಯನ್ನು ಗುರುತಿಸುವ ಮಹಿಳೆ, ತಾನು ಯಾರ ಜೊತೆ ಸಂಬಂಧವನ್ನು ಹೊಂದುತ್ತಾಳೋ ಆ ಪುರುಷನನ್ನು ಎಲ್ಲಾ ರೀತಿಯಲ್ಲಿ ಗಮನಿಸಿ, ಅರ್ಥಮಾಡಿಕೊಂಡ ಮಾತ್ರ ಅವನ ಜೊತೆ ಸಂಬಂಧ ಬೆಳೆಸುತ್ತಾಳೆ. ಆಕೆಗೆ ಅರಿವು, ಮಕ್ಕಳ ಜವಾಬ್ದಾರಿ ಬಗ್ಗೆ ಗಂಡಸರನ್ನು ಕೇಳುವ ಧೈರ್ಯ, ಅವರಿಗೆ ಸಮಾನವಾಗಿ ಜವಾಬ್ದಾರಿಯನ್ನು ವಹಿಸಿಕೊಡುವ ಸಲುಗೆಗಳು ಇರುತ್ತವೆ. ಅಮಾಯಕ ರೀತಿಯಲ್ಲಿ ಪುರುಷರ ಮಾಯದ ಮಾತುಗಳಿಗೆ, ಮದುವೆ ಮಾಡಿಕೊಳ್ಳುತ್ತೇನೆಂಬ ಕಪಟ ಭಾಷೆಗೆ, ಮದುವೆಯಾಗಿ ಮಕ್ಕಳನ್ನು ಹೆತ್ತು ಮಕ್ಕಳ ಬಗ್ಗೆ ತಲೆಕೆಡಿಸಿಕೊಂಡು ವಂಚನೆಗೆ ಬಲಿಯಾಗುತ್ತಿರುವ ಸ್ತ್ರೀಯರಿಗೆ- ಬಹಳಷ್ಟು ಜವಾಬ್ದಾರಿಯಿಂದ ತಮ್ಮ ಬದುಕುಗಳ ಬಗ್ಗೆ ಆಲೋಚಿಸಿಕೊಂಡು, ಅರಿತು, ಎದುರಿನ ಪುರುಷನನ್ನು ಅರ್ಥಮಾಡಿಕೊಂಡು ಆಗ ಮಾತ್ರ ಮಕ್ಕಳನ್ನು ಹೆರಬೇಕೆಂಬ ಸ್ತ್ರೀಯರಿಗೆ, ವ್ಯತ್ಯಾಸ ನೋಡದೆ ಸ್ತ್ರೀಯರೆಂದರೆ ಮೋಸಹೋಗುವ ತಿಳುವಳಿಕೆಯಿಲ್ಲದವರಂತೆ ಪರಿಗಣಿಸಿ ಮಾತನಾಡುತ್ತಾರೆ. ಮಕ್ಕಳನ್ನು ಹಡೆಯುವುದು ಎಷ್ಟು ಜವಾಬ್ದಾರಿ, ಅವರನ್ನು ಬೆಳೆಸಲು ಎಷ್ಟು ಸಮಯ ಬೇಕೋ ಇದು ಗೊತ್ತಾಗದೆ, ಮುಖ್ಯವಾಗಿ ಮಕ್ಕಳನ್ನು ಹಡೆಯುವುದರ ಬಗ್ಗೆ ಏನೂ ಗೊತ್ತಾಗದೆ ತಾಯಿಯಾಗುವ ಸ್ತ್ರೀಯರ ಬಗ್ಗೆ ಮರುಗಬೇಕು, ಭಯಪಡಬೇಕು. ಆದರೆ ಜವಾಬ್ದಾರಿಯಿಂದ ಆ ಕೆಲಸವನ್ನು ಆಲೋಚಿಸಿ ಮಾಡುತ್ತೇವೆ ಎಂಬ ಸ್ತ್ರೀಯರ ಬಗ್ಗೆ, ಆ ಪದ್ಧತಿಯ ಬಗ್ಗೆ ಭಯಪಡುವುದು ಯಾಕೋ ಅರ್ಥವಾಗದು. ಅಮಾಯಕರಾದ ಮಹಿಳೆಯರೂ ಸಹ ಇಂಥ ತಿಳುವಳಿಕೆ ಶಕ್ತಿಗಳನ್ನು ತಂದುಕೊಂಡು ತಮ್ಮ ಜೀವನ ಗಮನವನ್ನು ತಾವೇ ನಿರ್ಣಯಿಸಿಕೊಳ್ಳುವ ಚೈತನ್ಯವನ್ನು ಹೊಂದಬೇಕೆಂದು ಈ ವಿಮರ್ಶಕರು ಯೋಚಿಸಲಾರರೇ?ಅಮಾಯಕವಾಗಿ ಮೋಸಹೋಗುವ ಮಹಿಳೆಯರ ನೋವುಗಳನ್ನು ಹೃದಯವಿದ್ರಾವಕವಾಗಿ ಬರೆಯುವುದರಿಂದ ಒಂದು ರೀತಿಯಲ್ಲಿ ಪ್ರಯೋಜನ ನೆರವೇರಿದೆ. ಉಮಾಳಂತಹ ಪಾತ್ರಗಳನ್ನು ಸೃಷ್ಟಿಸುವುದರಿಂದ ಮತ್ತೊಂದು ರೀತಿಯ ಪ್ರಯೋಜನ ನೆರವೇರುತ್ತದೆ.ಒಂದು ಹೊಸ ಆಲೋಚನೆ ಕೇಳಿದ ತಕ್ಷಣ ಉಂಟಾಗುವ ಸಹಜವಾದ ಭಯದ ಹೊರತು ಈ ವಿಮರ್ಶಕರಿಗೆ ಮತ್ತೊಂದು ಆಧಾರವಿಲ್ಲ. ನಿಜವಾಗಲೂ ಈ ರೀತಿ ವಿಮರ್ಶೆಗಳು, ಚರ್ಚೆಗಳೂ ಬಹುವಾಗಿ ಅಕ್ಯಾಡೆಮಿಕ್ ಚರ್ಚೆಗಳೇ.ಈ ಸಮಾಜದ ನಿರ್ಬಂಧನೆಗಳು ತಮ್ಮ ಅಭಿವೃದ್ಧಿಗೆ ಆತಂಕಗಳೆಂದು ಗ್ರಹಿಸಿ, ಸಮಾಜವು ಸೃಷ್ಟಿಸಿದ ನಮೂನೆಗಳಲ್ಲಿ ಕಳೆದುಹೋಗದೆ ಸಂಘರ್ಷಣೆಗೆ ಒಳಗಾಗುವ ಸ್ತ್ರೀಯರು ಯಾವಾಗಲೂ ಇರುತ್ತಾರೆ.ಅವರ ಹೊಸ ಭಾವನೆಗಳನ್ನು, ಹೊಸ ಆಚರಣೆಗಳನ್ನು ಅಕ್ಯಾಡೆಮಿಕ್ ಚರ್ಚೆಗಳ ಪರಿಧಿಗಳಾಚೆ ಸೃಷ್ಟಿಸುತ್ತಲೇ ಇರುತ್ತಾರೆ.ಋಟಆಟ ಜಜ ಃಆಚಿಣಾತಿಡಿ ಹೇಳಿದಂತೆ "ನಮ್ಮ ಜೀವನ

ಪರಿಸ್ಥಿತಿಗಳ ಬಗ್ಗೆ ಸರಿಯಾದ ಜ್ಞಾನದಿಂದ ನಾವು ಜೀವಿಸುವ ಶಕ್ತಿಯನ್ನು, ನಮ್ಮ ಜೀವನ ಅಮಾಯಕತೆ ಹೇತುಗಳನ್ನು ಸಂಪಾದಿಸಿಕೊಳ್ಳಬೇಕು" ಅಂತಹ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕೆಂಬ ಮಹಿಳೆಯರಿಗೆ ತಮ್ಮ ಜೀವನ ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಯಾವುದೇ ರೀತಿಯಲ್ಲಿ ಅಲ್ಪಮಟ್ಟಿನ ಸಹಾಯವಾದರೂ ಈ ಕಾದಂಬರಿಯ ಪ್ರಯೋಜನೆ ನೆರವೇರಿದಂತೆ.

ಈ ಕಾದಂಬರಿ ಅರುಣಾಳಿಗಾಗಲಿ, ಉಮಾಳಿಗಾಗಲಿ, ಅಂತಹ ಮಹಿಳೆಯರಿಗೆ ಯಾವ ಪರಿಷ್ಕಾರಗಳನ್ನು ನೀಡಿದೆಯೆಂಬುವುದು ಬಹಳ ಜನರು ಕೇಳುವ ಮತ್ತೊಂದು ಪ್ರಶ್ನೆ.ಮುಖ್ಯವಾಗಿ ಲೇಖಕರನ್ನು ಸಮಸ್ಯೆಗಳಿಗೆ ಪರಿಷ್ಕಾರಗನ್ನು, ಅದರಲ್ಲಿಯ ಸರಿಯಾದ, ಯಾವ ಪೊರಪಾಟುಗಳಿಲ್ಲದ ಪರ್ಫೆಕ್ಟ್ ಪರಿಷ್ಕಾರಗಳನ್ನು ಕೇಳುವುದು, ಅವುಗಳ ಸಲುವಾಗಿ ರಚನೆಗಳಲ್ಲಿ ಹುಡುಕುವುದು ಬಹಳ ಬುದ್ಧಿಗೇಡಿತನದ ಕೆಲಸ. ಆ ರೀತಿ ನಿರೀಕ್ಷಿಸಬೇಡವೆಂದು ಕೊಡವಗಂಟಿ ಕುಟುಂಬರಾವು ಅವರು ಬಹಳ ಹಿಂದೆಯೇ ಹೇಳಿದ್ದಾರೆ.ತಮ್ಮ 'ಸಾಹಿತ್ಯ ಪ್ರಯೋಜನ' ಲೇಖನದಲ್ಲಿ, ಅದನ್ನು ಪಕ್ಕಕ್ಕಿಟ್ಟು ಮಹಿಳೆಯರ ಸಮಸ್ಯೆಯಾಗಿ ಕಾಣಿಸುವ ಪುನರುತ್ಪತ್ತಿ ರಾಜಕೀಯಗಳು ಎತ್ತುವ ಪ್ರಶ್ನೆಗಳು ವ್ಯಕ್ತಿಗತ ಸ್ಥಾಯಿಯಲ್ಲಿ ಉತ್ತರಗಳನ್ನು, ಪರಿಷ್ಕಾರಗಳನ್ನು ಹೇಳಲಾರವು.ಒಬ್ಬ ವ್ಯಕ್ತಿ ತನ್ನ ಸಮಸ್ಯೆಯನ್ನು ಬಹಳ ಸಮರ್ಥ ರೀತಿಯಿಂದ, ಬುದ್ಧಿವಂತಿಕೆಯಿಂದ ಪರಿಷ್ಕರಿಸಿಕೊಂಡಂತೆ ಬರೆದರೆ ಮಾತ್ರ ಅದು ನಿಜವಾದ ಪರಿಷ್ಕಾರ, ಎಲ್ಲರಿಗೆ ಅನ್ವಯಿಸುವ ಮಾರ್ಗ ಆಗಲಾರದು. ಮಹಿಳೆಯರ ಸ್ವೇಚ್ಛೆಯ ಬಗ್ಗೆ, ಲೈಂಗಿಕ ಪುನರುತ್ಪತ್ತಿ ಹಕ್ಕುಗಳನ್ನು ಗುರುತಿಸಿ, ಬರೆಯುವ ಲೇಖಕರು, ಮಾಡಲಾದದ್ದು ಏನೆಂದರೆ ಇಲ್ಲಿಯವರೆಗೆ ವ್ಯಕ್ತಿಗತವಾದ ವಿಷಯಗಳು, ಖಾಸಗಿ ವಿಷಯಗಳು ಅಂದುಕೊಳ್ಳುವಂತಹವನ್ನು ಹೊರಗೆ ತೆಗೆದು ಸಾಂಘಿಕ, ಸಾಮಾಜಿಕ ವಿಷಯಗಳನ್ನಾಗಿ ನಿರೂಪಿಸಿ ಸಾಮಾಜಿಕ ಪರಿಷ್ಕಾರಗಳ ಸಲುವಾಗಿ ಹುಡುಕೆಂದು ಸೂಚಿಸುವ, ಆ ಕೆಲಸವನ್ನು ಸಮರ್ಥವಾದ ರೀತಿಯಲ್ಲಿ ಮಾಡುವುದರಲ್ಲಿಯೇ ಇಂದಿನ ಸ್ತ್ರೀವಾದಿ ಲೇಖಕಿಯರ ವಿಜಯವು, ಬಲವು ಕಾಣಿಸುತ್ತದೆ. 'ಸ್ವೇಚ್ಛೆ' ಕಾದಂಬರಿಯು ಅಂತಹ ಪ್ರಯತ್ನವೇ ಆಗಿದೆ.

■





# ಜ್ಞಾನಶಾಸ್ತ್ರೀಯ ಅಸಹಕಾರ ಮತ್ತು ನಿರ್ವಸಾಹತೀಯ ಸ್ವಾತಂತ್ರ್ಯ

–ವಾಲ್ಟೆರ್ ಡಿ. ಮಿಗ್ನೊಲೊ

ಅನು: ರಾಮಲಿಂಗಪ್ಪ ಟಿ.ಬೇಗೂರು

ಒಂದಾನೊಂದು ಕಾಲದಲ್ಲಿ ವಿದ್ವಾಂಸರು ಯಾವುದೇ ಅಧ್ಯಯನ ಶಿಸ್ತುಗಳಲ್ಲಿನ ವಿಷಯಗಳನ್ನು 'ತಿಳಿಯುವುದು' ಎಂದರೆ ಅದು ಪಾರದರ್ಶಕ ಮತ್ತು ಮುಕ್ತ ಆಗಿರುತ್ತದೆ ಎಂದೇ ಭಾವಿಸಿದ್ದರು. ಹಾಗೆಯೆ ಆಯಾ ಅಧ್ಯಯನ ಶಿಸ್ತುಗಳು ತಮ್ಮನ್ನು ಸೃಷ್ಟಿಸಿದವರ ಮತ್ತು ಬಲ್ಲವರಿಂದ ಅವು ಸ್ವತಂತ್ರವಾಗಿ ಇರುತ್ತವೆ ಎಂದೂ ಭಾವಿಸಿದ್ದರು. ಅಲ್ಲದೆ ಪ್ರದೇಶಗಳು ಮತ್ತು ಜನರು ಎಲ್ಲಿ ಜಾತೀಯವಾಗಿ ಮತ್ತು ಜನಾಂಗೀಯವಾಗಿ ಅಸಾಮಾನವಾಗಿ ನಿರ್ವಚನಗೊಂಡಿದ್ದಾರೋ ಅಲ್ಲಿನ ಭೌಗೋಳಿ–ರಾಜಕಾರಣದಿಂದ ಆ ಶಿಸ್ತುಗಳು ಮುಕ್ತವಾಗಿರುತ್ತವೆ ಎಂದೂ ಭಾವಿಸಿದ್ದರು. ಆದರೆ ನಿಜ ಏನು ಗೊತ್ತಾ? ತಾವು ಸೃಷ್ಟಿಸಿದ ಅಧ್ಯಯನ ಶಿಸ್ತುಗಳ ಜೊತೆ ಸಂಬಂಧವೆ ಇರದಂತೆ; ತಟಸ್ಥ ಬಿಂದುವಿನಲ್ಲಿ ನಿಂತ ಅವುಗಳ ದಾತಾರರಿಂದ ಅವು ಸದಾ ನಿಯಂತ್ರಣ ಆಗುತ್ತ ಇರುತ್ತವೆ. ('ಶೂನ್ಯ ಬಿಂದುವಿನ ಮದ' ಎಂದು ಯಾವುದನ್ನು

ಕೊಲಂಬಿಯಾದ ತತ್ವಶಾಸ್ತ್ರಜ್ಞ ಸ್ಯಾಂಟಿಯಾಗೊ ಕ್ಯಾಸ್ಟ್ರೋ ಗೊಮೆಝ್ (2007) ಕರೆದರೋ ಅದೇ ಇದು) ಅವು ಅವುಗಳ ದಾತಾರರಿಗೆ ಸದಾ ಅನುಕೂಲ ಆಗುವಂತೆ ಯೋಜಿತವಾಗಿ ಲೋಕ ಮತ್ತು ಜನರನ್ನು ಹಾಗೂ ಸಮಸ್ಯೆಗಳನ್ನು ವರ್ಗೀಕರಿಸುತ್ತ ಇರುತ್ತವೆ. ಅಂದರೆ ಇವತ್ತು ಅಂತಹ ಪಾರದರ್ಶಕತೆ, ಸ್ವಾಂತಂತ್ರ್ಯ, ನಿರಂಕುಶತೆ ಇವೆಲ್ಲ ನಂಬಿಕೆಯನ್ನು ಕಳೆದುಕೊಂಡುಬಿಟ್ಟಿವೆ. ಏನನ್ನೇ ಆಗಲಿ ತಿಳಿಯುವುದು ಎಂದರೆ ಇವೆಲ್ಲ ಅಪಾಯಗಳ ಜೊತೆಗೇ ಏಗುವುದು ಎಂಬ ತಿಳುವಳಿಕೆ ಇವತ್ತು ಬಂದಿದೆ. ಆದರೂ ಈ ಬಗ್ಗೆ ಮುಗ್ಧವಾಗಿ ನಂಬುವವರು ಇನ್ನೂ ಸಾಕಷ್ಟು ಜನ ಇದ್ದಾರೆ ಕೂಡ. ಜ್ಞಾನಶಾಸ್ತ್ರ ಮತ್ತು ಜನಾಂಗೀಯವಾದದ ಪ್ರಶ್ನೆ ಕೂಡ ಇಂದು ತೀವ್ರ ಚರ್ಚೆಗೆ ಗ್ರಾಸವಾಗಿದೆ. (ಚುಕ್ವುಡಿ ಈಝ್, 1997, ಮಿಗ್ನೋಲೋ, ಘೋರ್ತ್‌ಕಮಿಂಗ್)

ಅಷ್ಟೇ ಅಲ್ಲ ಒಂದೊಮ್ಮೆ ವಿದ್ವಾಂಸರು ನೀವು ಲ್ಯಾಟಿನ್ ಅಮೆರಿಕದಿಂದ ಬಂದವರಾದರೆ ಅದರ ಬಗ್ಗೆ ಮಾತ್ರ ನೀವು ಮಾತಾಡಬೇಕು ಎಂದು ಅಪೇಕ್ಷಿಸುತ್ತಿದ್ದರು. ನೀವು ಲೇಖಕರಾಗಿದ್ದಲ್ಲಿ ನಿಮ್ಮ ಸಂಸ್ಕೃತಿಯ ಪ್ರತಿನಿಧಿಯಾಗಿ ನಿಮ್ಮನ್ನು ಅವರು ಕಾಣುತ್ತಿದ್ದರು. ಅದೆ ನೀವು ಜರ್ಮನಿಯಿಂದಲೋ, ಫ್ರಾನ್ಸ್, ಇಂಗ್ಲೆಂಡ್ ಅಥವಾ ಅಮೆರಿಕದಿಂದಲೋ ಬಂದವರಾದರೆ ಅಂತಹ ನಿರೀಕ್ಷೆ ಇರುತ್ತಿಲಿಲ್ಲ. ಇಂಥಲ್ಲಿ ನಿಮ್ಮನ್ನು ನಿಮ್ಮ ಸಂಸ್ಕೃತಿಯ ಪ್ರತಿನಿಧಿಯಾಗಿ ಮಾತ್ರ ನೋಡದೆ ನೀವು ತಾತ್ವಿಕವಾಗಿ ಮಾತಾಡಬಲ್ಲ ವ್ಯಕ್ತಿಯಾಗಿ ನೋಡುತ್ತಿದ್ದರು. ನಮಗೆಲ್ಲ ತಿಳಿದಿರುವಂತೆ ಮೊದಲನೆ ಜಗತ್ತು ಜ್ಞಾನವನ್ನು ಹೊಂದಿದ್ದರೆ ಮೂರನೆ ಜಗತ್ತು ಸಂಸ್ಕೃತಿಯನ್ನು ಹೊಂದಿದೆ: ಅಮೆರಿಕಾದ ಮೂಲನಿವಾಸಿಗಳು ಲೋಕಜ್ಞಾನವನ್ನು ಪಡೆದಿದ್ದರೆ ಆಂಗ್ಲೋ ಅಮೆರಿಕನ್ನರು ವಿಜ್ಞಾನವನ್ನು ಹೊಂದಿದ್ದಾರೆ. ಇಂತಹ ಕಡೆ ರಾಜಕೀಯ ಮತ್ತು ಜ್ಞಾನಶಾಸ್ತ್ರಗಳನ್ನು ಬೇರ್ಪಡಿಸುವ ಅಗತ್ಯವು ಮುನ್ನೆಲೆಗೆ ಬರುತ್ತದೆ. ಹಾಗೆಯೇ ನಿರ್ವಸಾಹತೀಕರಣ ಮಾಡುವ ಮತ್ತು ನಿರ್ವಸಾಹತೀಕೃತ ಜ್ಞಾನವನ್ನು ಮುನ್ನೆಲೆಗೆ ತರುವ: ಪ್ರಜಾಪ್ರಭುತ್ವೀಯ ನ್ಯಾಯಯುತ ಮತ್ತು ಅಸಾಮ್ರಾಜ್ಯಶಾಹಿ/ ಅವಾಸಹತುಶಾಹಿ ಸಮಾಜಗಳನ್ನು ಕಟ್ಟುವ ಮತ್ತು ಕಲ್ಪಿಸಿಕೊಳ್ಳುವ ಅಗತ್ಯವೂ ಬೀಳುತ್ತದೆ. ಜ್ಞಾನದ ಭೌಗೋಳಿ–ರಾಜಕಾರಣವು ಯಾವತ್ತೂ ತಿಳಿಯುವ ಭೌಗೋಳಿ–ರಾಜಕಾರಣದ ಜೊತೆಜೊತೆಗೇ ಸಾಗುತ್ತಿರುತ್ತದೆ.

ಯಾರಿಂದ ಮತ್ತು ಯಾವಾಗ, ಹೇಗೆ ಮತ್ತು ಎಲ್ಲಿ ಜ್ಞಾನವು ಉತ್ಪಾದನೆ–ಪ್ರಸರಣ ಆಗುತ್ತದೆ? (ಕಾರು ಅಥವಾ ಮೊಬೈಲುಗಳ ಉತ್ಪಾದನೆ ಆದಂತಲ್ಲ) ಎಂಬ ಈ ಪ್ರಶ್ನೆಗಳು ನಮ್ಮ ಗಮನವನ್ನು ತಿಳುವಳಿಕೆ ಪಡೆದವರಿಂದ ತಿಳುವಳಿಕೆಗೆ ಕಾರಣವಾದ 'ನಿರೂಪಣೆ' ಮಾಡಿದವರ ಕಡೆಗೆ ಬದಲಿಸುತ್ತದೆ. ಹೀಗೆ ಮಾಡುವುದರಿಂದ 'ನಾನು ಆಲೋಚಿಸುತ್ತೇನೆ: ಹಾಗಾಗಿ ನಾನು ಅಸ್ತಿತ್ವದಲ್ಲಿ ಇದ್ದೇನೆ' ಎಂಬ ಡೆಕಾರ್ಟ್‌ನ ತತ್ವವೇ ಇಲ್ಲಿ ತಲೆಕೆಳಗಾಗುತ್ತದೆ. ಇರುವಿಕೆಗೂ ಮೊದಲೇ ಆಲೋಚನೆ ಎಂಬುದು ಇರುತ್ತದೆ ಎಂದು ನಂಬುವುದಕ್ಕಿಂತ, ಅಭಿವ್ಯಕ್ತಿಸಲು ಇಲ್ಲವೆ ತಾವು 'ಬದುಕಿರುವ' ಮಾನವರೆಂದು ತೋರಿಸಿಕೊಳ್ಳಲು ಆಲೋಚಿಸುವ ಮೊದಲೇ ಸಮುದಾಯಗಳನ್ನು ಜಾತಿ–ಜನಾಂಗೀಯ ಆಗಿ ಮತ್ತು ಭೌಗೋಳಿ–ಚಾರಿತ್ರಿಕ ಸ್ಥಳದ ಮೂಲಕ ನಿರ್ವಚನ ಮಾಡಿರುತ್ತಾರೆ ಎಂದು

ನಂಬಬೇಕಾಗುತ್ತದೆ. ಇದು ಎಲ್ಲ ಬಗೆಯ ಸಂಜ್ಞಾಶಾಸ್ತ್ರೀಯ ವ್ಯವಸ್ಥೆಯಲ್ಲೂ ನಿಜ.

ಈಗಾಗಲೆ ಪರಿಚಿತ ಆಗಿರುವ 'ಸಾಂದರ್ಭಿಕ ಜ್ಞಾನಗಳು' ಎಂಬ ಪರಿಕಲ್ಪನೆಯಿಂದ ಬಿಡಿಸಿಕೊಂಡು ಭೌಗೋಳಿ ಮತ್ತು ದೇಹ-ರಾಜಕಾರಣಗಳ ನೆಲೆಯಲ್ಲಿ ಏನಾದರೂ ಹೇಳಲು ಸಾಧ್ಯವೇ ಎಂದು ಹುಡುಕಾಡುತ್ತಿದ್ದೇನೆ. ನಿಜ: ಹಾಗೆ ನೋಡಿದರೆ ಎಲ್ಲ ಜ್ಞಾನಗಳೂ ಸಾಂದರ್ಭಿಕವಾದುವೆ ಮತ್ತು ಕಟ್ಟಿದುವೇ. ಆದರೆ ಅದು ಆರಂಭ ಮಾತ್ರ. ನಂತರದಲ್ಲಿ ಯಾರು, ಯಾವಾಗ ಮತ್ತು ಹೇಗೆ ಆ ಜ್ಞಾನಗಳನ್ನು ಕಟ್ಟಿದರು ಎಂಬುದೇ ಮುಖ್ಯವಾದ ಪ್ರಶ್ನೆ. ಯೂರೋಕೇಂದ್ರೀಯ ಜ್ಞಾನಶಾಸ್ತ್ರವು ಏಕೆ ತನ್ನದೇ ಭೌಗೋಳಿ-ಚಾರಿತ್ರಿಕ ಮತ್ತು ದೇಹ-ಚಾರಿತ್ರಿಕ ಸ್ಥಳೀಕತೆಗಳನ್ನು ಮರೆಮಾಚಿದೆ? (ಸಮಾಜ ವಿಜ್ಞಾನಗಳಲ್ಲಿ, ಮಾನವಿಕಗಳಲ್ಲಿ, ನೈಸರ್ಗಿಕ ವಿಜ್ಞಾನಗಳಲ್ಲಿ ಮತ್ತು ವೃತ್ತಿಪರ ಶಾಲೆಗಳಲ್ಲಿ, ಹಣಕಾಸು ವಲಯದ ಚಿಂತಕ ಚಾವಡಿಗಳಲ್ಲಿ, ಜಿ8 ಮತ್ತು ಜಿ20 ಇಂಥ ಕಡೆ ಯಾಕೆ ಮರೆಮಾಚಿಸಿದೆ?)

ಇಲ್ಲಿ ಯಾವ ಪಲ್ಲಟವನ್ನು ನಾನು ಸೂಚಿಸುತ್ತಿದ್ದೇನೆ ಎಂದರೆ ಜ್ಞಾನಮಂಡನೆಗಳ ಕಡೆಯಿಂದ ನಿರೂಪಕರು-ನಿಯಂತ್ರಕರ ಕಡೆ ನಮ್ಮ ಗಮನ ಹರಿಯಬೇಕು ಎಂಬುದರ ಕಡೆಗೆ. (ಹೌದು: ನಿಸರ್ಗದತ್ತ ಆಗಿಯೋ ಅಥವಾ ದೇವವಾಣಿ ಆಗಿಯೋ ಇದು ಇಳಿದು ಬಂದದ್ದಲ್ಲ: ಖಂಡಿತಾ ಮಾನವ ರಚಿತವೇ, ಸ್ಥಳನಿರ್ದೇಶಿತವೇ ಹೌದು.) ಇದು ಯಾವುದೇ ಸಮುದಾಯದ ಜ್ಞಾನಶಾಸ್ತ್ರೀಯ ನಿರ್ವಸಾಹತೀಕರಣ ಕಾರ್ಯ ಮತ್ತು ಅದರೆಲ್ಲ ಚಾರಿತ್ರಿಕ, ರಾಜಕೀಯ ಹಾಗೂ ನೈತಿಕ ಪರಿಣಾಮಗಳಿಂದ ಬೇರ್ಪಡಿಸುವ ಕ್ರಿಯೆಯ ಆರಂಭ ಮಾತ್ರ. ಯಾಕೆ? ಯಾಕೆಂದರೆ ವಸಾಹತೀಯ ಅಧಿಕಾರಜಾಲದ ರೂಪಗೊಳ್ಳುವಿಕೆ ಮತ್ತು ರೂಪಾಂತರದಿಂದ ಹಾಗೂ ಅದರ ಮೂಲಕ ಸಮುದಾಯಗಳ ಭೌಗೋಳಿ-ಚಾರಿತ್ರಿಕ ಮತ್ತು ದೇಹ-ಚಾರಿತ್ರಿಕ ತಿಳುವಳಿಕೆಯ ತಾಣವು ಈಗಾಗಲೆ ಸ್ಥಳನಿರ್ದೇಶಗೊಂಡಿದೆ.

ಪೌರ್ವಾತ್ಯವಾದವು ಹುಟ್ಟಲು ತಕ್ಕ ಪರಿಸರವನ್ನು ನಿರ್ಮಿಸಿ, ಯೂರೋಪಿನ ಕೇಂದ್ರವನ್ನು (ಹೆಗೆಲ್) ಅದರ ದಕ್ಷಿಣ ಭಾಗದಿಂದ ಭಿನ್ನವಾಗಿಸಿ, ಅಂತಹ ಸುದೀರ್ಘ ಇತಿಹಾಸದ ಮೇಲೆ ಶೀತಲ ಸಮರದ ಸಂದರ್ಭದಲ್ಲಿ ಜಗತ್ತನ್ನು ಒಂದನೆ, ಎರಡನೆ, ಮೂರನೆ ಜಗತ್ತುಗಳು ಎಂದು ವಿಭಾಗಿಸಿ-ಮರುನಕ್ಷೆ ಮಾಡಿ, ಪಾಶ್ಚಾತ್ಯವಾದವನ್ನು ಆವಿಷ್ಕರಿಸಿ (ಉದಾ.ಭಾರತೀಯ ಪಾಶ್ಚಾತ್ಯ ಕಥನಗಳು) ಇಷ್ಟೆಲ್ಲ ಆಗುಮಾಡಿದ್ದು ಯಾವುದು? ಅದೇ ಅಸಮಾನ ಸಾಮಾಜಿಕ ವರ್ಗೀಕರಣದ ಜಾತಿ-ಜನಾಂಗೀಯ ವ್ಯವಸ್ಥೆ. ಅಂತಹ ವ್ಯವಸ್ಥೆಯನ್ನು ಸೃಷ್ಟಿಸಿದ ವಸಾಹತುಶಾಹಿ ಅಧಿಕಾರ ಜಾಲ: ಅದನ್ನು ಪೋಷಿಸುವ ಯೂರೋಕೇಂದ್ರೀಯ ಜ್ಞಾನಶಾಸ್ತ್ರ. ಗಂಭೀರ ಚಿಂತನೆ ನಡೆಯದ ತಾಣಗಳು (ಪುರಾಣ, ಪಾಶ್ಚಾತ್ಯೇತರ ಧರ್ಮಗಳು, ಜಾನಪದ, ಪ್ರಾದೇಶಿಕ ಮತ್ತು ಜನಾಂಗೀಯ ಹಿಂದುಳಿದಿರುವಿಕೆ ಉಳ್ಳವು) ಎಂದು ಹಣೆಪಟ್ಟಿ ಪಡೆದ ಪ್ರದೇಶಗಳು ಇಂದು ಪಾಶ್ಚಾತ್ಯೀಕರಣದ ಸುದೀರ್ಘ ಪ್ರಕ್ರಿಯೆಯಿಂದ ಬಿಡಿಸಿಕೊಳ್ಳತೊಡಗಿವೆ. ಯೂರೋಪೇತರ ತಾಣಗಳಲ್ಲಿ ನೆಲೆಸಿದ 'ಆದಿಮಾನವರು' ಯೂರೋಪಿಯನ್ನರಿಂದ 'ಮಾನವರು' ಎಂದು ಕಂಡುಹಿಡಿಯಲ್ಪಟ್ಟರು




ಎಂಬುದನ್ನು ಕಂಡುಕೊಂಡರು. ಹಾಗೆಯೆ ತಮ್ಮ ತಿಳುವಳಿಕೆಗಳ ಸ್ಥಳೀಕತೆಯಿಂದ ತಾವೂ ಕೂಡ ಮನುಷ್ಯ ಜಾತಿ ಎಂದು ಸ್ವಯಂ ಘೋಷಿಸಿಕೊಂಡರು.

ಈಗ ಮಾಜಿ ಆದಿಮಾನವರು ಅತ್ತ ಮಾನವತಾಗಳೆಂದು ನಮ್ಮನ್ನು ಗುರ್ತಿಸಿ ಅಥವಾ ಒಳಗೊಳ್ಳಿ ಎಂದು ಯಾವತ್ತೂ ಕೇಳುತ್ತಿಲ್ಲ. ಅಲ್ಲದೆ ಜ್ಞಾನಶಾಸ್ತ್ರೀಯ ಅಸಹಕಾರ ತೋರುತ್ತ; ಪಾಶ್ಚಾತ್ಯ ಮಾಯಾಜಾಲಗಳಾದ ಆಧುನಿಕತೆ, ಮಾನವೀಯತೆಯ ಆದರ್ಶ ಮಾದರಿಗಳು, ಆರ್ಥಿಕ ಪ್ರಗತಿಯ ಭರವಸೆಗಳು ಹಾಗೂ ಹಣಕಾಸಿನ ಹುಸಿ ಸಮೃದ್ಧಿ ಇವುಗಳಿಂದ ಬೇರ್ಪಡೆಗೊಳ್ಳುತ್ತಲೂ ಇದ್ದಾರೆ. ಈಗಿವರು ಎರಡು ದಾರಿಗಳನ್ನು ಹಿಡಿಯುತ್ತಿದ್ದಾರೆ: ಒಂದು ಮಾರ್ಗವು ಮಾರ್ಕ್ಸ್‌ವಾದಿ ಮತ್ತು ಉದಾರವಾದಿ ಎರಡೂ ಕಡೆಯಿಂದಲೂ 'ಬಂಡವಾಳವಾದ' ಎಂದೇ ವ್ಯಾಖ್ಯಾನಿಸಲ್ಪಟ್ಟ ಒಂದು ತೆರನ ಆರ್ಥಿಕತೆಯ ಜಾಗತೀಕರಣದ ಒಳಗೇ ತೆರೆದುಕೊಳ್ಳುತ್ತದೆ. ಇದರ ಮುಖ್ಯ ಪ್ರತಿಪಾದಕರಲ್ಲಿ ಒಬ್ಬರೆಂದರೆ ಸಿಂಗಪುರದ ಬುದ್ಧಿಜೀವಿ ಮತ್ತು ರಾಜಕಾರಣಿಯಾದ ಕಿಶೋರ್ ಮೆಹ್‌ಬೂಬಾನಿ. ದೋಷರಹಿತವಾದ ಮತ್ತು ಯಾವ ಪೂಜ್ಯತೆಗಳನ್ನೂ ಲೆಕ್ಕಿಸದ ಧಾಡಸಿಯಾದ ಹಲವು ಸಂದೇಶಗಳನ್ನು ಈತನ ಬರವಣಿಗೆ ನೀಡಿದೆ. ಕ್ಯನ್ ಏಶ್ಯನ್ಸ್ ಥಿಂಕ್?: ಅಂಡರ್‌ಸ್ಟಾಂಡಿಂಗ್ ದಿ ಡಿವೈಡ್ ಬಿಟ್ವೀನ್ ಈಸ್ಟ್ ಅಂಡ್ ವೆಸ್ಟ್ (2001). ಮೆಹ್‌ಬೂಬಾನಿಯ ಪರಿಭಾಷೆಯನ್ನು ತರ್ಕಿಸಿ ಹೇಳುವುದಾದರೆ ಆತನ ಪ್ರತಿಪಾದನೆಯನ್ನು ಅಪಾಶ್ಚಾತ್ಯೀಕರಣ ಎನ್ನಬಹುದು. ಅಪಾಶ್ಚಾತ್ಯೀಕರಣ ಎಂದರೆ ಬಂಡವಾಳಶಾಹಿ ಆರ್ಥಿಕತೆಯ ಒಳಗೇ ಇದ್ದು ಪಾಶ್ಚಾತ್ಯ ಆಟಗಾರರು ಮತ್ತು ಸಂಸ್ಥೆಗಳು ಹೇಳುವ ನಿಯಮಗಳು ಮತ್ತು ಹೊಡೆತಗಳನ್ನು ಅವರವು ಎಂದು ಕರೆಯದೆ ಅವನ್ನು ನಮ್ಮ ಹತ್ಯಾರಗಳನ್ನಾಗಿ ಮಾಡಿಕೊಂಡು ಅವರೆದುರೇ ಪ್ರಯೋಗಿಸುವುದು. ಇಂತಹ 'ಅಪಾಶ್ಚಾತ್ಯೀಕರಣದ ಆಯ್ಕೆ'ಗಳಿಗೆ ಮೊನ್ನೆ ನಡೆದ 7ನೇ ದೋಹಾ (ಖತಾರ್, ಐ.ಪಿ.ಟಿ.ಸಿ.) ಸಮಾವೇಶ ಒಂದು ಒಳ್ಳೆಯ ಉದಾಹರಣೆ. (ಈತನ ಪ್ರತಿಪಾದನೆಯ ಚರ್ಚೆಗೆ ನಂತರ ಬರುತ್ತೇನೆ)

ಎರಡನೆ ಮಾರ್ಗವೆಂದರೆ; 'ನಿರ್ವಸಾಹತೀಕರಣದ ಆಯ್ಕೆ'. ಬಹುಮಾದರಿ ನಿರ್ವಸಾಹತುವಾದಿಗಳ ನಡುವಣ ಏಕೈಕ ಸಂಬಂಧ ಕೊಂಡಿಯಾಗಿ ಈ ಆಯ್ಕೆಯಿದೆ. ಈ ನಿರ್ವಸಾಹತೀಯ ಹಾದಿಯು ಒಂದು ಸಾಮಾನ್ಯ ಸಂಗತಿಯನ್ನು ಹೊಂದಿದೆ. ಅದೆಂದರೆ: ವಸಾಹತೀಯ ಗಾಯ. ನಿಜಾಂಶ ಏನೆಂದರೆ ಇದರಿಂದ ಜಗತ್ತಿನಾದ್ಯಂತ ಜನ ಮತ್ತು ಪ್ರದೇಶಗಳು 'ಆರ್ಥಿಕವಾಗಿ ಮತ್ತು ಬೌದ್ಧಿಕವಾಗಿ ಹಿಂದುಳಿದವು' ಎಂದು ವರ್ಗೀಕರಿಸಲ್ಪಟ್ಟಿವೆ. ಜಾತಿ-ಜನಾಂಗೀಯವಾದವು ಕೇವಲ ಜನರನ್ನು ಮಾತ್ರವಲ್ಲ ಪ್ರದೇಶಗಳನ್ನೂ ಬಾಧಿಸುತ್ತದೆ. ಅಥವಾ ಇನ್ನೂ ಸರಿಯಾಗಿ ಹೇಳುವುದಾದರೆ

ಆದಿಮಾನವರು ನೆಲೆಸಿರುವ ಸ್ಥಳಗಳಲ್ಲಿನ ನೈಸರ್ಗಿಕ ಸಂಪನ್ಮೂಲಗಳ ಜೊತೆ ಮಾನವತಾಗಳು ತಮ್ಮ ಸಂಬಂಧ ಏರ್ಪಡಿಸಿಕೊಳ್ಳಲು ಇದು ಅಗತ್ಯವಾಗಿದೆ.

ನಿರ್ವಸಾಹತೀಯ ಆಯ್ಕೆಗಳು ಅಪಾಶ್ಚಾತ್ಯೀಕರಣ ವಾದಗಳ ಜೊತೆ ಹೊಂದಿರುವ ಒಂದು ಸಾಮ್ಯತೆ ಎಂದರೆ 'ಮಾನವತಾ'ಗಳ ಆದರ್ಶ ಮಾದರಿ ಎದುರು ನಾವು ಏನಾಗಿದ್ದೇವೆ? ಎಲ್ಲಿದ್ದೇವೆ? ನಮ್ಮ ಸ್ಥಾನಮಾನ ಏನು? ನಾವು ಹಾಗೆ ಮಾನವತಾಗಳು ಎಂದು ಮಾನ್ಯತೆ ಪಡೆಯಲು ಏನೆಲ್ಲ ಮಾಡಬೇಕು ಎಂಬ ಬಗ್ಗೆ ಶೂನ್ಯ ಬಿಂದುವಿನ ಜ್ಞಾನಶಾಸ್ತ್ರೀಯ ಸವಲತ್ತುಗಳಿಂದ ನಿರೂಪಣೆಗೆ ಒಳಗಾಗುವುದನ್ನು ಏಡಾಖಂಡಿತವಾಗಿ ನಿರಾಕರಿಸುವುದು. ಹಾಗೆಯೇ ಆಧುನಿಕತೆ ಮತ್ತು ಸಮೃದ್ಧಿ ಹಾಗೂ ಆಧುನಿಕ ಸಂಸ್ಥೆಗಳನ್ನು ಬಲಪಡಿಸುವ ವಾಙ್ಮಯಗಳಲ್ಲಿ (ಉದಾ. ಪ್ರಗತಿ ಮತ್ತು ಸಮೃದ್ಧಿಯ ತತ್ವಗಳಿಂದ ಮುನ್ನೆಲೆಗೆ ಬಂದಿರುವ ಉದಾರ ಪ್ರಜಾಪ್ರಭುತ್ವ ಮತ್ತು ಆರ್ಥಿಕತೆಗಳಲ್ಲಿ) ಅಡಗಿರುವ 'ಸಾವಿನ ನಾಗರೀಕತೆ'ಗಳನ್ನು ನಿರ್ವಸಾಹತುವಾದವು ಪ್ರಶ್ನೆ ಮಾಡಿದರೆ ಅಪಾಶ್ಚಾತ್ಯೀಕರಣವು ಪ್ರಶ್ನಿಸುವುದಿಲ್ಲ. ಇದು ಇವೆರಡೂ ಮುಖ್ಯವಾಗಿ ಹೊಂದಿರುವ ಒಂದು ಭಿನ್ನತೆ.

ಜೀವನವನ್ನೆ ಪಣವೊಡ್ಡಿ ಸರಕನ್ನು ಉತ್ಪಾದಿಸುವ ಮತ್ತು ಮರು ಉತ್ಪಾದಿಸುವ ಪ್ರಕ್ರಿಯೆಗಿಂತಲು ಜೀವನದ (ಜೀವನ ಎಂದರೆ ಆದಿಮಾನವ ಮತ್ತು ಮಾನವತಾಗಳ ಇಬ್ಬರ ಜೀವಗಳೂ ಒಂದೇ ಸಮಾನ ಎಂಬ) ಪುನರುತ್ಥಾನ. ಪುರೋಭಿವೃದ್ಧಿಯು ಹೆಚ್ಚು ಮುಖ್ಯವಾದುದು ಎಂದು ನಿರ್ವಸಾಹತೀಯ ಆಯ್ಕೆಗಳು ತಮ್ಮ ಕಾರ್ಯಾಚರಣೆಯನ್ನು ಆರಂಭಿಸುತ್ತವೆ. ಈ ದಿಕ್ಕನ್ನು ನಾನು ಮುಂದೆ ಪಾರ್ಥ ಚಟರ್ಜಿ ಅವರ ಯೂರೋಕೇಂದ್ರೀಯ ಆಧುನಿಕತೆಯ ಮರುಪೂರ್ಣೀಕರಣ ಪ್ರಕ್ರಿಯೆಯನ್ನು ಚರ್ಚಿಸುವ ಮೂಲಕ ಗುರ್ತಿಸಲು ಯತ್ನಿಸುತ್ತೇನೆ. ಇವರ ಈ ಚಿಂತನೆಯು ಯೂರೋಕೇಂದ್ರೀಯ ಆಧುನಿಕತೆಯನ್ನು 'ನಮ್ಮ ಆಧುನಿಕತೆ'ಯಾಗಿ ಪರಿವರ್ತಿಸುತ್ತದೆ. ಅದು ನಿರ್ವಸಾಹತೀಯ ಭವಿಷ್ಯತ್ತುಗಳು ಪ್ರಯೋಗ ಆಗಬಲ್ಲ ಪರಸ್ಪರ ಅಂತಃಸಂಬಂಧ ಇರುವ ಪ್ರಸರಣದ ಹೇಳಿಕೆ ಆಗಿ ಬೆಳೆಯುತ್ತದೆ. ಮತ್ತೊಂದು ಸಂಗತಿ ಎಂದರೆ ನನ್ನ ಮಂಡನೆಯು 'ಮೂಲ' ಅಥವಾ 'ಅಸಲಿತನ' ಎಂಬುದನ್ನು ಒಪ್ಪುವುದಿಲ್ಲ ಮತ್ತು ಪ್ರತಿಪಾದಿಸುವುದಿಲ್ಲ. (ವ್ಯಕ್ತಿನಿಷ್ಠ ಆಧುನಿಕ ನಿಯಂತ್ರಣದ ಒಂದು ಪ್ರಾಥಮಿಕ ನಿರೀಕ್ಷೆ ಎಂದರೆ ಅದು ಮೂಲ ಅಥವಾ ಸ್ವಾಂತಿಕೆ). ಆದರೆ ನಿರ್ವಸಾಹತುವಾದದ ಪ್ರಕ್ರಿಯೆಗೆ ಒಂಚೂರು ಕೊಡುಗೆ ನೀಡಬೇಕೆಂದು ಉದ್ದೇಶಿಸಿದೆ. ಹಾಗೆಯೆ ಸ್ವಾರ್ಥಕೇಂದ್ರಿತ ಉದ್ದೇಶಗಳಿರುವ ಪಾಶ್ಚಾತ್ಯ ಜ್ಞಾನಶಾಸ್ತ್ರವು ಜ್ಞಾನದ ಭೌಗೋಳಿ ಮತ್ತು ದೇಹರಾಜಕಾರಣಗಳನ್ನು ಮರೆಮಾಚಿ ಇರಿಸಿದೆ: ಮತ್ತು ನಿರ್ವಸಾಹತೀಯ ಚಿಂತನೆಯ ಕಾರ್ಯವು ಪಾಶ್ಚಾತ್ಯ ಜ್ಞಾನಶಾಸ್ತ್ರದ ಜ್ಞಾನಿಕ ಬಚ್ಚಿಡುವಿಕೆಯನ್ನು ಬಿಚ್ಚಿಡುತ್ತದೆ. ಹಾಗೇ ಜಾತಿ-ಜನಾಂಗೀಯವಾಗಿ ಅಮೌಲ್ಯಗೊಂಡವರ ಜ್ಞಾನಶಾಸ್ತ್ರಿಕ ಹಕ್ಕುಗಳನ್ನು ಎತ್ತಿ ಹಿಡಿಯುತ್ತದೆ. ಅಲ್ಲದೆ, ಯಾರು ಅಂತಿಮ ತೀರ್ಪು ನೀಡಲು 'ಮೂಲತೆ' ಅಥವಾ 'ಅಸಲಿತನ'ವನ್ನೆ ಆತ್ಯಂತಿಕ ಮಾನದಂಡವಾಗಿ ಬಳಸುತ್ತಾರೋ ಅವರ ವಿರುದ್ಧ ಸೆಣಸಲು ಬೇಕಾದ ಪ್ರತಿವಾದಗಳನ್ನು ಕಟ್ಟಿಕೊಳ್ಳಲು ಈ ನಿರ್ವಸಾಹತೀಯ

ಆಯ್ಕೆಗಳು 'ಮೌನಗಳು' ಏನಿವೆಯೋ ಅವಕ್ಕೆ ಜೋರು ಅವಕಾಶ ನೀಡುತ್ತವೆ ಎಂಬುದೆ ನನ್ನ ನಮ್ರ ಪ್ರತಿಪಾದನೆ.[1]

II

ತಿಳಿಯುವ ಮತ್ತು ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆಗಳಲ್ಲಿನ ಭೌಗೋಳಿ-ಚಾರಿತ್ರಿಕ ಮತ್ತು ಜೀವ-ಚಾರಿತ್ರಿಕ ಲಕ್ಷಣಗಳನ್ನು ಬೆಳಕಿಗೆ ತರುವುದು ಎಂದರೆ ಮೂಲ ಔಪಚಾರಿಕ ನಿರೂಪಣೆಯ ಸಲಕರಣೆಗಳ ಆಮೂಲಾಗ್ರ ಮರುರಚನೆಗೆ (ಉದಾ.ನಿರ್ವಸಾಹತೀಕರಣಕ್ಕೆ) ಅನುವು ಮಾಡಿಕೊಡುವುದೇ ಆಗಿದೆ.2 ಸಂವಾದದ ವಸ್ತುವನ್ನು ಮಾತ್ರವಲ್ಲ ಅದರ ಪರಿಭಾಷೆಯನ್ನೂ ಅಗತ್ಯವಾಗಿ ಬದಲಿಸಬೇಕು ಎಂದು ಯಾರೆಲ್ಲ ಪ್ರತಿಪಾದಿಸಿದ್ದಾರೊ ಅವರನ್ನು ನಾನು ಮೊದಲನಿಂದಲೂ ಬೆಂಬಲಿಸುತ್ತ ಬಂದಿದ್ದೇನೆ. ಪರಿಭಾಷೆಯ ಬದಲಾವಣೆಯು ಶಿಸ್ತೀಯ ಅಥವಾ ಅಂತರ್‌ಶಿಸ್ತೀಯ ವಿವಾದಗಳನ್ನು ಮತ್ತು ವ್ಯಾಖ್ಯಾನಗಳ ಸಂಘರ್ಷಗಳನ್ನು ದಾಟಿ ಹೋಗುವ ಸಾಧ್ಯತೆಗಳನ್ನೂ ಒಳಗೊಂಡಿರುತ್ತದೆ. ಎಲ್ಲಿಯವರೆಗೆ ವಿವಾದಗಳು ಮತ್ತು ವ್ಯಾಖ್ಯಾನಗಳು ಅದದೆ ಹಳೆ ಆಟದ ನಿಯಮಗಳ ಒಳಗೇ ಇರುತ್ತವೋ ಅಲ್ಲಿಯವರೆಗೆ ಜ್ಞಾನದ ನಿಯಂತ್ರಣವು ಪ್ರಶ್ನಿತ ಆಗುವುದೆ ಇಲ್ಲ. ಜ್ಞಾನದ ನಿಂಯಂತ್ರಣದ ವಸಾಹತೀಯ ತಳಾದಿಯನ್ನು ಪ್ರಶ್ನೆಗೆ ಗುರಿ ಮಾಡಬೇಕೆಂದರೆ ನಮ್ಮ ಗಮನವನ್ನು ತಿಳಿದವರಿಂದ ತಿಳಿಸಿದವರ ಕಡೆಗೆ ಬದಲಿಸಲೇಬೇಕಾಗುತ್ತದೆ. ಅಂದರೆ ಇದರರ್ಥ ನಮ್ಮ ನಮ್ಮ ಸ್ಥಳೀಯ ತಿಳುವಳಿಕೆಗಳ ನೆಲೆಗಳನ್ನು ಗಟ್ಟಿಗೊಳಿಸುವ ಕಡೆಗೆ ಚಲಿಸುವುದು ಎಂಬುದೇ ಆಗಿದೆ.

ಮುಂದುವರೆದು ತಿಳುವಳಿಕೆಯ ಔಪಚಾರಿಕ ಸಂರಚನೆಯನ್ನು ಜ್ಞಾನದ ಭೌಗೋಳಿ ಮತ್ತು ಜೀವ-ಚಾರಿತ್ರಿಕ ರಾಜಕಾರಣದ ದೃಷ್ಟಿಕೋನದಿಂದ ಮತ್ತೆ ಮರುಭೇಟಿ ಮಾಡಿದ್ದೇನೆ. ನನ್ನ ಮರುಭೇಟಿಯು ಭಾಷಾಶಾಸ್ತ್ರೀಯಕ್ಕಿಂತ ಜ್ಞಾನಶಾಸ್ತ್ರೀಯ ಆದುದು. ಆದಾಗ್ಯೂ ಸಂವಾದದ ವಸ್ತು ಮಾತ್ರವಲ್ಲದೆ ಪರಿಭಾಷೆಯನ್ನು ಬದಲಾಯಿಸುವುದರ ಮೇಲೆ ನಿಗಾ ಇರಿಸಿದಾಗ ಆಯಾಚಿತವಾಗಿ ತಿಳುವಳಿಕೆಯ ಮೇಲೂ ಒತ್ತು ಬೀಳುವುದು ಸಹಜ. ಪ್ರಾಥಮಿಕ ಸಂಗತಿ ಎಂದರೆ: ಇಲ್ಲಿ ತಿಳಿಸಿದವನ ಜೊತೆಗೇ ತಿಳಿದವನೂ (ಭೌಗೋಳಿ ಮತ್ತು ದೇಹರಾಜಕಾರಣೀಯ ನೆಲೆಯ ತಿಳಿದವನೂ) ಇರುತ್ತಾನೆ. ಆಧುನಿಕ ಜ್ಞಾನಶಾಸ್ತ್ರವು (ಉದಾ. ಶೂನ್ಯ ಬಿಂದುವಿನ ಮದ) ಒಬ್ಬನಲ್ಲೆ ಈ ಇಬ್ಬರನ್ನೂ ಅಡಗಿಸಿ ಇರಿಸಿರುತ್ತದೆ. ಸಂಬಂಧ ಇರದವನಂತೆ ದೂರ ನಿಂತು ನೋಡುವ, ಸತ್ಯ ಮತ್ತು ವ್ಯಕ್ತಿನಿಷ್ಠತೆಯನ್ನು ಅಪೇಕ್ಷಿಸುವ ಒಬ್ಬ ತಟಸ್ಥನ/ಳನ್ನು ಮತ್ತು ಶಿಸ್ತುಬದ್ಧ ನಿಯಮಗಳನ್ನು ನಿಯಂತ್ರಿಸುವ ಹಾಗೂ ತನ್ನನ್ನು ತಾನು ಆಳುವ, ಮೌಲ್ಯಮಾಪಕ ಸ್ಥಾನದಲ್ಲಿ ಸ್ಥಾಪಿಸಿಕೊಂಡ ಒಬ್ಬನ/ಳನ್ನು ಅಡಗಿಸಿ ಇಟ್ಟಿದ್ದಾಗ್ಯೂ ಈ ಎರಡೂ ಅಸ್ತಿತ್ವಗಳು ಒಟ್ಟಿಗೇ ಇರುತ್ತವೆ ಎಂದು ನಾವು ಭಾವಿಸಬೇಕಿದೆ.

ನನ್ನ ವಾದದ ಸ್ವರೂಪವು ಸಂಕ್ಷಿಪ್ತವಾಗಿ ಈ ಕೆಳಕಂಡಂತಿದೆ: ಮೊದಲನೆ ಮತ್ತು ಎರಡನೆ ಭಾಗಗಳಲ್ಲಿ ಶೂನ್ಯಬಿಂದುವಿನ ಜ್ಞಾನಶಾಸ್ತ್ರವನ್ನು ವಿರೋಧಿಸಿ ಭೌಗೋಳಿ-



ಚಾರಿತ್ರಿಕವಾದ ಮತ್ತು ಜೀವ-ಚಾರಿತ್ರಿಕವಾದ ಜ್ಞಾನದ ರಾಜಕಾರಣದ ಬಗ್ಗೆ ಒಂದು ಪೀಠಿಕೆಯನ್ನು ಒದಗಿಸಲಾಗಿದೆ. ಮೂರನೆ ಭಾಗದಲ್ಲಿ ಆಫ್ರಿಕಾ, ಇಂಡಿಯಾ ಮತ್ತು ನ್ಯೂಜಿಲೆಂಡಿನಿಂದ ಹೀಗೆ ಮೂರು ದೃಷ್ಟಾಂತಗಳನ್ನು ತೆಗೆದುಕೊಂಡು ಅವುಗಳಲ್ಲಿ ಹೇಗೆ ಜ್ಞಾನದ ಭೌಗೋಳಿ ಮತ್ತು ದೇಹ-ರಾಜಕಾರಣವು ಅಂತರ್ಗತವಾಗಿದೆ ಎಂಬುದನ್ನು ಪರಿಶೀಲಿಸಿದ್ದೇನೆ. ಪೂರಕವಾಗಿ ಈ ಮೂರರ ಜೊತೆಗೆ ನಾಲ್ಕನೆ ಲ್ಯಾಟಿನ್ ಅಮೆರಿಕಾದ ದೃಷ್ಟಾಂತ ಒಂದನ್ನು ತೆಗೆದುಕೊಂಡೂ ಪರಿಶೀಲಿಸಿದ್ದೇನೆ. ಅಲ್ಲಿ ಕೇವಲ ಬೇರ್ಪಡಿಸಲ್ಪಟ್ಟ ವೀಕ್ಷಕನ ವರದಿಯಂತೆ ವಿಚಾರವನ್ನು ಮಂಡಿಸದೆ: ಇಂದಿನ ಸಂಯುಕ್ತ ಸಂಸ್ಥಾನಕ್ಕೆ ಸೇರಿದ ಕೆರಿಬಿಯನ್ ಮತ್ತು ಲ್ಯಾಟಿನಿಡ್ಯಾಡ್‌ಗಳ ದಕ್ಷಿಣ ಅಮೆರಿಕಾದಿಂದ ಬಂದ ನಿರ್ವಸಾಹತೀಕರಣ ಯೋಜನೆಯೊಂದರ ಮಧ್ಯಪ್ರವೇಶದಂತೆ ಮಂಡಿಸಿದ್ದೇನೆ. ಕಾರಣಮೀಮಾಂಸೆಯ ಭೋಗೋಳ ಮತ್ತು ಮೌಲ್ಯೀಕರಿಸುವ ವಾದಗಳ ಪಲ್ಲಟವನ್ನೂ ಈ ಮಂಡನೆಯ ಗ್ರಹಿಕೆಯು ಒಳಗೊಳ್ಳುತ್ತದೆ. ನಾಲ್ಕನೆ ಭಾಗದಲ್ಲಿ ಜ್ಞಾನದ ಭೌಗೋಳಿ ಮತ್ತು ದೇಹ-ರಾಜಕಾರಣಗಳು ಮತ್ತು ಅವುಗಳ ಜ್ಞಾನಶಾಸ್ತ್ರಿಕ, ನೈತಿಕ ಮತ್ತು ರಾಜಕೀಯ ಪರಿಣಾಮಗಳ ಚರ್ಚೆಗೆ ಮರಳಿದ್ದೇನೆ. ಐದನೆ ಭಾಗದಲ್ಲಿ ಮೇಲೆ ಉಲ್ಲೇಖಿಸಿದ ಮೂರೂ ದೃಷ್ಟಾಂತಗಳ ಎಳೆಗಳನ್ನು ಒಟ್ಟಿಗೇ ಹೆಣೆದು ಒಟ್ಟಾರೆ ನನ್ನ ವಾದದ ಮಂಡನೆಗೆ ಯತ್ನಿಸಿದ್ದೇನೆ. ಇದು ಬಹುಶಃ ಬೇರ್ಪಟ್ಟ ಅನ್ಯ ವೀಕ್ಷಕನೊಬ್ಬನ ವರದಿಯಂತೆ ಕಾಣದೆ ನಿರ್ವಸಾಹತುಶಾಹಿ ಚಿಂತಕನೊಬ್ಬನ ಮಧ್ಯಪ್ರವೇಶದಂತೆ ನಿಮಗೆ ಕಾಣುತ್ತದೆಂದು ಭಾವಿಸುತ್ತೇನೆ.

ಸಂಜ್ಞಾಶಾಸ್ತ್ರ ವಲಯದಲ್ಲಿ ನಿರೂಪಣೆ ಮತ್ತು ನಿರೂಪಿತಗಳ ನಡುವೆ ಎಮಿಲಿ ಬೆನ್‌ವೆನಿಸ್ತೆ ಒಂದು ಮೂಲಭೂತ ವ್ಯತ್ಯಾಸವನ್ನು ಗುರ್ತಿಸುತ್ತಾನೆ. ಕೇಂದ್ರ ಚಂಚಲ ಸಂಜ್ಞೆಯ ಪ್ರತಿಪಾದನೆಗೆ ಮತ್ತು ಸಸ್ಸೂರನ ಸಂಜ್ಞಾಶಾಸ್ತ್ರ ಮತ್ತದರ ಫ್ರೆಂಚ್ ಸಂರಚನಾವಾದದಲ್ಲಿನ ಬೆಳವಿಗೆಗೆ ಪೂರಕವಾಗಿ ಅದನ್ನು ಪ್ರತಿಪಾದಿಸುವುದು ಬೆನ್‌ವೆನಿಸ್ತೆಗೆ ಅಗತ್ಯವಿತ್ತು. ಅಲ್ಲಿ ಬೆನ್‌ವೆನಿಸ್ತೆ ನಿರೂಪಣೆಗೆ ಹೆಚ್ಚಿನ ಗಮನ ಕೊಟ್ಟ. ಹಾಗೆ ಮಾಡುವ ಮೂಲಕ ಸಂಜ್ಞೆಗಳನ್ನು ಉತ್ಪಾದಿಸುವ ಮತ್ತು ಮಾರ್ಪಡಿಸುವ ವಿಚಾರಕ್ಕು ಹೆಚ್ಚು ಗಮನ ಕೊಟ್ಟ. ಆದರೆ ಸಂಜ್ಞೆಯ ಸಂರಚನೆಗೇ (ಅಂದರೆ ನಿರೂಪಣೆಗಿಂತ ನಿರೂಪಿತಕ್ಕೆ) ಹೆಚ್ಚು ಗಮನ ನೀಡಲಿಲ್ಲ. ಈ ವ್ಯತ್ಯಾಸವನ್ನು ಗಮನದಲ್ಲಿ ಇಟ್ಟುಕೊಂಡು ನಾನು ಹೇಳುವುದು ಏನೆಂದರೆ: ವಸಾಹತೀಯ ಅಧಿಕಾರ ಜಾಲದ ಅಂತರ್‌ಸಂಬಂಧಿ ವಲಯಗಳು (ಆರ್ಥಿಕತೆ, ಅಧಿಕಾರಕೇಂದ್ರ, ಲಿಂಗ ಮತ್ತು ಲೈಂಗಿಕತೆ, ಮತ್ತು ಜ್ಞಾನ/ವ್ಯಕ್ತಿನಿಷ್ಠತೆ) ನಿರೂಪಿತದ

ಹಂತದಲ್ಲಿ ಕೆಲಸ ಮಾಡಿದರೆ ಪಿತೃಪ್ರಧಾನತೆ ಮತ್ತು ಜಾತಿ–ಜನಾಂಗೀಯವಾದ ಇವುಗಳು ನಿರೂಪಣೆಯ ನೆಲೆಯಲ್ಲಿ ಕೆಲಸ ಮಾಡುತ್ತದೆ. ಮುಂದೆ ಇದನ್ನು ಇನ್ನಷ್ಟು ವಿಸ್ತರಿಸಬಹುದು. (ಬೆನ್‌ವೆನಿಸ್ತೆ–1970, ತೊದರೊವ್–1970)

ಔಪಚಾರಿಕ ನಿರೂಪಣೆಯ ಉಪಕರಣವನ್ನು ಬೆನ್‌ವೆನಿಸ್ತೆ (ಆತನ ಉದಾಹರಣೆಗಳು ಹೆಚ್ಚು ಯೂರೋಪಿನ ಭಾಷೆಗಳೇ ಆಗಿದ್ದರೂ) ಯಾವುದೇ ಭಾಷೆಯ ಸರ್ವನಾಮ ವ್ಯವಸ್ಥೆಯನ್ನು ಆಧಾರವಾಗಿ ಇಟ್ಟುಕೊಂಡು ಪ್ರತಿಪಾದಿಸಿದ್ದಾನೆ. ಅದಕ್ಕೆ ಸಮಯಸೂಚಿ, ಸ್ಥಳಸೂಚಿ ಸಂಜ್ಞೆಗಳು ಅಥವಾ ಗುರುತುಗಳನ್ನು ಆಧರಿಸಿದ್ದಾನೆ. ಸರ್ವನಾಮ ವ್ಯವಸ್ಥೆಯು ಪ್ರತಿಯೊಂದು ನುಡಿ (ಮೌಖಿಕ ಇಲ್ಲವೆ ಬರಹ) ನಿರೂಪಣೆಯಲ್ಲೂ ಕ್ರಿಯಾಶೀಲವಾಗಿದೆ. ನಿರೂಪಕನನ್ನು ಪ್ರಥಮ ಪುರುಷ ಸರ್ವನಾಮದ ಮೂಲಕವೇ ಸೂಚಿಸಲಾಗಿದೆ (ನಾನು). ನಿರೂಪಕ 'ನಾವು' ಎಂದು ಒಂದು ವೇಳೆ ಹೇಳಿದರೆ ಆಗ ಮೊದಲೆ ಬಳಸಿದ ಪ್ರಥಮ ಪುರುಷ ಸರ್ವನಾಮವು ಹಿಂದೆ ಸರಿದು 'ನಾವು' ಎಂಬುದು ನಿರೂಪಕ ಅಥವಾ ವ್ಯಕ್ತಿ ಇಲ್ಲವೆ ಯಾರಿಗೆ ಹೇಳಲಾಗುತ್ತಿದೆಯೋ ಆ ಎಲ್ಲರಿಗೆ ಅನ್ವಯಿಸುತ್ತದೆ. ಅಥವಾ ನಿರೂಪಕನು 'ನಾವು' ಎಂದಾಗ ಯಾರಿಗೆ ಹೇಳಲಾಗುತ್ತಿದೆಯೋ ಅವರನ್ನು ಒಳಗೊಳ್ಳದೆ ತನ್ನನ್ನು ಅಥವಾ ಇನ್ನಾರನ್ನೋ ಸೂಚಿಸಬಹುದು. ಆಗ ಉಳಿದ ಸರ್ವನಾಮಗಳು ಆ ನಿರೂಪಣೆಯ ನಾನು/ನಾವು ಸುತ್ತ ಕ್ರಿಯಾಶೀಲ ಆಗುತ್ತವೆ.

ಸಮಯಸೂಚಿ ಮತ್ತು ಸ್ಥಳಸೂಚಿ ಗುರುತುಗಳ ವಿಚಾರದಲ್ಲು ಹೀಗೇ ಆಗುತ್ತದೆ. ನಿರೂಪಕ/ಕಿ ಬರಿ ವರ್ತಮಾನದಲ್ಲಿ ಮಾತ್ರ ನಿರೂಪಿಸಬಲ್ಲ/ಳು. ನಿರೂಪಣೆಯ ವರ್ತಮಾನದ ಮೂಲಕ ಮಾತ್ರವೇ ಅದರ ಭೂತ ಮತ್ತು ಭವಿಷ್ಯತ್ತುಗಳು ಅರ್ಥಪೂರ್ಣ ಆಗಬಲ್ಲುವು. ನಿರೂಪಕಿ ಆಕೆ ನಿರೂಪಿಸುವ ಸಂದರ್ಭದಲ್ಲಿ ಎಲ್ಲೇ ಇದ್ದರೂ'ಇಲ್ಲಿ' ಎಂದಷ್ಟೆ ಹೇಳುತ್ತಾಳೆ. ಹಾಗಾಗಿ 'ಅಲ್ಲಿ', 'ಹಿಂದೆ', 'ನಂತರ', 'ಅಕ್ಕ ಮತ್ತು ಪಕ್ಕ' ಮುಂತಾದುವೆಲ್ಲ ನಿರೂಪಕಿಯ 'ಇಲ್ಲಿ' ಎಂಬ ಮಾತಿನ ಮೂಲಕವೇ ಅರ್ಥ ಪಡೆಯಬೇಕು.

ಈಗ ಎರಡನೆ ಹಂತಕ್ಕೆ ಹೋಗೋಣ; ಭಾಷಾಶಾಸ್ತ್ರೀಯ ತತ್ವ ಮತ್ತು ವಿಶ್ಲೇಷಣೆಯ ಚೌಕಟ್ಟು ವಾಕ್ಯದಿಂದ ಸಂಕಥನಕ್ಕೆ ವಿಸ್ತರಣೆಗೊಂಡ ಕಾರಣದಿಂದ 'ಆಚಾರ ಚೌಕಟ್ಟು' ಅಥವಾ 'ಸಂವಾದ ಚೌಕಟ್ಟು'ಗಳನ್ನು ಕೂಡ ಇಲ್ಲಿ ಬಳಸಲು ಸಾಧ್ಯವಾಗಿದೆ. ಸಂವಾದ, ಪತ್ರಲೇಖನ, ಬೇರೆ ಬೇರೆ ರೀತಿಯ ಸಭೆಗಳು ಮುಂತಾದ ಕಡೆ ನಿಜವಾಗಿಯೂ ನಿರೂಪಣೆಯ ಮಾಮೂಲು ಉಪಕರಣಗಳಿಗಿಂತ ಹೆಚ್ಚಿನ ನೆರವು ಬೇಕಾಗುತ್ತದೆ. ವ್ಯವಹಾರದ ಭೇಟಿಗಳಿರಬಹುದು, ಸಾಮಾನ್ಯ ಮಾತುಕತೆ ಇರಬಹುದು, ಅಂತರ್ಜಾಲ ಸಂದೇಶಗಳೆ ಇರಬಹುದು ಅಥವಾ ಯಾವುದೇ ಅಗಿರಬಹುದು ಅಲ್ಲೆಲ್ಲ ಇದು ಎಲ್ಲ ಭಾಗಿಗಳಿಗು ಪರಿಚಿತವಿರುವ ಒಂದು ಚೌಕಟ್ಟನ್ನು ಬಯಸುತ್ತದೆ. ಆದರೆ ದೈನಂದಿನ ವ್ಯವಹಾರದಲ್ಲಿ ಯಾವಾಗಲೂ ನಿರ್ದಿಷ್ಟ ಚೌಕಟ್ಟುಗಳನ್ನು ವಿಧಿಸಿ, ನಿಯಂತ್ರಿಸುವ ಕೆಲಸ ನಡೆಯುವುದಿಲ್ಲವಾದರೂ ಭಾಷೆಯಲ್ಲಿ ಸರ್ವಸಹಮತದ ಒಪ್ಪಂದಗಳ ಮೂಲಕ ಅದು ನಡೆಯುತ್ತದೆ. ಆದರೆ ಇಂದು ಶಿಸ್ತೀಯ ಜ್ಞಾನಕ್ಕೆ 'ವಿದ್ವತ್ ಶಿಸ್ತುಗಳು' ಎಂದು ಕರೆಯಲ್ಪಡುವ ಹೆಚ್ಚು ಸಂಕೀರ್ಣ ಮತ್ತು ನಿಯಂತ್ರಿತ ಚೌಕಟ್ಟುಗಳೇ ಬೇಕಾಗಿವೆ. ಹಿಂದೆ ಯೂರೋಪಿನ

ಜ್ಞಾನೋದಯ ಕಾಲದಲ್ಲಿ ಶಿಸ್ತುಗಳು ಟ್ರಿವಿಯಂ (ಅಂದರೆ ವ್ಯಾಕರಣ, ತರ್ಕಶಾಸ್ತ್ರ ಮತ್ತು ಮೀಮಾಂಸೆಗಳ) 'ತ್ರಿವಳಿ' ಮತ್ತು ಕ್ವಾಡ್ರಿವಿಯಂ (ಅಂದರೆ ಅಂಕಗಣಿತ, ರೇಖಾಗಣಿತ, ಸಂಗೀತಶಾಸ್ತ್ರ ಮತ್ತು ಮೀಮಾಂಸೆಗಳ) 'ಚತುರ್ವಳಿ' ಎಂದಾಗಿ ವರ್ಗೀಕರಣಗೊಂಡಿದ್ದವು. ಅದೂ ಇವು ಕ್ರೈಸ್ತ ಮತಶಾಸ್ತ್ರದ ಛಾವಣಿಯ ಕೆಳಗೇ ಇದ್ದಂಥವು. ಈ ಛಾವಣಿಯ ಆಚೆಗಿನ ಲೋಕದಲ್ಲಿ ಪೇಗನ್ನರು, ಯಹೂದೇತರರು, ಸಾರಸರು ಅಥವಾ ಅರೇಬಿಯಾದ ಮುಸಲ್ಮಾನರು ಇದ್ದರು.

18ನೆ ಶತಮಾನದ ಸಂದರ್ಭದಲ್ಲಿ ಯೂರೋಪಿನಲ್ಲಿ ಹಲವು ಜಾತ್ಯತೀತ ಬೆಳವಣಿಗೆಗಳು ಹಲವು ಪಲ್ಲಟಗಳಿಗೆ ಕಾರಣವಾದವು. ಆಲೋಚನಾಕ್ರಮದಲ್ಲಿ, ತಿಳುವಳಿಕೆಯ ಚೌಕಟ್ಟುಗಳಲ್ಲಿ, ಜ್ಞಾನದ ಸಂಘಟನೆಯಲ್ಲಿ, ಶಿಸ್ತುಗಳು ಮತ್ತು ಸಂಸ್ಥೆಗಳಲ್ಲಿ (ವಿಶ್ವವಿದ್ಯಾಲಯಗಳಲ್ಲಿ) ತೀವ್ರತರವಾದ ರೂಪಾಂತರಗಳಾದವು. ಇಮ್ಯಾನುಯೆಲ್ ಕ್ಯಾಂಟನ, ಅಲೆಕ್ಸಾಂಡರ್ ವೊನ್ ಹಂಬೋಲ್ಟನ ಮಾದರಿಯು3 ಪುನರುಜ್ಜೀವನ ಕಾಲದ ವಿಶ್ವವಿದ್ಯಾಲಯಗಳ ಸ್ವರೂಪ ಮತ್ತು ಗುರಿಗಳನ್ನು ಸ್ಥಾನಾಂತರ ಮಾಡಿತು. ಬದಲಿಗೆ ಮತೀಯ ವಿಜ್ಞಾನದ ಮತ್ತು ಮತೀಯ ತತ್ವಜ್ಞಾನದ ತಳಹದಿಯ ಮೇಲೆ ಸ್ಥಾಪಿತವಾದ ಪುನರುಜ್ಜೀವನ ಕಾಲವನ್ನು (ಗೆಲಿಲಿಯೋನಿಂದ ನ್ಯೂಟನ್‌ವರೆಗೆ) ಜಾತ್ಯತೀತ-ಧರ್ಮಾತೀತಗೊಳಿಸುವ ಕೆಲಸವನ್ನು ಮಾಡಿತು. ಜೊತೆಗೆ ಇಬ್ಬರು ಕ್ರೈಸ್ತ ಮತಶಾಸ್ತ್ರದ ವಿರುದ್ಧ ಸಮರವನ್ನೇ ಸಾರಿದರು. (ಕ್ಯಾಂಟ್) ಹತ್ತೊಂಬತ್ತನೆ ಶತಮಾನದ ಮೊದಲೆರಡು ದಶಕಗಳಲ್ಲಿ ಜ್ಞಾನದ ಮರುಸಂಯೋಜನೆ ಮತ್ತು ಹೊಸಜ್ಞಾನ ಶಿಸ್ತುಗಳ ರಚನೆಯು (ಜೀವಶಾಸ್ತ್ರ, ಅರ್ಥಶಾಸ್ತ್ರ, ಮನಶ್ಶಾಸ್ತ್ರ) ಹಳೆ ತ್ರಿವಳಿ ಮತ್ತು ಚತುರ್ವಳಿ ಜ್ಞಾನರೂಪಗಳನ್ನು ಒಂದಿಕ್ಕೆ ಮಾನವ ವಿಜ್ಞಾನಗಳು (ಸಮಾಜವಿಜ್ಞಾನಗಳು ಮತ್ತು ಮಾನವಿಕಗಳು) ಮತ್ತು ನೈಸರ್ಗಿಕ ವಿಜ್ಞಾನಗಳ ನಡುವೆ ಹೊಸ ಸಂರಚನೆಗೆ ದಾಪುಗಾಲಿಟ್ಟಿತು.4 ನಂತರ ವಿಲ್‌ಹೆಲ್ಮ್ ಡಿಲ್ತೆ (1911) 'ವ್ಯಾಖ್ಯಾನಾತ್ಮಕ' ಮತ್ತು 'ಪ್ರಯೋಗಾತ್ಮಕ' ವಿಜ್ಞಾನಗಳು ಎಂಬ ಬಹು ಮುಖ್ಯವಾದ ಜ್ಞಾನಿಕ ಭೇದಗಳನ್ನು ಪ್ರತಿಪಾದಿಸಿದ. ವ್ಯಾಖ್ಯಾನಾತ್ಮಕ ವಿಜ್ಞಾನವು ಹೆಚ್ಚು ಅರ್ಥ ಮತ್ತು ವ್ಯಾಖ್ಯಾನಗಳನ್ನು ಆಧರಿಸಿದ ಮಾನವಿಕಗಳಿಗೆ ಸಂಬಂಧಿಸಿದ ವರ್ಗವಾದರೆ ಪ್ರಯೋಗಾತ್ಮಕವು ನಿರ್ದಿಷ್ಟ ನಿಯಮಗಳು ಮತ್ತು ಸಮರ್ಥನೆಗಳನ್ನು ಆಧರಿಸಿದ ನಿಸರ್ಗ ವಿಜ್ಞಾನಗಳಿಗೆ ಸಂಬಂಧಿಸಿದ ವರ್ಗವಾಗಿತ್ತು.5 ಇವತ್ತಿಗೂ ಕೂಡ ಇದನ್ನು ಜನ ಮಾನ್ಯ ಮಾಡುತ್ತಾರೆ. ಆಳದಲ್ಲಿ ಅಧ್ಯಯನ ಶಿಸ್ತುಗಳು ಒಂದಲ್ಲ ಒಂದು ದಿಕ್ಕಿನಲ್ಲಿ ತಮ್ಮ ಚೌಕಟ್ಟುಗಳನ್ನು, ಗಡಿಗೆರೆಗಳನ್ನು ದಾಟವರೂ ಅಂತರ್‌ಶಿಸ್ತೀಯತೆಯ ಕಡೆಗೆ ಚಲನೆ ಉಂಟಾಗಿದ್ದರೂ ಈ ವ್ಯತ್ಯಾಸಗಳನ್ನು ಮೀರಿ ಏನೂ ಘಟಿಸಿಲ್ಲ.

ಹಾಗಾಗಿ ನಾವು ಔಪಚಾರಿಕ ನಿರೂಪಣೆಯ ಉಪಕರಣಗಳಿಂದ ಸಂವಾದದ ಚೌಕಟ್ಟುಗಳಿಗೆ, ಅಧ್ಯಯನ ಶಿಸ್ತುಗಳಿಗೆ, ಶಿಸ್ತುಗಳಿಗೂ ಮೀರಿದ ಏನೋ ಒಂದರ ಕಡೆಗೆ ಅಂದರೆ 'ಲೋಕವಿಜ್ಞಾನ'ದ ಕಡೆಗೆ ಚಲಿಸಿದ್ದೇವೆ. ಆಗ ಪುನರುಜ್ಜೀವನ ಕಾಲೀನ ಪಾಶ್ಚಾತ್ಯ ಆಧುನಿಕ ಚಿಂತನೆಯಲ್ಲಿನ ಜ್ಞಾನ-ನಿರ್ಮಾಣದ ಇತಿಹಾಸವು ಧರ್ಮಶಾಸ್ತ್ರ ಮತ್ತು-ವಿಜ್ಞಾನಗಳನ್ನು(ತತ್ವಶಾಸ್ತ್ರಗಳನ್ನು) ಲೋಕವಿಜ್ಞಾನದ ಎರಡು ಚೌಕಟ್ಟುಗಳನ್ನಾಗಿ

ಪಡೆಯುತ್ತದೆ. ಹಾಗೆಯೆ ಒಂದು ಹಂತದಲ್ಲಿ ಈ ಎರಡೂ ಚೌಕಟ್ಟುಗಳು ಪರಸ್ಪರ ಸ್ಪರ್ಧಿಸುವ ಪರಿಸ್ಥಿತಿಯೂ ಬರಬಹುದು. ಒಂದು ವೇಳೆ ಈ ಎರಡೂ ಚೌಕಟ್ಟುಗಳನ್ನು ಲಕ್ಷಿಸದೆ ಜ್ಞಾನಗಳನ್ನು ಅಮಾನ್ಯ ಮಾಡುವ ಸ್ಥಿತಿ ಬಂದಲ್ಲಿ ಆಗ ಇವು ಪರಸ್ಪರ ಸಹಯೋಗ ನೀಡುವ ಪರಿಸ್ಥಿತಿಯೂ ಬರಬಹುದು. ಪಾಶ್ಚಾತ್ಯ ಯೂರೋಪಿನಲ್ಲಿ ಈ ಎರಡೂ ಚೌಕಟ್ಟುಗಳು ಬಹಳ ಚೆನ್ನಾಗಿ ಸಾಂಸ್ಥಿಕವಾಗಿ ಮತ್ತು ಭಾಷಾಶಾಸ್ತ್ರೀಯವಾಗಿ ಪೋಷಿತವಾಗಿವೆ. ಯೂರೋಪಿನ ವಿಶ್ವವಿದ್ಯಾಲಯಗಳಲ್ಲಿ ಸಾಂಸ್ಥಿಕವಾಗಿ ಮತ್ತು ಆಧುನಿಕ ಯೂರೋಪಿನ ಆರೂ ಸಾಮ್ರಾಜ್ಯಶಾಹಿ ಭಾಷೆಗಳ ಮೂಲಕ ಭಾಷಾಶಾಸ್ತ್ರೀಯವಾಗಿ ಈ ಚೌಕಟ್ಟುಗಳು ಬೆಳೆದಿವೆ. ಭಾಷಾಶಾಸ್ತ್ರೀಯವಾಗಿ ಇವು ಪುನರುಜ್ಜೀವನದಿಂದ ಜ್ಞಾನೋದಯದವರೆಗೆ ಪ್ರಬಲವಾಗಿದ್ದ ಇಟಾಲಿಯನ್, ಸ್ಪ್ಯಾನಿಶ್ ಮತ್ತು ಪೋರ್ಚುಗೀಸ್ ಭಾಷೆಗಳಲ್ಲಿ ಮತ್ತು ಜ್ಞಾನೋದಯದ ನಂತರದಲ್ಲಿ ಬಲಶಾಲಿಯಾಗಿರುವ ಜರ್ಮನ್, ಫ್ರೆಂಚ್ ಮತ್ತು ಇಂಗ್ಲಿಶ್ ಭಾಷೆಗಳಲ್ಲಿ ಸಾಕಷ್ಟು ಬಳಕೆಗೊಂಡಿವೆ. ಈ ಆರೂ ಯೂರೋಪೀಯ ಜ್ಞಾನಭಾಷೆಗಳ ಹಿಂದಿನ ಬೆನ್ನೆಲುಬುಗಳೆಂದರೆ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳು. ಅರೇಬಿಕ್ ಅಥವಾ ಮಂಡಾರಿ ಅಲ್ಲ, ಹಿಂದಿ ಅಥವಾ ಉರ್ದು ಅಲ್ಲ, ಆಯ್ಮಾರ ಅಥವಾ ನಹುವತಲ್ ಅಲ್ಲ.

ಕಾಲಾನಂತರದಲ್ಲಿ ಅಮೆರಿಕಾದಿಂದ ಏಷ್ಯಾ ಮತ್ತು ಆಫ್ರಿಕಾದವರೆಗೆ ನಿರಂತರವಾಗಿ ವಸಾಹತುಗಳನ್ನು ಸ್ಥಾಪಿಸಲು ಬೇಕಿದ್ದ ಜ್ಞಾನದ ಪರಿಕಲ್ಪನೆಯ ಸೃಷ್ಟಿಯ ಹಿಂದಿನ 'ಸಾಧನ ಸಲಕರಣೆ'ಗಳನ್ನು ಒದಗಿಸಿದ್ದೇ ಈ ಮೇಲೆ ಉಲ್ಲೇಖಿಸಿದ ಗ್ರೀಕ್ ಮತ್ತು ಲ್ಯಾಟಿನ್‌ಗಳನ್ನು ಆಧರಿಸಿದ ಆರೂ ಭಾಷೆಗಳು. ಅಮೇರಿಕಾಗಳಲ್ಲಿ ನಾವು ಏಷ್ಯಾ ಮತ್ತು ಆಫ್ರಿಕಾದ ಭಾಗಗಳಿಗೆ ಏನೋ ಒಂಥರ ಅಪರಿಚಿತವಾದ ಸಂಸ್ಥೆಗಳ ಜೊತೆ ಮುಖಾಮುಖಿ ಆಗುತ್ತಿದ್ದೇವೆ. ಅದೂ ವಸಾಹತೀಯ ಯೂರೋಪಿನ ವಿಶ್ವವಿದ್ಯಾಲಯಗಳಾದ ಸ್ಯಾಂಟೋ ಡೊಮಿಂಗೋ ವಿ.ವಿ.(1538), ಮೆಕ್ಸಿಕೊ ವಿ.ವಿ. (1551), ಸ್ಯಾನ್ ಮಾರ್ಕೋಸ್ ವಿ.ವಿ. ಲಿಮಾ (1551) ಮತ್ತು ಹಾರ್ವರ್ಡ್ ವಿಶ್ವವಿದ್ಯಾಲಯ (1636) ಇಂಥವುಗಳ ಜೊತೆ.



ಭಾಷಾಶಾಸ್ತ್ರಿಕ, ಸಾಂಖ್ಯಿಕ ಸಂಸ್ಥಾಪನೆ, ನಿರ್ವಹಣೆ ಮತ್ತು ಆಚಾರಗಳ ಜ್ಞಾನವನ್ನು ರೂಪಿಸುವ ಕಾರ್ಯಗಳು ನನ್ನನ್ನು ಬೆನ್‌ವೆನಿಸ್ತೆಯ 'ಔಪಚಾರಿಕ ನಿರೂಪಣೆಯ ಉಪಕರಣ'ಗಳನ್ನು ಇನ್ನಷ್ಟು ವಿಸ್ತರಿಸಲು ಮತ್ತು ನಿರೂಪಣೆ-ಜ್ಞಾನರೂಪಣೆಗಳನ್ನು ಇನ್ನಷ್ಟು ವಿವರಿಸಲು ಬೆಂಬಲಿಸಿವೆ. ಅಲ್ಲದೆ ಜ್ಞಾನದ ಪಾಶ್ಚಿಮಾತ್ಯ (ಸಂಕ್ಷಿಪ್ತವಾಗಿ ನಾನು ಮೇಲೆ ಹೇಳಿದ ಭಾಷಾಶಾಸ್ತ್ರಿಕ ಮತ್ತು ಸಾಂಖ್ಯಿಕ ಅರ್ಥದಲ್ಲಿ) ಸಂಸ್ಥಾಪನೆ, ಅರ್ಥೈಸಿಕೊಳ್ಳುವಿಕೆ (ಜ್ಞಾನಶಾಸ್ತ್ರ ಮತ್ತು ಅರ್ಥವ್ಯಾಖ್ಯಾನಶಾಸ್ತ್ರ) ಮತ್ತು ಯೂರೋಪೇತರ ಭಾಷೆಗಳ, ಚೀನಾದ ಸಂಸ್ಥೆಗಳ6 ನಡುವಣ ಸಂಘರ್ಷವನ್ನು ಇನ್ನಷ್ಟು ವಿಸ್ತರಿಸಲೂ ಬೆಂಬಲಿಸಿವೆ. ಜೊತೆಗೆ ಇಸ್ಲಾಮಿನ ಖಲೀಫಗಿರಿ ಅಥವಾ 'ಮಾಯ' ಸಂಸ್ಥೆಗಳಲ್ಲಿನ ಶಿಕ್ಷಣ, 'ಎನ್‌ಸೈಕ್ಲೋಪೀಡಿಯ ಬ್ರಿಟಾನಿಕ' ವಿನ್ಯಾಸಗೊಳಿಸಿ ಅರ್ಥೈಸಿದ 'ಅಜ್‌ಟೆಕ್' ಮತ್ತು 'ಇಂಕಾ'ಗಳ 'ಪುರಾತನ ಮತ್ತು ಪ್ರಾಚೀನ ನಾಗರೀಕತೆಗಳಲ್ಲಿನ ವಿದ್ಯಾಭ್ಯಾಸ'7 ಇವುಗಳ ಜೊತೆಗಿನ ಅದರ (ಪಾಶ್ಚಿಮಾತ್ಯ ಜ್ಞಾನದ) ಸಂಘರ್ಷವನ್ನು ಇನ್ನಷ್ಟು ವಿವರಿಸಲು ಮತ್ತು ಇವುಗಳ ನಡುವಿನ ಗಡಿಗೆರೆಗಳ ಬಗ್ಗೆ ಇನ್ನಷ್ಟು ಗಮನ ಹರಿಸಲು ಅನುವು ಮಾಡಿಕೊಟ್ಟಿವೆ.

ಬೆನ್‌ವೆನಿಸ್ತೆಯ ಔಪಚಾರಿಕ ನಿರೂಪಣೆಯ ಉಪಕರಣವನ್ನು ನಾನು ವಿಸ್ತರಿಸುವ ಬಗೆಗೆ ಮನಸ್ಸಿನಲ್ಲಿ ಇಟ್ಟುಕೊಂಡಿದ್ದ ಭಾವನೆಯನ್ನು ಬಹುಶಃ ಫ್ರಾನ್ಜ್ ಫ್ಯನಾನ್‌ನಂತೆ ಪರಿಕಲ್ಪಿಸಿದವರು ಇನ್ನಾರೂ ಇರಲಾರರು. 1960ರ ದಶಕದಲ್ಲಿ ಸಂರಚನಾವಾದ ಮತ್ತು ಸಂರಚನೋತ್ತರವಾದಗಳ ಅಬ್ಬರದ ಕಾಲದಲ್ಲಿ ಭಾಷೆಯ ಬಗ್ಗೆ ಯಾರೂ ಹೇಳಲಾಗದ ಸಂಗತಿಗಳನ್ನು ಫ್ಯನಾನ್ ತನ್ನ 'ಬ್ಲಾಕ್ ಸ್ಕಿನ್ ವೈಟ್ ಮಾಸ್ಕ್ಸ್' (1967) ಕೃತಿಯಲ್ಲಿ ಹೇಳಿದ್ದಾನೆ. ಆದರೂ ಶಬ್ದಾರ್ಥ, ಹಸ್ತಪ್ರತಿಶಾಸ್ತ್ರ ಇಂತಹ ಹಿನ್ನೆಲೆಯಲ್ಲಿ ಬೆನ್‌ವೆನಿಸ್ತೆಯ ಭಾಷಾಚಿಂತನೆಗಳನ್ನು ಅಭ್ಯಸಿಸಿದ ಯಾರೂ ಈ ಬಗ್ಗೆ ಗಮನವನ್ನೆ ಹರಿಸಿಲ್ಲ. ಫ್ಯನಾನ್ ಏನು ಹೇಳಿದ್ದಾನೆಂದರೆ:

ಮಾತಾಡುವುದು ಎಂದರೆ ನಿರ್ದಿಷ್ಟ ವಾಕ್ಯಗಳನ್ನು ಬಳಸುವ ಯಾವುದೇ ಭಾಷೆಯ ಶಬ್ದರಚನಾಶಾಸ್ತ್ರವನ್ನು ಗ್ರಹಿಸುವ, ಇದೆಲ್ಲವನ್ನೂ ಮೀರಿ ಒಂದು ಸಂಸ್ಕೃತಿಯನ್ನು ಕಲ್ಪಿಸಿಕೊಳ್ಳುವ ಮತ್ತು ಒಂದು ನಾಗರೀಕತೆಯ ತೂಕವನ್ನು ಕಾಪಾಡುವ ಸಾಮರ್ಥ್ಯ... ಈ ಅಧ್ಯಾಯದಲ್ಲಿ ನಾವು ಪರಿಶೀಲಿಸುವ ಸಮಸ್ಯೆ ಯಾವುದೆಂದರೆ ಅಂಟಿಲೆ (ದಕ್ಷಿಣ ಅಮೆರಿಕ, ಲ್ಯಾಟಿನ್ ಅಮೆರಿಕ ಮತ್ತು ಕೆರಿಬಿಯನ್) ದ್ವೀಪಗಳ ನೀಗ್ರೋ, ಆತನ ಫ್ರೆಂಚ್ ಭಾಷೆಯ ಮೇಲಿನ ಪ್ರಭುತ್ವದ ನೇರ ಅನುಪಾತಕ್ಕೆ ಅನುಗುಣವಾಗಿ ಬಿಳಿಯ ಆಗಿ ಇರುತ್ತಾನೆ-ಅಂದರೆ ಸರಿಸುಮಾರು ನಿಜ ಮಾನವನಂತೆ ಕಾಣಿಸುತ್ತಾನೆ ಎಂಬುದರ ಬಗೆಗಿನದು.8

ಫ್ಯನಾನ್‌ನ ತತ್ವ ಸಿದ್ಧಾಂತವು ಅಧ್ಯಯನ ಶಿಸ್ತುಗಳಿಗೆ ಹೆಚ್ಚು ಅನ್ವಯಿಸುತ್ತದೆ. ಅಷ್ಟೇ ಅಲ್ಲ ಅದು ಸಾಮಾನ್ಯವಾಗಿ ಜ್ಞಾನವಲಯಗಳಿಗು ಅನ್ವಯವಾಗುತ್ತದೆ. ಅಂಟಿಲೆ ದ್ವೀಪಗಳ ನೀಗ್ರೋ, ಭಾರತದ ಭಾರತೀಯ ಮತ್ತು ಅಮೆರಿಕಾದ ರೆಡ್ ಇಂಡಿಯನ್ನರು ಅಥವಾ ನ್ಯೂಜಿಲೆಂಡ್, ಆಸ್ಟ್ರೇಲಿಯಾದ ರೆಡ್ ಇಂಡಿಯನ್ನರು ಉಪ-ಸಹರಾದ ಆಫ್ರಿಕದಿಂದ

ಬಂದ ನೀಗ್ರೋ, ಇಂಡೋನೇಶ್ಯಾ ಅಥವಾ ಮಧ್ಯಪ್ರಾಚ್ಯದಿಂದ ಬಂದ ಮುಸಲ್ಮಾನ ಮುಂತಾದವರೆಲ್ಲ ಅವರವರ ಶಿಸ್ತೀಯ ಪದ್ಧತಿಗಳ ಮೇಲಿನ ಪ್ರಭುತ್ವದ ನೇರ ಅನುಪಾತಕ್ಕೆ ಅನುಗುಣವಾಗಿ ಸರಿಸುಮಾರು ನಿಜಮಾನವರಂತೆ ಕಾಣಿಸುತ್ತಾರೆ. ಆಧುನಿಕ ವಸಾಹತೀಯ ನಿರೂಪಣೆಗಳ (ಶಿಸ್ತುಗಳು ಮತ್ತು ಸಂಸ್ಥೆಗಳು) ಸ್ಥಳೀಕತೆಯ ಸಾಮ್ರಾಜ್ಯಶಾಹಿ ವರ್ತನೆಯ ಮೇಲೆ ಆದ ಹಲ್ಲೆಗೆ ನಿಜವಾಗಿಯೂ ಇದೊಂದು ಒಳ್ಳೆಯ ನಿದರ್ಶನ ಎಂಬುದನ್ನು ನಾವು ಅನುಮಾನದಿಂದಲೆ ನೋಡಬೇಕಾಗುತ್ತದೆ. ಇದಕ್ಕೆ ಉದಾಹರಣೆ ಅಥವಾ ದೃಷ್ಟಾಂತ ಎಂಬಂತೆ ಶೀತಲಸಮರದ ಸಂದರ್ಭದಲ್ಲಿ ಆಫ್ರಿಕಾ ಮತ್ತು ದಕ್ಷಿಣ ಅಮೇರಿಕಾದ ಹಲವು ತತ್ವಜ್ಞಾನಿಗಳು ಈ ಪ್ರಶ್ನೆಯನ್ನು ಎತ್ತಿದ್ದಾರೆ. ಹಾಗೆಯೇ ಇಂದು ಇದೇ ಪ್ರಶ್ನೆಯನ್ನು ಅಮೇರಿಕಾ ಸಂಯುಕ್ತ ಸಂಸ್ಥಾನದ ಲ್ಯಾಟಿನೋ ಮತ್ತು ಲ್ಯಾಟಿನಾ ತತ್ವಜ್ಞಾನಿಗಳು ಕೇಳುತ್ತಿದ್ದಾರೆ.

ಈ ಸಮಸ್ಯೆಯನ್ನು ಉತ್ತರಿಸಲು ಈಗ್ಗೆ ಕೆಲ ವರ್ಷಗಳ ಹಿಂದೆ (ಮಿಗ್ನೋಲೊ 2002) ಭೌಗೋಳಿ–ರಾಜಕಾರಣ, ಜ್ಞಾನದ–ದೇಹ ರಾಜಕಾರಣ ಮತ್ತು ವಸಾಹತೀಯ ಜ್ಞಾನಶಾಸ್ತ್ರೀಯ ತಾರತಮ್ಯ ಇಂತಹ ಪರಿಕಲ್ಪನೆಗಳನ್ನು ಪರಿಚಯಿಸಿದ್ದೇನೆ. ಈ ಪರಿಕಲ್ಪನೆಗಳು ಜ್ಞಾನಶಾಸ್ತ್ರೀಯ ಅಸಹಕಾರ ಮತ್ತು ಜ್ಞಾನಶಾಸ್ತ್ರ ಮತ್ತು ರಾಜಕೀಯಗಳಲ್ಲಿನ ನಿರ್ವಸಾಹತೀಕರಣದ ಆಯ್ಕೆ ಎಂಬ ಶೀರ್ಷಿಕೆಯಲ್ಲಿ ಪ್ರಸ್ತಾಪಿಸಿರುವ ಸಮಸ್ಯೆಗಳತ್ತ ನಮ್ಮನ್ನು ಕರೆದೊಯ್ಯುತ್ತವೆ.

III

ಒಂದು ಭಾಷೆಯನ್ನು ಮಾತನಾಡಬೇಕು ಎಂದರೆ ಅದರ ನಾಗರೀಕತೆಯ ಭಾರವನ್ನು ಹೊರಬೇಕು. ಹಾಗೆಯೇ ಶಿಸ್ತೀಯ ಜ್ಞಾನವನ್ನು ಸೃಷ್ಟಿಸುವ ಕೆಲಸದಲ್ಲಿ ತೊಡಗಬೇಕು. ಎಂದರೆ ಆ ಶಿಸ್ತಿನ ಭಾಷೆಯ ಮೇಲೆ ಪ್ರಭುತ್ವವನ್ನು ಎರಡು ಸ್ತರಗಳಲ್ಲಿ ಪಡೆಯಬೇಕು. ನೀವು ಸ್ಪ್ಯಾನಿಶ್, ಪೋರ್ಚುಗೀಸ್, ಅರೇಬಿಕ್, ಮಂಡಾರಿ, ಬೆಂಗಾಲಿ, ಎಕಾನ್ ಇಂತಹ ಭಾಷೆಗಳಲ್ಲಿ ಖಂಡಿತಾ ಸಮಾಜಶಾಸ್ತ್ರವನ್ನು ಸೃಷ್ಟಿಸಬಹುದು–ಬರೆಯಬಹುದು. ಆದರೆ ಹಾಗೆ ಮಾಡುವಾಗ ಮುಖ್ಯವಾಹಿನಿಯ ಶಿಸ್ತೀಯ ಚರ್ಚೆಗಳಿಂದ ನೀವು ಆಚೆ ಉಳಿಯುವ ತೊಡಕನ್ನು ಎದುರಿಸಬೇಕಾಗುತ್ತದೆ. ಅಂತಹ ಬರವಣಿಗೆ ಒಂದು ರೀತಿಯಲ್ಲಿ 'ಸ್ಥಳೀಯ ಸಮಾಜಶಾಸ್ತ್ರ' ಎನ್ನಿಸಿಕೊಳ್ಳುತ್ತದೆ. ಹೌದು; ಫ್ರೆಂಚ್, ಜರ್ಮನ್, ಇಂಗ್ಲಿಶ್‌ಗಳಲ್ಲಿ ಸಮಾಜಶಾಸ್ತ್ರ ಬರೆಯುವುದೂ ಕೂಡ ಸ್ಥಳೀಯವೇ. ಆದರೆ ವ್ಯತ್ಯಾಸ ಇರುವುದು ಎಲ್ಲಿ ಎಂದರೆ ಇಲ್ಲಿ ಬರೆದರೆ( ಫ್ರೆಂಚ್, ಜರ್ಮನ್, ಇಂಗ್ಲಿಶ್) ನಿಮ್ಮನ್ನು ಜಗತ್ತಿನ ಅನೇಕ ವಿದ್ವಾಂಸರು ಓದುತ್ತಾರೆ. ಆದರೆ ಅಲ್ಲಿ ಬರೆದರೆ ನಿಮ್ಮನ್ನು ಯಾರೂ ಗಮನಿಸುವುದೇ ಇಲ್ಲ. ಆಗ ನಿಮ್ಮ ಬರವಣಿಗೆ ವಿಶ್ವದ ಗಮನ ಸೆಳೆಯಲು ಆ ಮೂರರಲ್ಲಿ ಯಾವುದಾದರೂ ಒಂದು ಭಾಷೆಗೆ ಅನುವಾದ ಆಗಲೇಬೇಕು. ಆಗ ಮಾತ್ರ ಅದು ಯೂರೋಪಿನ ಮತ್ತು ಸಂಯುಕ್ತ ಸಂಸ್ಥಾನದ ಹೃದಯದಲ್ಲಿ ಸ್ಥಾನ ಪಡೆದ ಪಾಶ್ಚಾತ್ಯ ಸಮಾಜಶಾಸ್ತ್ರ ಆಗುತ್ತದೆ. ಇಲ್ಲಿ ಹಲವು ವ್ಯತ್ಯಯಗಳು ಮತ್ತು ಸಮಸ್ಯೆಗಳು ಹಲವು ಬಾರಿ ಚರ್ಚೆಗೆ ಎತ್ತಿಕೊಳ್ಳಲ್ಪಟ್ಟಿವೆ. ಅವುಗಳಲ್ಲಿ ಮೂರನ್ನು ನಿಮ್ಮ ಮುಂದೆ ಇಡಲು ಬಯಸುತ್ತೇನೆ.

ಮೊದಲನೆ ಉದಾಹರಣೆ ಪಾಲಿನ್ ಜೆ. ಹಾಂಟೋಂಜಿ ಮತ್ತು ಕ್ವಾಸಿ ವಿರೇಡು ಎಂಬ ಇಬ್ಬರು ಆಫ್ರಿಕಾದ ವಿದ್ವಾಂಸರು ಮತ್ತು ತತ್ವಜ್ಞಾನಿಗಳಿಗೆ ಸಂಬಂಧಿಸಿದ್ದು. ಇವರು ತೃತೀಯ ಜಗತ್ತಿನ ಬುದ್ಧಿಜೀವಿಗಳಲ್ಲಿ (1950ರಿಂದ 1990ರವರೆಗೆ) ಹೆಚ್ಚು ಚಾಲ್ತಿಯಲ್ಲಿದ್ದ ಪ್ರಶ್ನೆಯನ್ನು ಕೈಗೆತ್ತಿಕೊಂಡರು. ಮುಖ್ಯವಾಹಿನಿಯ ಬುದ್ಧಿಜೀವಿಗಳ ಚರ್ಚಾವಲಯದಲ್ಲಿ ಮತ್ತು ಪ್ರಕಾಶಕರಲ್ಲಿ ಅದು ಹೆಚ್ಚು ಚರ್ಚೆಗೆ ಬರದಿದ್ದರೂ ಅಂಚಿನ ವಲಯಗಳಲ್ಲಿ ಅದು ಅಕ್ಷರಶಃ ಮುಖ್ಯ ಸಮಸ್ಯೆಯಾಗಿ ಚಾಲ್ತಿಯಲ್ಲಿತ್ತು. 1960ರ ನಂತರ ಮುಖ್ಯವಾಹಿನಿಯ ಬೌದ್ಧಿಕ ಚರ್ಚೆಗಳಲ್ಲಿ ವಿಶೇಷವಾಗಿ ಮಾನವಿಕಗಳಲ್ಲಿ ಸಂರಚನರವಾದ ಮತ್ತು ಸಂರಚನೋತ್ತರವಾದಗಳು ಬೇರೆ ಬೇರೆ ರೂಪಗಳಲ್ಲಿ (ಮನೋವಿಶ್ಲೇಷಣೆ, ನಿರಚನೆ, ಜ್ಞಾನದ ಭೂಗರ್ಭಶಾಸ್ತ್ರ, ಸಂವಹನೀಯ ಕ್ರಿಯೆ) ಚಲಾವಣೆಯಲ್ಲಿದ್ದುವು. ಎರಡನೆ ಜಾಗತಿಕ ಯುದ್ಧದ ಪೂರ್ವದಲ್ಲಿ ವಿದ್ವತ್ ವಲಯದಲ್ಲಿ ಅಷ್ಟೇನೂ ಮಹತ್ವ ಪಡೆಯದೆ ಇದ್ದ ಸಮಾಜ ವಿಜ್ಞಾನಗಳು ಯುದ್ಧೋತ್ತರ ಕಾಲದಲ್ಲಿ ಒಳ್ಳೆಯ ಅಂತಸ್ತನ್ನು ಪಡೆದವು.

ಯೂರೋಪು (ಇಂಗ್ಲೆಂಡ್, ಫ್ರಾನ್ಸ್ ಮತ್ತು ಜರ್ಮನಿಗಳು) ಜಗತ್ತಿನ ನಾಯಕತ್ವವನ್ನು ವಹಿಸಿದ್ದ ಕಾಲವು ಬದಲಾವಣೆಗೆ ಗುರಿಯಾಗಿ ಆ ಸ್ಥಾನವನ್ನು ಸಂಯುಕ್ತ ಸಂಸ್ಥಾನವು ವಹಿಸತೊಡಗಿದಾಗ ಸಮಾಜವಿಜ್ಞಾನಗಳು ಇದರ ಪರಿಣಾಮವೋ ಎಂಬಂತೆ ತಮ್ಮ ಅಂತಸ್ತಿನಲ್ಲಿ ಬಡ್ತಿ ಪಡೆದವು. 1980ರ ದಶಕದ ಆರಂಭದಲ್ಲಿ ಕಾರ್ಲ್ ಪ್ಲೆಟ್ 'ಮೂರು ಜಗತ್ತುಗಳು ಮತ್ತು ವಿಜ್ಞಾನಶ್ರಮದ ವಿಭಜನೆ' (ಪ್ಲೆಟ್: 1981, ಅಗ್‌ನ್ಯೂ 2007) ಎಂಬ ತನ್ನ ಲೇಖನದಲ್ಲಿ ಗುರ್ತಿಸಿರುವಂತೆ ಮೂರು ಜಗತ್ತುಗಳ ಭೌಗೋಳಿ–ರಾಜಕೀಯ ಮತ್ತು ಭೌಗೋಳಿ ಆರ್ಥಿಕ ವರ್ಗೀಕರಣವು ಸರಿಸುಮಾರು ಭೌಗೋಳಿ–ಜ್ಞಾನಶಾಸ್ತ್ರೀಯ ಅಥವಾ ವಿಜ್ಞಾನಶ್ರಮದ ವಿಭಜನೆಗೆ ಸಮಾನಾಂತರವಾಗಿಯೆ ಇದೆ. ಆದಾಗ್ಯೂ ಪ್ಲೆಟ್‌ನ ಲೇಖನವು ಕೇಂದ್ರದಿಂದ ಅಂಚಿನ ಕಡೆಗಿನ ಚಲನೆಯನ್ನು ಹಿಡಿಯುವ 'ಕೇಂದ್ರಾಪಗಾಮಿ' ಗುರುತಿಸುವಿಕೆಯೇ ಆಗಿದೆ. ಜಗತ್ತಿನ ಹೊಸ ವ್ಯವಸ್ಥೆಯ ಬಗೆಗೆ ಪ್ರಥಮ ಜಗತ್ತಿನ ವಿದ್ವಾಂಸರು ಏನು ಹೇಳುತ್ತಾರೆ ಎಂಬ ಬಗೆಗೆ ಅದು ಹೆಚ್ಚು ಕಾಳಜಿ ವಹಿಸುತ್ತದೆ. ಯಾವಾಗಲೂ ಈ ಪ್ರಥಮ ಜಗತ್ತಿನ ವಿದ್ವಾಂಸರು ಏಕಕಾಲಕ್ಕೆ ನಿರೂಪಿತ (ತೃತೀಯ ಜಗತ್ತಿನ ಯಾವುದಾದರೂ) ಮತ್ತು ನಿರೂಪಕ (ಪ್ರಥಮ ಜಗತ್ತಿನ) ಎರಡೂ ಸ್ಥಾನಗಳಲ್ಲಿ ಇರುವ ಸೌಲಭ್ಯ ಪಡೆದಿರುತ್ತಾರೆ. ಪರಿಣಾಮವಾಗಿ ತೃತೀಯ ಜಗತ್ತಿನ ವಿದ್ವಾಂಸರು ತಮ್ಮ ಬಗ್ಗೆ ತಾವೇ ಏನು ಭಾವಿಸುತ್ತಾರೆ ಮತ್ತು ಈ ಬಗ್ಗೆ ಅವರ ನಿಲುವು ಏನು ಎನ್ನುವುದು ಇಲ್ಲಿ ಲೆಕ್ಕಕ್ಕೆ ಬರುವುದಿಲ್ಲ. ಅವರು ವರ್ಗೀಕೃತಗೊಂಡಿದ್ದಾರೆ: ಅದರ ಬಗ್ಗೆ ಅವರು ತಮ್ಮ ಪ್ರತಿಕ್ರಿಯೆ ಅಥವಾ ಅಭಿಪ್ರಾಯ ವ್ಯಕ್ತಪಡಿಸಬಹುದೇ ವಿನಾ ಅದರ ಮಾರ್ಪಾಡಿಗೆ ಅವರಿಗೆ ಅವಕಾಶ ಇಲ್ಲ. ಆದರೆ ಈಗ ಕಾಲ ಸನ್ನಿಹಿತವಾಗಿದೆ.

ತಿಳಿಯುವ ಮತ್ತು ಜ್ಞಾನದ ಭೌಗೋಳಿ–ರಾಜಕಾರಣ ಪ್ರಥಮ ಜಗತ್ತಿಗೆ ಮೂರನೆ ಜಗತ್ತು ನೀಡಿದ ಪ್ರತಿಕ್ರಿಯೆಗಳಲ್ಲಿ ಒಂದು ಮುಖ್ಯವಾದ ಪ್ರತಿಕ್ರಿಯೆ. ಈ ಜ್ಞಾನದ ಭೌಗೋಳಿ–ರಾಜಕಾರಣ ಬಯಲು ಮಾಡಿದ ಸಂಗತಿಯಾದರೂ ಯಾವುದು? ಅದೇ ಪ್ರಥಮ ಜಗತ್ತಿನ ಜ್ಞಾನಶಾಸ್ತ್ರೀಯ ಸವಲತ್ತು, ವಿಜ್ಞಾನಶ್ರಮದ ವಿಭಜನೆಯ ಮೂರು ಜಗತ್ತುಗಳಲ್ಲಿ

ಪ್ರಥಮ ಜಗತ್ತು ನಿಜವಾಗಿಯೂ ವರ್ಗೀಕರಣವನ್ನು ಸೃಷ್ಟಿಸುವ ಮತ್ತು ಅದರ ಭಾಗವೂ ಆಗುವ ಸವಲತ್ತನ್ನು ಪಡೆದಿತ್ತು. ಇದರ ಪರಿಣಾಮವೆಂಬಂತೆ ಜ್ಞಾನದ ಉತ್ಪಾದನೆಯು ಯಾವತ್ತೂ ತನ್ನದೇ ಆದ ಭೌಗೋಳಿ-ರಾಜಕೀಯ ಸ್ಥಳವನ್ನು ಹೊಂದಿರುವುದಿಲ್ಲ ಮತ್ತು ಅದರ ಸ್ಥಳವು ಸದಾ ಅಮೂರ್ತವೂ 'ಅತಿವಾಸ್ತವ'ವೂ ಆಗಿರುತ್ತದೆ. ಅದೇ ಕೊಲಂಬಿಯಾದ ತತ್ವಜ್ಞಾನಿ ಸ್ಯಾಂಟಿಯಾಗೋ ಕ್ಯಾಸ್ಟ್ರೋ ಗೊಮೇಜ್ (2007) ವಿವರಿಸಿರುವಂತೆ 'ಶೂನ್ಯ ಬಿಂದುವಿನ ಮದ'. ಅದನ್ನು ಸಂಪೂರ್ಣ ಯಶಸ್ವಿಯಾಗಿ ಸಹಜೀಕರಣ ಮಾಡಲಾಗಿದೆ. ಹಾಂಟೋಂಜಿ ಹೀಗೆ ಹೇಳುತ್ತಾರೆ:

.....ನನಗನ್ನಿಸುವಂತೆ ತೀರಾ ತೀರಾ ತುರ್ತಾಗಿ ಆಗಬೇಕಾಗಿರುವ ಕೆಲಸ ಏನೆಂದರೆ: ಆಫ್ರಿಕಾದ ವಿಜ್ಞಾನಿಗಳು ಅಥವಾ ಹೆಚ್ಚು ತೃತೀಯ ಜಗತ್ತಿನಲ್ಲಿರುವವರು ತಾವು ವಿಜ್ಞಾನಿಗಳಾಗಿ ಮಾಡುತ್ತಿರುವ ಪ್ರಯೋಗಗಳ ಅರ್ಥದ ಬಗ್ಗೆ ತಮ್ಮೊಳಗೆ ತಾವೇ ಪ್ರಶ್ನೆ ಮಾಡಿಕೊಳ್ಳಲಿ. ಒಟ್ಟಾರೆ ಪಾಂಡಿತ್ಯದಿಂದ ಹುಟ್ಟುವ ಆರ್ಥಿಕತೆಯನ್ನು ವೃದ್ಧಿಸುವಲ್ಲಿ ಅವರ ಪ್ರಯೋಗಗಳ ನಿಜವಾದ ಪಾತ್ರವೇನು ಮತ್ತು ಜಾಗತಿಕ ಮಟ್ಟದಲ್ಲಿನ ಜ್ಞಾನದ ಉತ್ಪಾದನೆಯ ಪ್ರಕ್ರಿಯೆಯಲ್ಲಿ ಅದರ ಸ್ಥಾನವೇನು ಎಂಬುದನ್ನು ಅಗತ್ಯವಾಗಿ ಪ್ರಶ್ನೆ ಮಾಡಿಕೊಳ್ಳಲಿ. (1992).

ಆಫ್ರಿಕಾದ ಮತ್ತು ಇತರ ತೃತೀಯ ಜಗತ್ತಿನ ದೇಶಗಳ 'ವೈಜ್ಞಾನಿಕ ಮತ್ತು ಪಾಂಡಿತ್ಯಕ ಅವಲಂಬನೆ'ಯ ಅನೇಕ ಆಯಾಮಗಳನ್ನು ಹಾಂಟೋಂಜಿ ಪ್ರಸ್ತಾಪಿಸಿದ್ದಾರೆ. ಈತ ಕೆಲವು ದೇಶಗಳಲ್ಲಿ ಇರುವ ಪ್ರಯೋಗಾಲಯಗಳು, ಗ್ರಂಥಾಲಯಗಳು, ಕಟ್ಟಡಗಳು ಇತ್ಯಾದಿ ಸೌಕರ್ಯಗಳ ಸ್ಥಿತಿಗತಿಯಲ್ಲಿನ 'ಸುಧಾರಣೆ'ಗಳನ್ನು ಗುರ್ತಿಸುತ್ತಾನೆ. ಹಾಗೆ ಗುರ್ತಿಸುವಾಗ ತೃತೀಯ ಜಗತ್ತಿನ ದೇಶಗಳು ಹೇಗೆ ಪ್ರಥಮ ಜಗತ್ತಿನ ಕೈಗಾರಿಕಾ ದೇಶಗಳಿಗೆ ಆರ್ಥಿಕವಾಗಿ ಮತ್ತು ವೈಜ್ಞಾನಿಕವಾಗಿ ನೈಸರ್ಗಿಕ ಸಂಪನ್ಮೂಲಗಳನ್ನು ಮತ್ತು ಅಂಕಿಅಂಶಗಳನ್ನು ಪ್ರಯೋಗಾಲಯಗಳಿಗೆ ಒದಗಿಸುತ್ತಿವೆ ಎಂದು ಬಲವಾಗಿ ನಿರೂಪಿಸಿದ್ದಾನೆ. (ಪ್ರಯೋಗಾಲಯಗಳಿಗೆ ಎಂದರೆ ನೈಸರ್ಗಿಕ ವಿಜ್ಞಾನದ ವಾಸ್ತವ ಪ್ರಯೋಗಾಲಯಗಳಿಗೆ ಮತ್ತು ಸಮಾಜವಿಜ್ಞಾನದ ರೂಪಕಾತ್ಮಕ ಪ್ರಯೋಗಾಲಯಗಳಿಗೆ)

ಹಾಂಟೋಂಜಿಯ ತೀರ್ಮಾನ ಹೀಗಿದೆ: ಮೇಲೆ ಉಲ್ಲೇಖಿಸಿದಂತೆ ತೃತೀಯ ಜಗತ್ತಿನ ದೇಶಗಳಲ್ಲಿ 'ಸೌಲಭ್ಯಗಳ ಅಭಿವೃದ್ಧಿ' ಆಗುತ್ತಿದ್ದಾಗ್ಯೂ 'ವೈಜ್ಞಾನಿಕ ಮಾದರಿಗಳು'



ಆಫ್ರಿಕದವರು ತಯಾರಿಸಿದುವಲ್ಲ. ಬದಲಿಗೆ ಅವು ಪಾಶ್ಚಾತ್ಯ ಯೂರೋಪಿನವರಿಂದ ಅಥವಾ ಸಂಯುಕ್ತ ಸಂಸ್ಥಾನದವರಿಂದ ತಯಾರಾದುವು. ಪರಿಣಾಮವಾಗಿ 'ವೈಜ್ಞಾನಿಕ ಮಾದರಿಗಳು' ಆಫ್ರಿಕಾದ ಕನಸಿಗೆ ಅಥವಾ ಅಗತ್ಯಕ್ಕೆ ಸ್ಪಂದಿಸದೆ ಅವು ಪಾಶ್ಚಾತ್ಯ ಅಗತ್ಯ ಮತ್ತು ಕನಸುಗಳಿಗೆ ಮಾತ್ರ ಸ್ಪಂದಿಸುತ್ತವೆ. (ಮುಖ್ಯವಾಗಿ ಇಂಗ್ಲೆಂಡ್, ಫ್ರಾನ್ಸ್ ಮತ್ತು ಜರ್ಮನಿಗರ ಮತ್ತು ಜೊತೆಯಲ್ಲಿಎರಡನೆ ಸಾಲಿನಲ್ಲಿ ಅಭಿವೃದ್ಧಿ ಹೊಂದಿದ ದೇಶಗಳಾದ ಸ್ವೀಡನ್, ಬೆಲ್ಜಿಯಂ ಮತ್ತು ಹಾಲೆಂಡ್‌ನವರಿಗೆ). ಇನ್ನೂ ಮುಂದುವರೆದು ಆಫ್ರಿಕಾದ ವಿದ್ವಾಂಸರು ಪ್ರಥಮ ಜಗತ್ತಿನಲ್ಲಿ ಹುಟ್ಟಿದ, ಮುದ್ರಣಗೊಂಡ ಮತ್ತು ವಿತರಣೆಗೊಂಡ ವೃತ್ತಿಪರ ನಿಯತಕಾಲಿಕೆಗಳನ್ನೆ ಅವಲಂಬಿಸಿದ್ದಾರೆ. ಈ ಪರಿಸ್ಥಿತಿ ಹೊಸದೇನೂ ಅಲ್ಲ. ಹಾಂಟೋಂಜಿ ತಮ್ಮ 'ವ್ಯಾಪಾರ ಮತ್ತು ವಸಾಹತೀಕರಣ' ಎಂಬ ಪರಿಭಾಷೆಯ ಮೂಲಕ ಹೇಳುವಂತೆ ಅದು ವಸಾಹತುಶಾಹಿ/ಆಧುನಿಕತೆಯ ಸಂರಚನೆಯಲ್ಲೆ ಕೊರೆಯಲ್ಪಟ್ಟಿದೆ.

ಹೀಗಾಗಿ ತೃತೀಯ ಜಗತ್ತನ್ನು ಒಂದು ಅನುಬಂಧ ಎಂಬಂತೆ ನೋಡುವುದು ಸಹಜವೇ ಆಗಿದೆ. ಜಾಗತಿಕ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಅದನ್ನು ವ್ಯಾಪಾರ ಮತ್ತು ವಸಾಹತೀಕರಣದ ಮೂಲಕ ಒಳಗು ಮಾಡಿಕೊಳ್ಳುವುದು, ಅದಕ್ಕೊಂದು 'ವೈಜ್ಞಾನಿಕ' ಕಿಟಕಿಯನ್ನು ಇಡುವುದು ಕೂಡ ಸಹಜವೇ ಆಗಿದೆ. ಇಲ್ಲಿ ಬೌದ್ಧಿಕ ಮತ್ತು ವೈಜ್ಞಾನಿಕ ಶೋಷಣೆ ಮತ್ತು ಶ್ರೀಮಂತವಾದ ತೃತೀಯ ಜಗತ್ತಿನ ಸೌಕರ್ಯಗಳ ಕೊಳ್ಳೆ ಒಟ್ಟಿಗೆ ನಡೆಯುತ್ತವೆ. ಇಲ್ಲಿನ ಗುಟ್ಟುಗಳು ಮತ್ತಿತರ ಉಪಯುಕ್ತ ಮಾಹಿತಿಗಳ ಕೊಳ್ಳೆ ಮತ್ತು ಇದೆಲ್ಲ ಮಾಮೂಲು ಎಂಬಂತೆ ಅಲ್ಲಿನ ಮೆಟ್ರೋಪಾಲಿಟನ್ ನಗರಗಳ ಮ್ಯೂಸಿಯಂಗಳನ್ನು ತುಂಬಿಸಲು ಭಿನ್ನ ಭಿನ್ನ ಹಂತದಲ್ಲಿ ಇಲ್ಲಿನ ಕಲಾಕೃತಿಗಳ ಕೊಳ್ಳೆ ಎರಡೂ ಒಟ್ಟಿಗೇ ನಡೆಯುತ್ತವೆ. (1992).

ಶೀತಲ ಸಮರದ ಸಂದರ್ಭದಲ್ಲಿ ಇದು ನಿಜವಾದರೂ ಸೋವಿಯೆತ್ ಒಕ್ಕೂಟದ ಪತನ ಆದ ನಂತರ ಉಂಟಾದ ವೇಗವಾದ 'ಜಾಗತೀಕರಣ'ದಿಂದಾಗಿ ಗಡಿಯಿಲ್ಲದ ಜಗತ್ತೊಂದು ಉಗಮವಾಗುತ್ತ ಎಲ್ಲ ಅಸಮಾನ ಭಿನ್ನತೆಗಳು ಇಲ್ಲವಾಗುತ್ತಿವೆ ಎಂಬ ಪ್ರತಿವಾದವನ್ನು ಇದಕ್ಕೆ ಹೂಡಬಹುದು. ಆದರೆ ನಿಜವೆಂದರೆ 'ಜಾಗತಿಕ ಆರೋಗ್ಯ'ಕ್ಕೆ ತನ್ನ ವಿಶೇಷ ಸಂಚಿಕೆಯೊಂದನ್ನು ಮೀಸಲು ಇರಿಸಿದ ಹಾರ್ವರ್ಡ್ ಇಂಟರ್‌ನ್ಯಾಶನಲ್ ರಿವ್ಯೂ ಹೇಳುವಂತೆ:

ಆದರ್ಶದ ನಡೆ ಯಾವುದು ಎಂದರೆ ಮುಂದುವರಿಯುತ್ತಿರುವ ದೇಶಗಳಲ್ಲಿ ಸಂಶೋಧನಾ ಸಂಸ್ಥೆಗಳನ್ನು ಅಭಿವೃದ್ಧಿಪಡಿಸಲು ಅವುಗಳನ್ನು ಮುಂದುವರಿದ ದೇಶಗಳ ಸಂಸ್ಥೆಗಳೊಂದಿಗೆ ಜೊತೆಮಾಡಿ ತರಬೇತಿ ನೀಡುವುದು. ಸಂಸ್ಥೆಗಳ ಕಟ್ಟುವಿಕೆಯಲ್ಲಿ ಪರಿಣಾಮಕಾರಿಯಾಗಿ ಪಾಲ್ಗೊಳ್ಳಲು ಪಶ್ಚಿಮದ ಸಂಶೋಧಕರಿಗೆ ಸಾಕಷ್ಟು ಸಮಯ ಮತ್ತು ಗೌರವವನ್ನು ನೀಡುವುದು. ಹಾಗೆಯೇ ಅವರಿಗೆ ತಕ್ಕಷ್ಟು ಹಣಕಾಸನ್ನೂ ಒದಗಿಸುವುದು. ಇಂತಹ ಸಹಯೋಗದ ಮೂಲಕವೆ ಡಯರಿಯಾ ಸಂಬಂಧಿ ರೋಗಗಳ ಸಂಶೋಧನಾ ಕೇಂದ್ರ (ಢಾಕ, ಬಾಂಗ್ಲಾದೇಶ) ಇಂತಹ ಸಾಕಷ್ಟು ಸಂಖ್ಯೆಯ ಸಂಸ್ಥೆಗಳು ಮುಂದುವರಿಯುತ್ತಿರುವ

ದೇಶಗಳಲ್ಲಿ ಬೆಳವಣಿಗೆ ಕಂಡಿವೆ. (ಕ್ಯಾಶ್, 2005).

ಕ್ವಾಸಿ ವೈರೆಡು ಸರಿಸುಮಾರು ಇದೇ ವಲಯದಲ್ಲಿ ಅಧ್ಯಯನ ಮಾಡಿ ಉಲ್ಲೇಖ ನೀಡಿ ತಮ್ಮ 'ಆಫ್ರಿಕಾದ ಭಾಷೆಗಳಲ್ಲಿ ಆಧುನಿಕ ಚಿಂತನೆಯ ರೂಪಗೊಳ್ಳುವಿಕೆ ಕೆಲವು ತಾತ್ವಿಕ ಸಂಗತಿಗಳು' ಎಂಬ ಬರಹದಲ್ಲಿ ಬೇರೆಯದೇ ರೀತಿಯ ಕರೆಯನ್ನು ಕೊಟ್ಟಿದ್ದಾರೆ. ಆದರೆ ಇವರ ಕರೆ ಕಳೆದೆಹೋಗಿದೆ ಅಥವಾ ಮರೆತೆಹೋಗಿದೆ ಇಲ್ಲವೆ ನಿರ್ಲಕ್ಷ್ಯಕ್ಕೆ ಗುರಿಯಾಗಿದೆ.

ಕ್ಯಾಶ್ ತಮ್ಮ ಲೇಖನದಲ್ಲಿ ಹೇಳಿರುವಂತೆ 'ಹಿಂದುಳಿದ ದೇಶಗಳಿಗಾಗಿ ಮುಂದುವರಿದ ದೇಶಗಳಲ್ಲಿ ತಯಾರಾದ ಜಾಗತಿಕ ವಿನ್ಯಾಸಗಳು' ಮತ್ತು ಪ್ರಯೋಗಾಲಯಗಳ ಹಣ, ತಂತ್ರಜ್ಞಾನ ಇತ್ಯಾದಿಗಳ ಜೋರು ಭರಾಟೆಯಲ್ಲಿ ವೈರೆಡು ಅವರ ಕರೆ ನಿಜಕ್ಕು ಕಳೆದೇ ಹೋಗಿದೆ. ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರಕಟಣೆಗಳು ದಕ್ಷಿಣವನ್ನು ಅಭಿವೃದ್ಧಿಪಡಿಸುವ (ಪರಿಣಿತರ) ಬಗ್ಗೆ ಪ್ರಕಟಿಸುತ್ತಿದ್ದ ಸಂದರ್ಭದಲ್ಲಿ ವೈರೆಡು ಅಂತಹವರು 'ಮುನ್ನೆಲೆ'ಗೆ ಬರುವ ಸಾಧ್ಯತೆ ಇತ್ತು. ಆದರೆ ಅದು ಆಗಲಿಲ್ಲ. ಅದೇ ಲೇಖನದಲ್ಲಿ ಉಲ್ಲೇಖವಾಗಿರುವಂತೆ ಈ ಕೆಳಗಿನ ರೋಗದ ಮುನ್ಸೂಚನೆಯನ್ನು ನೋಡಿ:

'ಹಾಗಾದರೆ ಮುಂದೆ ಮುಂದುವರಿಯುತ್ತಿರುವ ದೇಶಗಳಲ್ಲಿ ಆರೋಗ್ಯ ಸಂಬಂಧಿ ಸಂಶೋಧನೆಯ ಸಾಮರ್ಥ್ಯವನ್ನು ಹೆಚ್ಚಿಸಲು ಯಾವ ತಂತ್ರಗಾರಿಕೆಯನ್ನು ಮಾಡಬೇಕು? ಹಲವಾರು ತಂತ್ರಗಾರಿಕೆಗಳು ಮತ್ತು ಗುರಿಗಳೇನೋ ಇವೆಯಾದರೂ ಆ ಯಾವುದೂ ಏಕಾಂಗಿಯಾಗಿ ಸಾಕಾಗುವಂಥವಲ್ಲ. ಜಾಗತಿಕ ಆರೋಗ್ಯ ಸಂಶೋಧನೆಯ ಕಾರ್ಯಸೂಚಿಯು ದಕ್ಷಿಣ ಮತ್ತು ಉತ್ತರ ಎರಡರಿಂದಲೂ ತಯಾರಾಗಬೇಕು. ಆದರೆ ಮುಂದುವರಿಯುತ್ತಿರುವ ದೇಶಗಳ ಸಂಶೋಧನಾ ಅಗತ್ಯಗಳು ಮತ್ತೆ ಮತ್ತೆ ಹೊರಗಿನಿಂದಲೆ ನೀಡಲ್ಪಡುತ್ತಿವೆ ಮತ್ತು ನಿರ್ಧರಿಸಲ್ಪಡುತ್ತಿವೆ. ಅಭಿವೃದ್ಧಿಯ ಸುವರ್ಣನಿಯಮವೇ 'ಯಾರಲ್ಲಿ ಚಿನ್ನ ಇದೆಯೊ ಅವರೇ ನಿಯಮಗಳನ್ನೂ ಮಾಡುತ್ತಾರೆ' ಎಂಬುದೇ ಜಾರಿಗೆ ಬರುತ್ತಿದೆ. ಇದು ವಿಶೇಷವಾಗಿ ಸ್ಥಳೀಯ ಆರೋಗ್ಯ ಸಂಶೋಧನೆಗೆ ಸಂಬಂಧಿಸಿದಂತೆ ನಿಜವಾಗಿದೆ. ಅಂದರೆ ಯಾವ ಪ್ರಶ್ನೆ, ಸಮಸ್ಯೆಗಳ ಬಗ್ಗೆ ಸ್ಥಳೀಯ ಪರಿಣಿತರು ಗಮನ ಹರಿಸಲು ಬಯಸುತ್ತಾರೊ ಅವು ಹೊರಗಿನವರಿಗೆ ಮುಖ್ಯವೇ ಅಲ್ಲ. ಹೊರಗಿನ ಆರೋಗ್ಯ ತಜ್ಞರು ಬೇರೆಲ್ಲೋ ಮಾಡಿದ ಅಧ್ಯಯನ, ಸಂಶೋಧನೆಗಳನ್ನೆ ಅಗತ್ಯ ಇಲ್ಲದಿದ್ದರೂ ಇಲ್ಲೂ ಮಾಡಲು ಬಯಸುತ್ತಾರೆ. ಏಕೆಂದರೆ ಅವರಿಗೆ ಅಗತ್ಯ ಇರುವ ವೈದ್ಯಕೀಯ ವ್ಯವಸ್ಥೆಗಳನ್ನು ಮತ್ತು ದುಡಿಮೆಗಳನ್ನು ಸ್ಥಾಪಿಸಲು ಇದು ಬೇಕಾಗಿರುತ್ತದೆ. ಓ.ಆರ್.ಟಿ. (ಅಂದರೆ ಓರಲ್ ರಿಹೈಡ್ರೇಶನ್ ಥೆರಪಿ, ಬಾಯಿಂದ ನೀರು ಕುಡಿಸುವ ಚಿಕಿತ್ಸೆ) ಮೇಲೆ ಹಲವಾರು ದೇಶಗಳಲ್ಲಿ ನಡೆದ ಅಧ್ಯಯನಗಳು ಈ ಕುರಿತ ಅಂತಾರಾಷ್ಟ್ರೀಯ ಸಾಹಿತ್ಯಕ್ಕೆ ಬಹಳ ಕಡಿಮೆ ಕಾಣಿಕೆಯನ್ನು ನೀಡಿವೆ. ಆದರೆ ಇದರಿಂದ ಆಯಾ ದೇಶಗಳ ಶಿಶುತಜ್ಞರಿಗೆ ಆಮಶಂಕೆ ಭೇದಿಯನ್ನು ನಿಯಂತ್ರಿಸಲು ಇದು ಎಷ್ಟು ಮುಖ್ಯ ಎಂಬುದು ಮನವರಿಕೆ ಆಗಿದೆಯಷ್ಟೆ9



ವೈರೆಡು ಕೊಟ್ಟ ಕರೆ ಈ ಕೆಳಗಿನಂತಿದೆ:

ಪರಿಕಲ್ಪನಾತ್ಮಕವಾಗಿ ಮಾತನಾಡುವುದಾದರೆ: ಅಂತಿಮ ನಡೆ ಏನಾಗಬೇಕು ಅಂದರೆ 'ಆಫ್ರಿಕದವರೆ ನಿಮ್ಮಲ್ಲೆ ಕಂಡುಕೊಳ್ಳಿ' (1992)

ವೈರೆಡು ಅವರ ವಾದವನ್ನು ಸಮಗ್ರವಾಗಿ ನೀವು ತಿಳಿಯಲು ಸಮಯ ಇಲ್ಲದಿದ್ದರೆ: ಅವರು ವಿಜ್ಞಾನವು ಎಕಾನ್ ಅಥವಾ ಲ್ಯುಬನಲ್ಲೆ ಸಂಭವಿಸಬೇಕು ಎಂದು ಹೇಳುತ್ತಾರೆ ಎಂದು ನೀವು ಭಾವಿಸಬೇಕಿಲ್ಲ. ಇನ್ನೆಂದೂ ಸಿಗದ ಹಾಗೆ ಕಳೆದುಹೋಗಿರುವ ಜಗತ್ತನ್ನು ಪಡೆಯಬಯಸುವ ಮತ್ತು ಆ ಬಗ್ಗೆ ಕನಸು ಕಾಣುವ ಆಫ್ರಿಕದ ತತ್ವಜ್ಞಾನಿಗಳ ಎದುರು (ಅಂದರೆ ನಿಮ್ಮ ಪ್ರಕಾರ ಸಾಂಪ್ರದಾಯಿಕ, ಸಾರಾಂಶವಾದಿ ಮತ್ತು ಸೌಂದರ್ಯವಿಲ್ಲದ, ಕಾಲವೇ ತೀರಿದಿರದ ಆಫ್ರಿಕದ ತತ್ವಜ್ಞಾನಿಗಳ ಎದುರು) ನಿಮ್ಮ ಸಂರಚನೋತ್ತರ ನಗುವನ್ನು ಹಾಗೇ ಕಾಪಾಡಿಕೊಳ್ಳಿ. ವೈರೆಡು ಏನು ಹೇಳುತ್ತಾರೆ ಎಂಬ ಬಗ್ಗೆ ಸ್ವಲ್ಪವಾದರೂ ಸಾವಧಾನದಿಂದ ಗಮನ ಹರಿಸೋಣ: ಅವರು ಯಾವುದಕ್ಕೂ ವಾಪಸು ಮರಳಿ ಎಂದು ಹೇಳುವುದಿಲ್ಲ. ಇವೊ ಮೊರೇಲ್ ಕೂಡ 'ಅಯಿಲುಗೆ ಮರಳಿ' ಎಂಬುದನ್ನು ಹೇಳಲಿಲ್ಲ. ಅಂದರೆ ಇಂಗ್ಲೆಂಡ್, ಫ್ರಾನ್ಸ್ ಮತ್ತು ಅನಂತರ ಅಮೆರಿಕ ಸಂಯುಕ್ತ ಸಂಸ್ಥಾನಗಳು ಆಧುನಿಕತೆಯ ಬೆಳೆಯನ್ನು ಇಲ್ಲಿ ಬೆಳೆಯುವುದಕ್ಕಿಂತ ಸುಮಾರು ಇಪ್ಪತ್ತು ವರ್ಷಗಳ ಮೊದಲೆ ಆಧುನಿಕತೆಯ ಬೀಜಗಳನ್ನು ತಂದು ಬಿತ್ತಿದ್ದ ಸ್ಪೆಯ್ನ್‌ನವರಿಗು ಮುಂಚಿನ ಸ್ಥಿತಿಯೆ 'ಅಯಿಲು'. ಆ 'ಅಯಿಲು'ಗೆ ಮರಳಿ ಎಂದು ವೈರೇಡು ಏನೂ ಹೇಳಿಲ್ಲ.

ನೋಡಿ ಚೈನಾ ಮತ್ತು ಇಂಡಿಯಾಗಳು ಕೂಡ ತಮ್ಮ 'ಹಿಂದಿನ ಕಾಲಕ್ಕೆ ಮರಳುವುದು' ಎಂಬುದೇನನ್ನೂ ಮಾಡುತ್ತಿಲ್ಲ. ಐ.ಎಂ.ಎಫ್.ನಿಂದ ಆಗಲೀ ಅಥವಾ ವೈಟ್‌ಹೌಸ್ ಇಲ್ಲವೇ ಯೂರೋಪಿಯನ್ ಒಕ್ಕೂಟದಿಂದ ಆಗಲೀ ನಾವು 'ಕರಾರುವಕ್ಕು ಆಧುನಿಕ' ಆಗಿ ಇರಲು ಏನು ಮಾಡಬೇಕು, ಆಧುನಿಕತೆಯ ರೈಲು ತಪ್ಪಿಸಿಕೊಳ್ಳದೆ ಇರಲು ಅಥವಾ ಅದರೆದುರು ವಿಫಲರಾಗದೆ ಇರಲು ಏನು ಮಾಡಬೇಕು ಎಂದು ಅಪ್ಪಣೆಗಾಗಿ ಏನೂ ಕಾಯುತ್ತಿಲ್ಲ. ವಾಲ್‌ಸ್ಟ್ರೀಟ್ ಆರ್ಥಿಕ ಕುಸಿತದ ನಂತರ ಆ ಬಗ್ಗೆ ಸಾಕಷ್ಟು ಹೇಳಿಕೆಗಳು ಮತ್ತು ಬರಹಗಳು ಬಂದಾಗಿದೆ. ಸಂಯುಕ್ತ ಸಂಸ್ಥಾನದ ಮಾದರಿಯು ಸೋತು ಬಿದ್ದಿದೆ ಮತ್ತು ಜಾಗತಿಕವಾಗಿ ಚರಿತ್ರೆಯು ಏಕಕೇಂದ್ರದಿಂದ ಬಹುಕೇಂದ್ರ ಜಗತ್ತಿನತ್ತ ಚಲಿಸುತ್ತಿದೆ ಎಂದೇ ಆ ಬರಹಗಳೆಲ್ಲ ಹೇಳಿವೆ. ವೈರೆಡು ಆಫ್ರಿಕದ ಮತ್ತು ತೃತೀಯ ಜಗತ್ತಿನ ವಿದ್ವಾಂಸರಿಗೆ ಮತ್ತು ಬುದ್ಧಿಜೀವಿಗಳಿಗೆ 'ಜ್ಞಾನಶಾಸ್ತ್ರೀಯವಾಗಿ ಎಚ್ಚರವಾಗಿ ಎಂದು ಕರೆ ನೀಡಿದ್ದರು. ಅದು ಈಗಾಗಲೇ ಜಗತ್ತಿನಾದ್ಯಂತ ಆಗುತ್ತಿದೆ ಮತ್ತು ಹಬ್ಬುತ್ತಿದೆ.

ಈ ವಿಚಾರಗಳ ನಂತರ ನಾವು ಎರಡನೆ ಉದಾಹರಣೆಗೆ ಚಲಿಸೋಣ. ಇಲ್ಲಿ ಭಾರತೀಯ ರಾಜಕೀಯ ಸಿದ್ಧಾಂತಿ ಪಾರ್ಥ ಚಟರ್ಜಿಯನ್ನು ಗಮನಿಸಬೇಕು. ಬಹು ಮುಖ್ಯವಾದ ಇವರ ಲೇಖನದಲ್ಲಿ ಜ್ಞಾನದ ಭೌಗೋಳಿ ಮತ್ತು ದೇಹ-ರಾಜಕಾರಣಗಳನ್ನು ಮುನ್ನೆಲೆಗೆ ತರುವ ಅಂದರೆ ಪರೋಕ್ಷವಾಗಿ ಪ್ಲೆಖ್‌ನಲ್ಲಿ ಇಲ್ಲದಿದ್ದ ಅಧ್ಯಾಯವೊಂದನ್ನು ನೋಡಬಹುದು. ವೈರೆಡು ಮತ್ತು ಹಾಂಟೋಂಜಿ ಅವರ ಅನುಭವಗಳಿಗೆ ಪ್ರತಿಯಾದ ಭಿನ್ನ ಇಂಡಿಯಾದ ಚರಿತ್ರೆಯಿಂದ ತೆಗೆದ ಉದಾಹರಣೆಯಿಂದ ಆತ ತನ್ನದೇ ದೃಷ್ಟಿಕೋನವನ್ನು ಮಂಡಿಸಿದ್ದಾರೆ. ಆತ 'ಎರಡು ಭಾಷೆಗಳಲ್ಲಿ ಆಧುನಿಕತೆ'ಯ ಸಮಸ್ಯೆ ಏನು ಎಂಬುದನ್ನು ತನ್ನ ಎ ಪಾಸಿಬಲ್ ಇಂಡಿಯಾ ಎಂಬ ಪುಸ್ತಕದಲ್ಲಿ (1998) ಚರ್ಚಿಸಿದ್ದಾರೆ. ಇದು ಆತ ಬಂಗಾಳಿ ಭಾಷೆಯಲ್ಲಿ ಕಲ್ಕತ್ತಾದಲ್ಲಿ ನೀಡಿದ ಭಾಷಣದ ಇಂಗ್ಲಿಶ್ ರೂಪ. ಈ ರೂಪ ಬರಿ ಭಾಷಾಂತರ ಅಲ್ಲ: ಅದು ಜ್ಞಾನದ ಭೌಗೋಳಿ-ರಾಜಕಾರಣ ಮತ್ತು ಜ್ಞಾನಶಾಸ್ತ್ರೀಯ ಹಾಗೂ ರಾಜಕೀಯ ಬೇರ್ಪಡೆಯ ಸೈದ್ಧಾಂತಿಕ ಪ್ರತಿಬಿಂಬ.

ಉದ್ದೇಶಪೂರ್ವಕವಾಗಿ ಮತ್ತು ಯಾವುದೇ ಮುಲಾಜುಗಳೂ ಇಲ್ಲದೆ ಆ ಭಾಷಣದಲ್ಲಿ ಚಟರ್ಜಿ 'ನಮ್ಮ ಆಧುನಿಕತೆ' ಮತ್ತು 'ಅವರ ಆಧುನಿಕತೆ'ಗಳ ನಡುವಿನ ವ್ಯತ್ಯಾಸವನ್ನು ಬಹಳ ಚೆನ್ನಾಗಿ ಗುರ್ತಿಸಿ ಮಾತಾಡಿದ್ದಾರೆ. (ಪ್ಲೆಖ್ ಗುರ್ತಿಸಿರುವಂತೆ) ಪ್ರಥಮ ಜಗತ್ತಿನ ಸಂರಚನೋತ್ತರ ಬುದ್ಧಿಜೀವಿಗಳು ಸಮರ್ಥಿಸಿರುವ 'ಏಕೈಕ ಆಧುನಿಕತೆ'ಯನ್ನಾಗಲೀ ಅಥವಾ 'ಇತರರ' 'ಅಂಚಿನ', 'ಅಲಕ್ಷಿತ', 'ಪರಿಧಿಯ' ಇತ್ಯಾದಿ ಆಧುನಿಕತೆಗಳನ್ನಾಗಲೀ ಆಧರಿಸದೆ ಚಟರ್ಜಿಯವರು 'ಅವರ ಆಧುನಿಕತೆ'ಯಿಂದ ಸಂಪೂರ್ಣ ಸ್ವತಂತ್ರವಲ್ಲದ (ಏಕೆಂದರೆ ಪಾಶ್ಚಾತ್ಯ ಆಕ್ರಾಮಕತೆ ಒಂದು ವಾಸ್ತವ ಹಾಗಾಗಿ) 'ನಮ್ಮ ಆಧುನಿಕತೆ'ಯ ಸುಭದ್ರ ಅಡಿಪಾಯ ಒಂದನ್ನು ಯಾವುದೇ ನಾಚಿಕೆಪಡದೆ, ವಿಷಾದವಿಲ್ಲದೆ, ಪಶ್ಚಾತ್ತಾಪವೂ ಇಲ್ಲದೆ ಹಾಕಿದ್ದಾರೆ.

ಚಟರ್ಜಿಯವರ ವಾದದ ಪ್ರಮುಖ ಶಕ್ತಿ ಎಂದರೆ, ಇತರರಿಗಿಂತ ಭಿನ್ನವಾಗಿರುವುದು. ನೆಪೋಲಿಯನ್ನನ ನಂತರ 18ನೆ ಶತಮಾನದ ಅಂತ್ಯಕ್ಕೆ ವ್ಯಾಪಾರದ ಉದ್ದೇಶದಿಂದಲೂ ಮತ್ತು 19ನೇ ಶತಮಾನದ ಆರಂಭದಲ್ಲೆ ರಾಜಕೀಯವಾಗಿಯೂ ಏಷ್ಯಾ ಮತ್ತು ಆಫ್ರಿಕಾಗಳಿಗೆ ತಮ್ಮ ಗ್ರಹಣೇಂದ್ರಿಯಗಳ ಕಬಂಧ ಬಾಹುಗಳನ್ನು ಚಾಚಿದ ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳು ಬಹಳ ಮುಂಚೆಯೆ ಅಂದರೆ 15ನೆ ಶತಮಾನದಲ್ಲೆ ಇಂಡಿಯಾಕ್ಕೆ ಕಾಲಿಟ್ಟವು. ದಕ್ಷಿಣ ಆಫ್ರಿಕ ಮತ್ತು ಕೆರಿಬಿಯನ್ ಬುದ್ಧಿಜೀವಿಗಳಿಗಿಂತ ಭಿನ್ನವಾಗಿ ಚಟರ್ಜಿ 'ಆಧುನಿಕತೆ'ಯನ್ನು ಪುನರುಜ್ಜೀವನ ಎಂದು ಕರೆಯದೆ ಜ್ಞಾನೋದಯ ಎಂದು ಕರೆದಿದ್ದಾರೆ. ಚಟರ್ಜಿ ಇಮ್ಯಾನುಯೆಲ್ ಕ್ಯಾಂಟನ 'ಜ್ಞಾನೋದಯ ಎಂದರೆ ಏನು' ಎಂಬುದನ್ನೆ ತಮ್ಮ ವಾದದ ಆಧಾರ ಸ್ಥಂಭವಾಗಿ ಇಟ್ಟುಕೊಂಡಿದ್ದಾರೆ. ಕ್ಯಾಂಟ್‌ನ ಪ್ರಕಾರ ಜ್ಞಾನೋದಯ ಎಂದರೆ ತನ್ನ ಅಪಕ್ವತೆಯನ್ನು ಮಾಗಿಸಿಕೊಳ್ಳುತ್ತ ಮನುಷ್ಯನು (ಮಾನವ ಎಂಬ ಅರ್ಥದಲ್ಲಿ) ಯುಗಯುಗಗಳನ್ನು ದಾಟುತ್ತ ಬಂದು ಸ್ವಾಂತಂತ್ರ್ಯವನ್ನು ಮುಟ್ಟುವುದು. ಕ್ಯಾಂಟನ ಲೇಖನಗಳನ್ನು ಓದುವಾಗ (ಉದ್ದೇಶ ಪೂರ್ವಕ ಆಗಿಯೋ ಅಥವಾ ಅಲ್ಲದೆಯೋ)

ಚಟರ್ಜಿ ಕ್ಯಾಂಟನ ಮೌನವನ್ನು ಮತ್ತು ಮೈಕೇಲ್ ಫ್ಯುಕೋನ ಸಮೀಪದೃಷ್ಟಿಯನ್ನು ಪ್ರಸ್ತಾಪಿಸುತ್ತಾರೆ.

ಕ್ಯಾಂಟನ ಸ್ವಾತಂತ್ರ್ಯ ಮತ್ತು ಪರಿಪಕ್ವತೆ ಕಲ್ಪನೆಗಳ ವೈಭವೀಕರಣದಲ್ಲಿ ಮತ್ತು ಫ್ಯೂಕೋನ ವೈಭವೀಕರಣದಲ್ಲಿ ನಾವು ಸಿಲುಕಿಕೊಂಡಲ್ಲಿ ಒಂದು ತಾಪತ್ರಯ ಆಗುತ್ತದೆ. ಅಂದರೆ ಮನುಷ್ಯ ಮತ್ತು ಮಾನವೀಯತೆಯ ಕ್ಯಾಂಟನ ಕಲ್ಪನೆಯು ಪುನರುಜ್ಜೀವನದಿಂದ ಜ್ಞಾನೋದಯದವರೆಗೆ ಸಾಗಿ ಬಂದ ಯೂರೋಪಿನ ಮಾನವನ ಕಲ್ಪನೆಯನ್ನು ಆಧರಿಸಿದ್ದೇ ಹೊರತು 'ಕಡಿಮೆ ಮಾನವತ್ವ' ಹೊಂದಿದ್ದ (ಆದಿಮಾನವ) (ಯೂರೋಪಿನ ಹೃದಯದಾಚೆಗೆ ಅನ್ಯ ಜಗತ್ತಿನಲ್ಲಿ ನೆಲೆಸಿದ ಮಾನವರನ್ನು ಆಧರಿಸಿದ) ಪರಿಕಲ್ಪನೆ ಅಲ್ಲ ಎಂಬ ನಿಜಾಂಶವನ್ನು ಮರೆಯಬೇಕಾಗುತ್ತದೆ. ಹಾಗಾಗಿ ಜ್ಞಾನೋದಯ ಎಂದರೆ ಅದು ಎಲ್ಲರಿಗೂ ಆದದ್ದಲ್ಲ. ಹೀಗೆ ನೀವು ಕ್ಯಾಂಟನ ಅಥವಾ ಫ್ಯುಕೋನ ಸ್ಥಳೀಯ ಚರಿತ್ರೆ, ನೆನಪು, ಭಾಷೆ ಮತ್ತು ಸಾಕಾರಗೊಂಡ/ದೇಹಗೊಂಡ ಅನುಭವ ಇವೆಲ್ಲವನ್ನೂ ಒಂದು ಆಕಾರಕ್ಕೆ ತಂದುಕೊಳ್ಳದೇ ಹೋದರೆ ಇನ್ನೇನು ತಾನೆ ಮಾಡಬಲ್ಲಿರಿ? ಇನ್ನೇನೂ ಅಲ್ಲ; ಹೋಗಿ ಕ್ಯಾಂಟನ ಮತ್ತು ಫ್ಯೂಕೋನ ಒಂದೊಂದು ಜೊತೆ ಶೂಗಳನ್ನು ಕೊಂಡುಕೊಳ್ಳಿ. ಅಲ್ಲೇ ಕಾಲಿಡಿ. ಅಷ್ಟೇ ನಿಮ್ಮಿಂದಾಗುವುದು.

ಕ್ಯಾಂಟ್ ಮತ್ತು ಫ್ಯೂಕೋ ಇವರ ಒಳನೋಟಪೂರಿತ ವ್ಯಾಖ್ಯಾನದಲ್ಲಿ ನನಗೆ ನನ್ನ ವಾದದ ಮುಂದುವರಿಕೆಗೆ ಒಂದು ಅಂಶ ಬಹಳ ಮುಖ್ಯವಾದುದು ಎನ್ನಿಸುತ್ತದೆ. ಚಟರ್ಜಿಯವರು ಕ್ಯಾಂಟನನ್ನು ಸಂಕ್ಷೇಪಿಸಿ ನಿರೂಪಿಸುವಾಗ 'ಜ್ಞಾನದ ಅನ್ವೇಷಣೆಯ ವಿಶ್ವಾತ್ಮಕ ನೆಲೆ'ಯಲ್ಲಿ ಆತ ಸಾರ್ವಜನಿಕ (ಖಾಸಗಿ ಅಲ್ಲ) ವಲಯದಲ್ಲಿ ನಿಲ್ಲುತ್ತಾನೆ ಎನ್ನುತ್ತಾರೆ. ಯಾರು ಜ್ಞಾನದ ಅನ್ವೇಷಣೆ ಮತ್ತು ಜಿಜ್ಞಾಸೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಅರ್ಹತೆ ಹೊಂದಿರುತ್ತಾರೋ ಮತ್ತು ಆ ಸ್ವಾಂತಂತ್ರ್ಯವನ್ನು ಜವಾಬ್ದಾರಿಯುತವಾಗಿ ಯಾರು ಬಳಸಬಲ್ಲರೋ ಅವರಿಗೆ ಮಾತ್ರ 'ಮುಕ್ತವಾಗಿ ಅಭಿವ್ಯಕ್ತಿಸುವ ಹಕ್ಕು' ಇರಬೇಕು ಎಂದು ಕ್ಯಾಂಟ್ ಹಕ್ಕೊತ್ತಾಯ ಮಾಡುತ್ತಾನೆ ಮತ್ತು ವಾದಿಸುತ್ತಾನೆ ಎಂದು ಹೇಳುತ್ತಾರೆ. ಬದಲಿಗೆ ಈ ಬಗ್ಗೆ ಫ್ಯೂಕೋ (ಆತನದೇ ಸಂಶೋಧನೆಯ ಆಸಕ್ತಿ ಇದ್ದಾಗ್ಯೂ) ಏನನ್ನೂ ಹೇಳುವುದಿಲ್ಲ ಎಂದು ಹೇಳುತ್ತಾರೆ. ಚಟರ್ಜಿಯವರ ಈ ವಾದವನ್ನು ಅನುಸರಿಸಿ ನಾನು ಹೇಳಲು ಬಯಸುವುದು ಏನೆಂದರೆ; ಫ್ಯೂಕೋನಿಗೆ ವಸಾಹತೀಯ ಅನುಭವ ಮತ್ತು ವಸಾಹತೀಯ ಗಾಯದಿಂದ ಹುಟ್ಟಿದ



ರಾಜಕೀಯ ಆಸಕ್ತಿ ಇವು ಇರಲಿಲ್ಲ. ಹಾಗಾಗಿ ಆತ ಆ ಸಮಸ್ಯೆಯನ್ನು ಚರ್ಚೆಗೆ ಎತ್ತಿಕೊಳ್ಳಲಿಲ್ಲ. ಆದರೆ ಚಟರ್ಜಿಯವರಿಗೆ ಈ ಅನುಭವವೂ ಇದ್ದುವು. ಹಾಗಾಗಿಯೇ ಇವರಿಗೆ ಈ ಇಬ್ಬರನ್ನೂ ದಾಟಿ 'ಭಾವಿಸಲು' ಮತ್ತು 'ನೋಡಲು' ಸಾಧ್ಯವಾಗಿದೆ. ಹೀಗಾಗಿ ಚಟರ್ಜಿ ಕ್ಯಾಂಟ್ ಮತ್ತು ಫ್ಯೂಕೋ ಇಬ್ಬರನ್ನೂ ಎದುರುಬದುರು ನಿಲ್ಲಿಸಿ ತಮ್ಮ ವಾದವನ್ನು ಉಪಸಂಹಾರ ಮಾಡುತ್ತಾರೆ.

ತಜ್ಞರೇ ಹೇಳುವಂತೆ ಶಿಕ್ಷಣ ಮತ್ತು ಕಲಿಕೆಯ ಕ್ಷೇತ್ರಕ್ಕೆ ಅನಿರ್ಬಂಧಿತ ಪ್ರವೇಶ ಇರಬೇಕೆಂಬ ತತ್ವವು ಸಾಮಾನ್ಯ ಸಾಮಾಜಿಕ ಒಪ್ಪಿಗೆಯ ಜೊತೆಜೊತೆಗೆ ಇರುವ ಸಂಗತಿಯಾಗಿ ಕಾಣುತ್ತಿದೆ.... ಬೇರೆ ಮಾತುಗಳಲ್ಲಿ ಹೇಳುವುದಾದರೆ ಜ್ಞಾನೋದಯದ ಮೂಲಕ ನಾವೆಲ್ಲರೂ ತಿಳಿದುಕೊಂಡಿರುವಂತೆ ಜ್ಞಾನದ ಕಾರಣಮೀಮಾಂಸೆಯನ್ನು ಪ್ರಯೋಗಿಸಲು ಇರುವ ಅನಿರ್ಬಂಧಿತ ಮತ್ತು ಜಾಗತಿಕವಾಗಿ ಎಲ್ಲರಿಗೂ ತೆರೆದ ಆಡುಂಬೊಲವಾಗಿ ನಮ್ಮ ನೆಲವಿದೆ. ಅಂದರೆ ನಾವು ಎಂದಾದರೂ ಯಾವ ವಿಷಯದ ಮೇಲೆ ಏನು ಮಾತನಾಡಬೇಕೆಂಬ ಹಕ್ಕು ಯಾರಿಗೆ ಇರಬೇಕು ಎಂಬ ಬಗ್ಗೆ ಆಂತರಂಗಿಕವಾಗಿ ಸ್ಪಷ್ಟ ವ್ಯತ್ಯಾಸವುಳ್ಳ ಅಧಿಕಾರದ ರಚನೆಯನ್ನು ಕಟ್ಟಿಕೊಂಡಿದ್ದೇವೇನು? (1998)

ಹಾಂಟೋಂಜಿ ಮತ್ತು ವೈರೆಡು ಆಫ್ರಿಕದ ನಿದರ್ಶನಗಳ ಮೂಲಕ ಹೇಳುವ ವಿಚಾರಗಳಿಗೆ ಚಟರ್ಜಿ ಸಹಮತ ವ್ಯಕ್ತಪಡಿಸುತ್ತಾರೆ. (ಪರಸ್ಪರ ಸ್ವತಂತ್ರವಾಗಿ ಇದ್ದಾಗ್ಯೂ, 'ಪ್ರಭಾವ'ವು ಯೂರೋಪಿನಿಂದ ಸಂಯುಕ್ತ ರಾಷ್ಟ್ರಕ್ಕೆ ಅಲ್ಲಿಂದ ಆಫ್ರಿಕ ಮತ್ತು ಇಂಡಿಯಾಗಳಿಗೆ ಚಲಿಸಿದ್ದಾಗ್ಯೂ ಇವರಲ್ಲಿ ಸಹಮತವಿದೆ. ಆದರೆ ಆಫ್ರಿಕ ಮತ್ತು ಇಂಡಿಯಾಗಳ ಜೊತೆ ಸಂವಾದ ಇಲ್ಲವಷ್ಟೆ) ತೃತೀಯ ಜಗತ್ತು (ಪ್ಲೆಟೊ್‌ನ ಕಲ್ಪನೆಯಂತೆ) ಪ್ರಥಮ ಜಗತ್ತಿನ ಬಹುತೇಕ ಪಾಂಡಿತ್ಯದ 'ಗ್ರಾಹಕ' ಆಗಿದೆ. ಮತ್ತು ಚಟರ್ಜಿ ತನ್ನ ಆಫ್ರಿಕಾದ ಸಂಗಾತಿಗಳಂತೆಯೆ ತಮ್ಮ ವಾದವನ್ನು ನಮ್ಮ ಆಧುನಿಕತೆಯ ಚರಿತ್ರೆಯು ಬಿಡಿಸಲಾಗದಂತೆ ವಸಾಹತುವಾದದ ಚರಿತ್ರೆಯ ಜೊತೆ ಹೆಣೆದುಕೊಂಡುಬಿಟ್ಟಿದೆ ಎಂದು ಹೇಳುತ್ತಾರೆ. ಆ ಕಾರಣಕ್ಕಾಗಿ 'ನಾವು' ಜಾತಿ-ಜನಾಂಗೀಯ ಅಥವಾ ರಾಷ್ಟ್ರೀಯತಾ ತಾರತಮ್ಯಗಳ ಸಂಕೋಲೆಗಳಿಲ್ಲದ ಸ್ವತಂತ್ರ ಸಂಕಥನದ ವಿಶ್ವಾತ್ಮಕ ವಲಯವೊಂದು ವಾಸ್ತವವಾಗಿ ಇದೆ ಎಂದು ಯಾವತ್ತೂ ನಂಬಿಲ್ಲ. ಚಟರ್ಜಿ ತಮ್ಮ ವಾದವನ್ನು ಹೀಗೆ ಮುಗಿಸುತ್ತಾರೆ:

ಆಧುನಿಕ ಜ್ಞಾನ ಮತ್ತು ಆಧುನಿಕ ಅಧಿಕಾರಶಾಹಿಗಳ ನಡುವೆ ಪರಮಾಪ್ತ ಮತ್ತು ಬಿಡಿಸಲಾಗದ ಒಂದು ಸಂಬಂಧ ಇದೆ. ಹಾಗಾಗಿ ನಾವು ಈ ವಿಶ್ವಾತ್ಮಕ ಅಧುನಿಕತೆಯ ಗ್ರಾಹಕರಾಗಿಯೇ ಎಂದೆಂದಿಗೂ ಉಳಿಯಬೇಕಾಗುತ್ತದೆ. ಹಾಗೆಯೇ ನಾವು ಎಂದಿಗೂ ಗಂಭೀರವಾದ ಉತ್ಪಾದಕರಾಗಿ ಪರಿಗಣಿತ ಆಗುವುದೇ ಇಲ್ಲ ಎಂದು ಹೇಗೋ ಏನೋ ಆರಂಭದಿಂದಲೇ ನಾವು ಒಂದು ಒರಟು ಅಂದಾಜು ಮಾಡಿದ್ದೇವೆ. ಇದೇ ಕಾರಣಕ್ಕಾಗಿಯೇ ನಾವು ನೂರು ವರ್ಷಗಳಿಗೂ ಹೆಚ್ಚು ಕಾಲದಿಂದ ಈ ವಿಶ್ವಾತ್ಮಕ ಆಧುನಿಕತೆ ಎಂಬ ಗೋಮುಖ ವ್ಯಾಘ್ರದಿಂದ ದೂರವಿರಲು ಮತ್ತು ನಮ್ಮದೇ ಆದ ಆಧುನಿಕತೆಯನ್ನು ಸೃಷ್ಟಿಸಿಕೊಳ್ಳಬಲ್ಲ ಅವಕಾಶಗಳನ್ನು ಕಲ್ಪಿಸಿಕೊಳ್ಳಲು ಹೆಣಗುತ್ತಿದ್ದೇವೆ. (1998).



17ನೇ ಶತಮಾನದ ಆದಿಭಾಗದಲ್ಲಿ ಮತ್ತು 18ನೆ ಶತಮಾನದ ದ್ವಿತೀಯಾರ್ಧದಲ್ಲಿ ಕ್ರೈಸ್ತಧರ್ಮವನ್ನೆ ತಮ್ಮ ಕೈಗೆ ತೆಗೆದುಕೊಂಡು ಗೌಮನ್ ಪೊಮ ಡಿ ಅಯಲ ಮತ್ತು ಒಟ್ಟೋಬ ಕುಗೊವಾನೊ ತಮ್ಮದೆ ವಾದ ಮಂಡಿಸಿದ್ದಾರೆ. ಅವಮಾನಿತರು ಅವಮಾನ ಮಾಡಿದವರ ಎದುರು ತಮ್ಮ ಸಂಕಷ್ಟವನ್ನು ತೋಡಿಕೊಳ್ಳುವ ರೀತಿ ಅವರು ಮಾಡದೆ ಯೂರೋಪಿನ ಕ್ರೈಸ್ತರಿಗೆ ಮುಖದ ಮೇಲೆ ಹೊಡೆದಂತೆ ಹೇಳುವ ದಾರಿಯನ್ನು ಅವರು ಓಡಿದಿದ್ದಾರೆ. ತವಾನ್‌ತಿನ್‌ಸುಯು (ಇಂಕಾ ಸಾಮ್ರಾಜ್ಯದ) ಇಂಡಿಯನ್ ಒಬ್ಬನಾದರೆ ಇನ್ನೊಬ್ಬ ಕೆರಿಬಿಯನ್ ದ್ವೀಪದವ (ಆಫ್ರಿಕದ ಮಾಜಿ ಗುಲಾಮನಾಗಿದ್ದ) ಇವರಿಬ್ಬರೂ ನಂತರ ಲಂಡನ್ನಿಗೆ ಹೋಗಿ ಅಲ್ಲಿ ಯೂರೋಪಿನ ಆದರ್ಶಗಳ, ದರ್ಶನಗಳ, ಮತ್ತು ಸ್ವಾರ್ಥಪರ ಪ್ರವಾದಿತನಗಳ ಅಮಾನವೀಯತೆಗಳನ್ನು ಬಯಲು ಮಾಡಿದರು. ಇವರಿಬ್ಬರ ವಾದಕ್ಕೆ ಸರಿಸುಮಾರು ಹತ್ತಿರದ ವಾದದಂತೆಯೆ ಚಟರ್ಜಿಯವರ ವಾದ ಇದೆ. (ಮಿಗ್ನೋಲೊ, 2008)

ಹೌದು ನಿಜಕ್ಕು ಚಟರ್ಜಿಯವರಿಗೆ 19ನೆ ಶತಮಾನದಲ್ಲಿ ರಾಷ್ಟ್ರೀಯವಾದಿಗಳು ಮತ್ತು ಹಿಂದೂ ದೇಶವಾದಿಗಳಿಬ್ಬರೂ ಒಂದೇ ರೀತಿಯ ಹಕ್ಕು ಮಂಡಿಸಿದರೆಂಬ ಅರಿವಿದೆ. 'ನಮ್ಮ' ಆಧುನಿಕತೆಯ ಗುರುತಿಸಿಕೊಳ್ಳುವಿಕೆಯ ದಾರಿಯಲ್ಲಿನ ಅಪಾಯಗಳಿದ

ಪಾರಾಗುವುದು ಎಂದರೆ 'ಅವರ' ಆಧುನಿಕತೆಯ ತೆಕ್ಕೆಗೆ ಹೋಗಿ ಬೀಳುವುದು ಎಂದಲ್ಲ. ಆಧುನಿಕತೆ ಎಂದರೆ ಧರ್ಮದ ಕಬಂಧ ಬಾಹುಗಳಿಂದ ತಪ್ಪಿಸಿಕೊಳ್ಳುವುದೂ ಹೌದು. ಇಮ್ಯಾನುಯೆಲ್ ಕ್ಯಾಂಟನಿಗೆ ಇಲ್ಲಿ ಧನ್ಯವಾದ ಹೇಳಬೇಕು. ಈಗ 1947ರಲ್ಲಿ ವಸಾಹತುಕಾರ ಬ್ರಿಟಿಶರನ್ನು ಅವರ ಸಂಸ್ಥೆಗಳನ್ನು ಮತ್ತು ಅವರ ಪ್ರಗತಿ ಮಾರ್ಗಗಳನ್ನು ಅಭಿವೃದ್ಧಿಯ ಮತ್ತು ನಾಗರೀಕತೆಯ ಹಾದಿಗಳನ್ನು ಭಾರತದಿಂದ ಹೊಡೆದೋಡಿಸಿ, ಸ್ವಾತಂತ್ರವನ್ನು ಗಳಿಸಿ ಒಂದು ಪಕ್ವತೆಯನ್ನು ತಲುಪಿರುವಾಗ 'ನಮ್ಮದೇ' ಆಧುನಿಕತೆಯನ್ನು ಕಂಡುಕೊಳ್ಳುವುದು ಹೇಗೆಂದು ಯೋಚಿಸೋಣ. 'ನಮ್ಮದೇ' ಬದುಕುವ ದಾರಿಗಳನ್ನು ಕುರಿತು ನಾವು ಚಿಂತಿಸೋಣ. ಇನ್ನೂ ಮುಂದುವರಿದು ಚಟರ್ಜಿಯ ಮಾತುಗಳನ್ನು ನನ್ನದೇ ಆದ ಪರಿಭಾಷೆಗೆ ಅನುವಾದ ಮಾಡಿ ಹೇಳುವುದಾದರೆ 'ನಮ್ಮ ಬದುಕನ್ನೆ ನಿರ್ವಸಾಹತೀಕರಣ ಮಾಡಬೇಕೆಂದು ನಮಗೆ ಗೊತ್ತಿದೆ. ಹಾಗೆ ಮಾಡುವ ಮೂಲಕ ಜ್ಞಾನವನ್ನೂ ನಿರ್ವಸಾಹತೀಕರಣ ಮಾಡುವುದನ್ನು ಆರಂಭಿಸಬೇಕಿದೆ.' ಹಾಂಟೋಂಜಿ ಮತ್ತು ವೈರೆಡು ಹೇಳಿದ್ದೂ ಕೂಡ ಇದೇ ಅಂಶಗಳನ್ನು. ಇದರಿಂದ ಈಗ ಮೂರನೆ ಉದಾಹರಣೆಯ ಕಡೆಗೆ ನಡೆಯಬಹುದು.

ಮಾವೋರಿ ರಾಷ್ಟ್ರೀಯಳಾದ ಲಿಂಡಾ ತುಹಿವಾಯಿ ಸ್ಮಿತ್ ನ್ಯೂಜಿಲೆಂಡಿನ ಮಾನವಶಾಸ್ತ್ರಜ್ಞೆ. ನ್ಯೂಜಿಲೆಂಡನ್ನು ಬ್ರಿಟಷರು ಆಳಲು ತೊಡಗಿದ ಕಾಲದಿಂದಲೂ ಮಾವೋರಿ ಪ್ರಜೆಗಳು ಇದೇ ನೆಲದಲ್ಲಿ ಸಹಬಾಳ್ವೆ ನಡೆಸುತ್ತಿದ್ದಾರೆ. 1833ರಲ್ಲಿ ಜೇಮ್ಸ್ ಬಸ್ಬಿ ಎಂಬುವವನು 'ಅಧಿಕೃತ ಬ್ರಿಟಿಶ್ ರೆಸಿಡೆಂಟ್'ನನ್ನಾಗಿ ನ್ಯೂಜಿಲೆಂಡಿಗೆ ನೇಮಿಸಲಾಯಿತು. ಸ್ವತಃ ಬ್ರಿಟಿಶರಿಂದ, ಫ್ರೆಂಚರಿಂದ ಮತ್ತು ಅಮೆರಿಕದವರಿಂದ ಮತ್ತವರ ದುರಾಸೆಯ ಕಾರಣದಿಂದ ನ್ಯೂಜಿಲೆಂಡಿನಲ್ಲಿ ಉಂಟಾದ ಅತಂತ್ರ ಸ್ಥಿತಿಯನ್ನು ನಿಗ್ರಹಿಸಲು ಮಾವೋರಿ ಮುಖ್ಯಸ್ಥರುಗಳನ್ನು ಒಟ್ಟಾಗಿ ಸಂಘಟಿಸಲು ಅವನಿಗೆ ಸೂಚಿಸಲಾಯಿತು. ಎಲ್ಲರಿಗೂ ತಿಳಿದಿರುವಂತೆ ಮಾವೋರಿಗಳು ಎಂದೂ ಖಾಸಗಿ ಆಸ್ತಿ ಬಗ್ಗೆ ತಲೆ ಕೆಡಿಸಿಕೊಂಡವರಲ್ಲ. ಆದರೆ ಯೂರೋಪಿಯನ್ನರು ಹಾಗಲ್ಲ. 16ನೆ ಶತಮಾನದ ಆರಂಭದಿಂದಲೆ ಅವರ 'ಹೊಸ ಜಗತ್ತು' ನೆಲವನ್ನೆಲ್ಲ ಖಾಸಗಿ ಆಸ್ತಿಯನ್ನಾಗಿ ಮಾಡಿಕೊಳ್ಳುವ ಹಸಿವನ್ನು ತೀವ್ರಗೊಳಿಸಿದೆ.

ಪ್ಲೆಟ್‌ನ ಲೇಖನದಲ್ಲಿ ಹೇಳಿರುವಂತೆ 'ವಿಜ್ಞಾನಶ್ರಮದ ವಿಭಜನೆ'ಯ ಪ್ರಕಾರ ತೃತೀಯ ಜಗತ್ತಿನ ಅಧ್ಯಯನದ ಜವಾಬ್ದಾರಿಯನ್ನು ಮಾನವಶಾಸ್ತ್ರಕ್ಕೆ ವಹಿಸಲಾಗಿ ಅದು ಶೀತಲ ಸಮರದ ಸಂದರ್ಭದಲ್ಲಿ ಅಲ್ಲಿನ 'ಜ್ಞಾನದ ರಾಜಕಾರಣ'ವನ್ನು ಕಂಡುಹಿಡಿಯಿತು. ಆದರೆ ಈಗ ಇರುವ ಮಾನವಶಾಸ್ತ್ರಜ್ಞರಲ್ಲಿ ಬಹುತೇಕರು ಯೂರೋ-ಅಮೆರಿಕದವರೆ ಆಗಿರುವುದು ಗುಟ್ಟೇನೂ ಅಲ್ಲ. ಆದಾಗ್ಯು ಮಾನವಶಾಸ್ತ್ರವು ಒಂದು ಶಿಸ್ತಾಗಿ ತನ್ನ ಅಸ್ತಿತ್ವವನ್ನು ತೃತೀಯ ಜಗತ್ತಿನಲ್ಲೆ ಕಂಡುಕೊಂಡಿತು ಎಂಬುದು ಸುಳ್ಳಲ್ಲ. ಪ್ರಥಮ ಜಗತ್ತಿನ ಮಾನವಶಾಸ್ತ್ರಜ್ಞನ 'ಅಧ್ಯಯನ ವಸ್ತು'ವೇ ತಾನಾದಾಗ ತೃತೀಯ ಜಗತ್ತಿನ ಮಾನವಶಾಸ್ತ್ರಜ್ಞ/ಜ್ಞೆ ಏನು ತಾನೆ ಮಾಡಬೇಕು? ಇಂತಹ ಇಕ್ಕಟ್ಟಿನ ಸಂದರ್ಭದ ಬಗ್ಗೆ ಮೇಲೆ ಉಲ್ಲೇಖಿಸಿದ ಹಾಂಟೋಂಜಿಯ ಲೇಖನದಲ್ಲು ಚರ್ಚಿಸಲಾಗಿದೆ. ಇದಕ್ಕೆ ಒಂದು

ಸರಳ ಉತ್ತರ ಯಾವುದೆಂದರೆ ತೃತೀಯ ಜಗತ್ತಿನ ಮಾನವಶಾಸ್ತ್ರಜ್ಞ ಪ್ರಥಮ ಜಗತ್ತಿನ ಮಾನವಶಾಸ್ತ್ರಜ್ಞ ಮಾಡುವ ಕೆಲಸವನ್ನೆ ಮಾಡುತ್ತಾನೆ ಮತ್ತು ಅದೇ ಪ್ರಶ್ನೆಗಳನ್ನೆ ಇಟ್ಟುಕೊಂಡು ತನ್ನ ಸುತ್ತ ನೆಲೆಸಿರುವ ತನ್ನ ದೇಶದವರನ್ನೆ 'ಅಧ್ಯಯನ' ಮಾಡುತ್ತಾನೆ. ನಿರ್ದಿಷ್ಟ ದೇಶಕ್ಕೆ ಸಂಬಂಧಿಸಿದಂತೆ ಅಧ್ಯಯನ ಸ್ವರೂಪವು ತನ್ನ ಉದ್ದೇಶಿತ ಜನತೆ 'ಸ್ಥಳೀಯ'ವೋ ಅಥವಾ 'ಯೂರೋಪೀಯ'ವೋ ಎಂಬುದರ ಮೇಲೆ ವ್ಯತ್ಯಾಸ ಹೊಂದುತ್ತದೆ. ಸಾಮಾನ್ಯವಾಗಿ ಎಲ್ಲರೂ ತಿಳಿದಿರುವಂತೆ ತೃತೀಯ ಜಗತ್ತಿನ ದೇಶಗಳಲ್ಲಿ ಉದಾಹರಣೆಗೆ ದಕ್ಷಿಣ ಅಮೆರಿಕ, ದಕ್ಷಿಣ ಆಫ್ರಿಕ, ಆಸ್ಟ್ರೇಲಿಯ ಇಂತಹ ಕಡೆ ಇರುವ ಮಾನವಶಾಸ್ತ್ರಜ್ಞರು ಯೂರೋಪಿನಿಂದ ಬಂದವರೇ ಆಗಿರುತ್ತಾರೆ. ಇಂತಹ ಸಂದರ್ಭದಲ್ಲಿ ಸಾಧಾರಣವಾಗಿ ಅಂತಿಮ ಫಲಿತಾಂಶವು ಏನಾಗಿರುತ್ತದೆ ಎಂದರೆ: ತೃತೀಯ ಜಗತ್ತಿನ ಮಾನವಶಾಸ್ತ್ರೀಯ ಸಂಶೋಧನೆಯು ಪ್ರಥಮ ಜಗತ್ತಿನಲ್ಲಿ ಬೋಧನೆಯಾಗುವ ಮತ್ತು ಆಚರಣೆಯಲ್ಲಿ ಇರುವ ಮಾನವಶಾಸ್ತ್ರಕ್ಕೆ ಅವಲಂಬಿ ಆಗಿಯೂ ಮತ್ತದಕ್ಕೆ ಆನುಷಂಗಿಕ ಆಗಿಯೂ ರೂಪಗೊಳ್ಳುತ್ತದೆ ಮತ್ತು ಬಾಳುತ್ತದೆ. ಮತ್ತೇನೂ ಹೊಸದಾಗಲೀ ಗಮನಾರ್ಹ ಆದುದಾಗಲೀ ಅಲ್ಲಿ ಸೃಷ್ಟಿ ಆಗುವುದಿಲ್ಲ.

ಗಮನಾರ್ಹವಾದ ಹೊಸತನ ಯಾವಾಗ ಬರುತ್ತದೆ ಎಂದರೆ: ಯಾರೋ ಒಬ್ಬಾಕೆ ಮಾನವಶಾಸ್ತ್ರಜ್ಞಳಾಗಿ ಮಾವೋರಿಗಳನ್ನು ಅಧ್ಯಯನ ಮಾಡುವುದಕ್ಕಿಂತ ಮಾವೋರಿಯೆ ಮಾನವಶಾಸ್ತ್ರಜ್ಞಳಾದಾಗ ಮತ್ತು ತನ್ನದೇ ಅಧ್ಯಯನವನ್ನು ಆಚರಣೆಗೆ ತಂದಾಗ ಬರುತ್ತದೆ. ಲಿಂಡಾ ಸ್ಮಿತ್‌ಳ 'ನಿರ್ವಸಾಹತೀಕರಣ ವಿಧಾನಗಳು: ಸಂಶೋಧನೆ ಮತ್ತು ವಿಶಿಷ್ಟ ಜನತೆ' (1999) ಇಲ್ಲಿನ ಒಂದು ಉಲ್ಲೇಖದಿಂದ ಇದನ್ನು ವಿವರಿಸುತ್ತೇನೆ. ಆಕೆಯ ಬರಹದ ಮೊದಲ ಅಧ್ಯಾಯ 'ಮಾನವೀಯ ಆಗಿ ಇರುವುದರ ಬಗ್ಗೆ' ಇದರಿಂದ ಆರಿಸಿದ ಒಂದು ಚಿಕ್ಕ ಭಾಗ ಇಲ್ಲಿದೆ:

ನಾವು ನಮ್ಮ ಮಿದುಳುಗಳನ್ನು ಅಥವಾ ಬೌದ್ಧಿಕತೆಯನ್ನು ಬಳಸಲಾರೆವು ಎಂಬುದು ನಮ್ಮಂತಹ ಆದಿಮ ಜನಾಂಗದ ಬಗ್ಗೆ ಇದ್ದ ಪೂರ್ವಾಗ್ರಹಗಳಲ್ಲಿ ಒಂದು. ನಾವು ಏನನ್ನೂ ಕಂಡುಹಿಡಿಯಲಾರೆವು, ಯಾವುದೇ ಸಂಸ್ಥೆಯನ್ನು ಹುಟ್ಟುಹಾಕಲಾರೆವು ಅಥವಾ ಇತಿಹಾಸವನ್ನು ನಿರ್ಮಿಸಲಾರೆವು. ನಮಗೆ ಕಲ್ಪನಾಶಕ್ತಿಯೂ ಇಲ್ಲ, ತುಂಬಾ ಮೌಲಿಕವಾದ ಯಾವುದನ್ನೂ ನಮ್ಮಿಂದ ಉತ್ಪಾದಿಸಲೂ ಆಗದು. ನೈಸರ್ಗಿಕ ಜಗತ್ತಿನ ಭೂಮಿ ಮೊದಲಾದ ಯಾವುದೇ ರೀತಿಯ ಸಂಪನ್ಮೂಲಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದೂ ನಮಗೆ ಗೊತ್ತೇ ಇರಲಿಲ್ಲ. ನಾಗರೀಕತೆಯ 'ಕಲೆಗಳು' ನಮ್ಮಲ್ಲಿ ಆಚರಣೆಯಲ್ಲೆ ಇರಲಿಲ್ಲ. ಇಂತಹ ಮೌಲ್ಯಗಳಾವುವೂ ಇಲ್ಲದ್ದರಿಂದ ನಮಗೆ ನಾವೆ ಅಪಾತ್ರರಾದೆವು. ಅಂದರೆ ಕೇವಲ ನಾಗರೀಕತೆಯಿಂದ ಮಾತ್ರವಲ್ಲ ಮನುಷ್ಯರು ಎಂದು ಕರೆಸಿಕೊಳ್ಳಲೂ ಅಯೋಗ್ಯರಾದೆವು. ಅಂದರೆ ನಾವು ಪೂರ್ಣವಾದ ಮನುಷ್ಯರಲ್ಲ. ನಮ್ಮಲ್ಲಿ ಕೆಲವರಂತೂ ಕನಿಷ್ಟ ಪಕ್ಷ ಅರೆಮಾನವರು ಎಂದು ಕೂಡ ಕರೆಸಿಕೊಳ್ಳಲು ಯೋಗ್ಯರಾಗಿರಲಿಲ್ಲ. ಇಲ್ಲಿ ಸಾಮ್ರಾಜ್ಯವಾದವು ಬಂದು ಆವರಿಸಿಕೊಳ್ಳುವುದಕ್ಕು ಮುಂಚೆಯೆ; ಮನುಷ್ಯತ್ವ ಎಂದರೆ ಏನು ಎಂಬುದನ್ನು ನಿರ್ಧರಿಸುವ ಚಿಂತನೆಗಳು ಅದಾಗಲೇ ಅಧಿಕಾರ

ಕೇಂದ್ರದ ಮೂಲಕ ನಿರ್ಧಾರವಾಗಿದ್ದವು. ಮತ್ತು ಜನರನ್ನು ಯಾರು ಮಾನವರು ಮತ್ತು ಯಾರು ಮಾನವರಲ್ಲ ಎಂದು ನಿರ್ಣಯಿಸುವ ಸೂತ್ರಗಳು ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿ ಸಂಕಥನಗಳಲ್ಲಿ ಸೇರಿಕೊಂಡುಬಿಟ್ಟಿದ್ದವು. (1999).

ಇಲ್ಲ: ಈಗ ಆಕೆ ಪಶ್ಚಾತ್ಯ ಮಾನವಶಾಸ್ತ್ರವನ್ನು ಅಭ್ಯಾಸ ಮಾಡುತ್ತಿಲ್ಲ. ಆಕೆ ಮಾವೋರಿ ಲೋಕವಿಜ್ಞಾನ ಮತ್ತು ವಿಚಾರಪರಂಪರೆಗಳಿಗೆ ಮಾನವಶಾಸ್ತ್ರದ ಸಾಧನಗಳನ್ನು ಬೆಸೆಯುತ್ತ, ತರ್ಕಸರಣಿಯ ಭೂಗೋಳವನ್ನು ಬದಲಿಸುತ್ತಿದ್ದಾಳೆ. ಚೈನಾ ಒಂದು ಬಂಡವಾಳವಾದಿ ರಾಷ್ಟ್ರ. ಆದರೆ ಅದು ಪಾಶ್ಚಾತ್ಯ ಬಂಡವಾಳವಾದದ ಅನುಸರಣೆಯನ್ನು ಮಾಡುತ್ತಿದೆ ಎಂದು ನಾನು ಹೇಳುವುದಿಲ್ಲ. ಖಂಡಿತವಾಗಿಯೂ ಮಾವೋರಿಗಳನ್ನು ಗಮನಿಸುತ್ತ ತಮ್ಮ ಸ್ವಸಹಾಯಕ್ಕೆ ಅದನ್ನು ಹೇಗೆ ಬಳಸಿಕೊಳ್ಳಬಹುದು ಎಂಬ ಹಿತಾಸಕ್ತಿ ಯೂರೋಪಿನ ಮಾನವಶಾಸ್ತ್ರಜ್ಞರಲ್ಲಿ ಇರುವಂತೆ ಅದೇ ಹಿತಾಸಕ್ತಿ ಲಿಂಡಾ ಅವರಲ್ಲೂ ಇದೆ. ಇಲ್ಲಿನ ಒಂದೇ ವ್ಯತ್ಯಾಸ ಏನೆಂದರೆ ಇನ್ನೆಂದೂ ಪಾಶ್ಚಾತ್ಯರಿಗೆ ಮಾವೋರಿಗಳು ಪ್ರಯೋಗಪಶುಗಳಾಗಿ ಒದಗುವ ಸುಲಭದ ತುತ್ತಲ್ಲ. ಈಗ ನಿಮಗೆ ಅಸ್ಮಿತೆಯ ರಾಜಕಾರಣ ಮತ್ತು ಜ್ಞಾನಶಾಸ್ತ್ರೀಯ ರಾಜಕಾರಣಗಳ ಅಂತಃಸಂಬಂಧಗಳ ಸುಳುಹು ಸಿಕ್ಕಿರಬಹುದು. ನೀವೊಬ್ಬ ಮಾವೋರಿ ಮತ್ತು ಮಾನವಶಾಸ್ತ್ರಜ್ಞ ಎರಡೂ ಆಗಿದ್ದಲ್ಲಿ ಖಂಡಿತವಾಗಿಯೂ ನೀವೊಬ್ಬ ಕರಿಯ ಕೆರಿಬಿಯನ್ ಅಥವಾ ಆಯ್ಮಾರ ಅಥವಾ ಮಾವೋರಿ ಎಂಬುದನ್ನು ಒಂದೋ ಅಡಗಿಸಿಡುತ್ತೀರಿ ಇಲ್ಲವೇ ನಿರ್ವಸಾಹತುವಾದಿ ಆಯ್ಕೆಯನ್ನು ಆಯ್ದುಕೊಳ್ಳುತ್ತೀರಿ. ಶಾಸ್ತ್ರವನ್ನು (ಮಾನವಶಾಸ್ತ್ರ) ಬೆಳೆಸಲು ಶ್ರಮಿಸುವುದಕ್ಕಿಂತ 'ಮಾವೋರಿ' ಜನತೆಯನ್ನು ಬೆಳೆಸಲು ಜ್ಞಾನವನ್ನು ಸೃಷ್ಟಿಸಲು ನಿಮ್ಮನ್ನು ನೀವು ತೊಡಗಿಸಿಕೊಳ್ಳುತ್ತೀರಿ. ತಮ್ಮನ್ನು ತಾವು ಗಟ್ಟಿಗೊಳಿಸಿಕೊಳ್ಳಲು ಅಥವಾ ಸ್ವಹಿತ ಕಾಯ್ದುಕೊಳ್ಳಲು ಆಗದಿದ್ದರೆ ಯಾರಾದರೂ ಯಾಕೆ ತಾನೆ ಶಾಸ್ತ್ರಗಳನ್ನು ಬೆಳೆಸಲು ಆಸಕ್ತಿ ತಾಳಬೇಕು ಹೇಳಿ?

ಲಿಂಡಾ ಸ್ಮಿತ್‌ಳಂತೆ ನೀವು ನಿರ್ವಸಾಹತೀಯ ಆಯ್ಕೆಯಲ್ಲಿ ತೊಡಗಿ, ಮಾನವಶಾಸ್ತ್ರವನ್ನು ನಿಮ್ಮ ಸೇವೆಗೆ ಬಳಸಿಕೊಂಡಲ್ಲ, ನೀವು ತರ್ಕಸರಣಿಯ ಭೂಗೋಳವನ್ನು ಬದಲಿಸಲೂ ಯತ್ನಿಸಬಹುದು; ಹಾಗೆಯೆ ಭೌಗೋಳಿ-ರಾಜಕಾರಣ ಮತ್ತು ದೇಹ-ರಾಜಕಾರಣಗಳಲ್ಲು ತೊಡಗಿಸಿಕೊಳ್ಳಬಹುದು; ಯೂರೋ ಅಮೆರಿಕ ಮೂಲದವರಾದ ಮಾವೋರಿ ಅಲ್ಲದ ಕೆಲವು ಮಾನವಶಾಸ್ತ್ರಜ್ಞರು ಇದ್ದಾರೆ, ಅವರು ನಿಜವಾಗಿಯೂ ನಮ್ಮ ಪರ ಇದ್ದಾರೆ: ನಮ್ಮನ್ನು ಕೆಟ್ಟದಾಗಿ ನಡೆಸಿಕೊಳ್ಳುವುದರ ಬಗ್ಗೆ ಅವರಿಗೆ ವಿರೋಧವಿದೆ: ಇದನ್ನು ಸರಿಪಡಿಸಲೆಂದೆ ಅವರು ಕೆಲಸ ಮಾಡುತ್ತಿದ್ದಾರೆ ಎಂದು ನೀವು ವಾದಿಸಬಹುದು. ಅಂತಹ ಉದಾಹರಣೆಗಳಿದ್ದರೆ ಖಂಡಿತಾ ಆ ಮಾನವಶಾಸ್ತ್ರಜ್ಞರು ಎರಡೆರಡು ದಾರಿಗಳಲ್ಲಿ ನಡೆಯುತ್ತಿದ್ದಾರೆ ಎಂದೇ ನೀವು ತಿಳಿಯಬೇಕು. ಇಲ್ಲದಿದ್ದರೆ ಆಗ ನೀವು ಏಕಕಾಲಕ್ಕೆ ಫಾದರ್ ಬಾರ್ತೊಲೋಮಿ ಡ ಲ ಕಾಸ ಮತ್ತು ಮಾರ್ಕ್ಸ್‌ವಾದ ಎರಡರ ಜೊತೆಗೂ ನಿಲ್ಲಬಹುದು. (ಮಾರ್ಕ್ಸ್‌ವಾದ ಯೂರೋಪಿನ ಸಮಸ್ಯೆಗಳನ್ನು ಕುರಿತು ಪ್ರತಿಕ್ರಿಯಿಸುವ ಯೂರೋಪಿನವರದ್ದೆ ಆದ ಶೋಧ) ಹೆಣ್ಣೇ ಆಗಲಿ ಗಂಡೆ ಆಗಲೀ ಮಾರ್ಕ್ಸ್‌ವಾದ ಮನುಷ್ಯರ 'ಬಣ್ಣ'ದ ಬಗ್ಗೆ ಮಾತಾಡುವಾಗ ಮಾನವಶಾಸ್ತ್ರದಂತೆಯೆ ಮಾತಾಡುತ್ತದೆ.

ಮಾವೋರಿಯಾಗಿ (ಅಥವಾ ಐಮೆ ಸಿಸೇರೇ ಅಥವಾ ಫ್ರಾನ್ಸ್ ಫ್ಯಾನಾನ್‌ನಂತೆ ಆಯ್ಮಾರ ಅಥವಾ ಆಫ್ರೋ ಕೆರಿಬಿಯನಾದವರಾಗಿ) ಇರುವುದು ಎಂದರೆ ಅದು ಅಷ್ಟು ಸರಳವಾದುದಲ್ಲ. ಯಾಕೆಂದರೆ ಮಾರ್ಕ್ಸ್‌ವಾದವು ಅಲ್ಲಿನ ಜನಾಂಗೀಯ ಶ್ರೇಣೀಕರಣಗಳ, ಪಿತೃಪ್ರಧಾನ ಮತ್ತು ಭಿನ್ನಲಿಂಗಿ-ಪ್ರಧಾನೀಯ ಶ್ರೇಣೀಕರಣಗಳ ಬದಲು ವರ್ಗಸಂಬಂಧಗಳಿಗೇ ಪ್ರಾಶಸ್ತ್ಯ ನೀಡುತ್ತದೆ. ಆಗ ಬೇರೆಯವರು ಮಾವೋರಿ ಅಥವಾ ಆಯ್ಮಾರ ಮಾನವಶಾಸ್ತ್ರಜ್ಞರ ಮಾರ್ಗದರ್ಶನಕ್ಕಾಗಿ ಬೇಡಿಕೊಂಡು ನಿರ್ವಸಾಹತೀಕರಣದ ಆಯ್ಕೆಯನ್ನು ಆಶ್ರಯಿಸಬೇಕಾಗುತ್ತದೆ. ಅಸ್ಮಿತೆಯ ರಾಜಕಾರಣವು ಅಸ್ಮಿತೆಗಾಗಿ ರಾಜಕಾರಣಕ್ಕಿಂತ ಭಿನ್ನವಾದುದು. ಮೊದಲನೆಯದು ಯಾರು ಬೇಕಾದರೂ ಇಚ್ಛೆಪಟ್ಟಲ್ಲಿ ಸೇರಿಕೊಳ್ಳಬಹುದಾದ ವಲಯವಾದರೆ ಎರಡನೆಯದು ಹಾಗಲ್ಲ. ಅದು ನಿರ್ದಿಷ್ಟ ಚಹರೆಯನ್ನು ಹೊಂದುವುದಕ್ಕೆ ಯತ್ನಿಸುತ್ತದೆ.

ಆಂಗ್ಲೀಯ ಹಿನ್ನೆಲೆಯಿಂದ ಬಂದ ನ್ಯೂಜಿಲೆಂಡಿನ ಮಾನವಶಾಸ್ತ್ರಜ್ಞರಿಗಿಂತ ಮಾವೋರಿ ಮಾನವಶಾಸ್ತ್ರಜ್ಞರು ಹೆಚ್ಚಿನ ಜ್ಞಾನಶಾಸ್ತ್ರೀಯ ವಿಶೇಷಾಧಿಕಾರ ಪಡೆದಿರುತ್ತಾರೆ ಎಂದು ಹೇಳುವುದು ನನ್ನ ಉದ್ದೇಶವಲ್ಲ. ಆದರೆ ನ್ಯೂಜಿಲೆಂಡಿನಲ್ಲಿ ನೆಲೆಸಿರುವ ಆಂಗ್ಲೀಯ ಮಾನವಶಾಸ್ತ್ರಜ್ಞನಿಗೆ ಮಾವೋರಿ ಸ್ಥಳೀಯ ಜನತೆಗೆ ಯಾವುದು ಒಳ್ಳೆಯದು ಮತ್ತು ಯಾವುದು ಕೆಟ್ಟದ್ದು ಎಂದು ಮಾರ್ಗದರ್ಶನ ಮಾಡುವ ಯಾವುದೇ ಹಕ್ಕು ಇಲ್ಲ ಎಂದಷ್ಟೆ ನಾನು ಹೇಳುತ್ತೇನೆ. ಹಾರ್ವರ್ಡ್ ಇಂಟರ್‌ನ್ಯಾಶನಲ್ ರಿವ್ಯೂನಲ್ಲಿ ವ್ಯಕ್ತವಾಗಿರುವಂತೆ ಸಂಯುಕ್ತ ಸಂಸ್ಥಾನದ ಪರಿಣಿತರ ಒಂದು ಗುಂಪು ಈಗಲೂ ನಾವು 'ಮುಂದುವರಿಯುತ್ತಿರುವ ರಾಷ್ಟ್ರ'ಗಳಿಗೆ ಯಾವುದು ಒಳ್ಳೆಯದು ಮತ್ತು ಯಾವುದು ಕೆಟ್ಟದು ಎಂದು ನಿರ್ಧರಿಸಬಲ್ಲೆವು ಎಂದು ಛಾಪಿಸುವುದೇ ಇಲ್ಲಿನ ಮುಖ್ಯವಾದ ಸಮಸ್ಯೆ. ಸಾಮ್ರಾಜ್ಯಶಾಹಿ ಮತ್ತು ಬಂಡವಾಳವಾದಿ ವಿಶ್ವವಿಜ್ಞಾನದ ಕಾರಣಕ್ಕಾಗಿ ಇದನ್ನು ನಂಬುವ ಕೆಲವು ಸ್ಥಳೀಯರು ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಇದ್ದಾರೆ ಎಂಬುದೂ ನಿಜ. ಅವರನ್ನು ಹಾಗೆ ಅಂದರೆ ಯಾವುದು ಮುಂದುವರಿದ ರಾಷ್ಟ್ರಗಳಿಗೆ ಒಳ್ಳೆಯದೋ ಅದು ನಮಗೂ ಒಳ್ಳೆಯದು ಮತ್ತು ಅದರಿಂದ ನಾವೂ ಅವರ ಮಟ್ಟಕ್ಕೆ ಏರಬಹುದು ಎಂದು ನಂಬುವಂತೆ (ಅಥವಾ ನಂಬಿದವರಂತೆ ನಟಿಸುವಂತೆ) ಮಾಡಲಾಗಿದೆ. ಯಾಕೆಂದರೆ ಈ ವಸಾಹತುವಾದಿಗಳಿಗೆ 'ಅಲ್ಲಿಗೆ ಹೇಗೆ ಹೋಗುತ್ತಲೇ ಇರಬಹುದು' ಎಂಬುದು ಚೆನ್ನಾಗಿ ಗೊತ್ತಿದೆ. ವೈರೆಡು ತತ್ವವನ್ನು (ಆಫ್ರಿಕದವರೆ ನಿಮ್ಮಲ್ಲೆ ಕಂಡುಕೊಳ್ಳಿ ಎಂಬ ತತ್ವವನ್ನು) ಅನುಸರಿಸಿ ಹೇಳುವುದಾದರೆ: ಮಾವೋರಿಗಳಿಗೆ ಯಾವುದು ಒಳ್ಳೆಯದು ಎಂಬುದನ್ನು ಒಬ್ಬ ಹಾರ್ವರ್ಡ್ ವಿದ್ವಾಂಸ ಅಥವಾ ನ್ಯೂಜಿಲೆಂಡಿನಲ್ಲಿ ನೆಲೆಸಿರುವ ಆಂಗ್ಲೀಯ ಬಿಳಿ ಮಾನವಶಾಸ್ತ್ರಜ್ಞ ತಿಳಿಯುವುದಕ್ಕಿಂತ ಚೆನ್ನಾಗಿ ಮಾವೋರಿಯೇ ತಿಳಿಯಬಲ್ಲ. ಹಾಗೆಯೇ ಹಾರ್ವರ್ಡಿನ ಪರಿಣಿತನಿಗೆ/ಳಿಗೆ ನಿಮಗೆ ಯಾವುದು ಒಳ್ಳೆಯದು ಎಂದು ಮುಂದುವರಿಯುತ್ತಿರುವ ರಾಷ್ಟ್ರಗಳಿಗೆ ಹೇಳುವಾಗ ಅವರಿಗೆ ಅಥವಾ ಅವರವರಿಗೆ ಜನತೆಗೆ ಯಾವುದು ಒಳ್ಳೆಯದು ಎಂದು ಬಹಳ ಚೆನ್ನಾಗೇ ತಿಳಿದಿರುತ್ತದೆ.

ಲಿಂಡಾ ಸ್ಮಿತ್ ಅವರ ಉದ್ಧರಣೆಗೆ ಮರಳಿ ಬಂದು ಮೇಲೆ ಉಲ್ಲೇಖಿಸಿದ ವಾಕ್ಯವೃಂದದ ಬಗ್ಗೆ ಒಂದು ತಕರಾರು ಎತ್ತುವುದಕ್ಕು ಸಾಧ್ಯವಿದೆ. 'ನಾವು' ಎಂಬ ಕಲ್ಪನೆಯು ಮಾವೋರಿಯಾಗಿ ಇರುವುದು ಎಂಬ ಸಾರಾವಾದಿ ಪರಿಕಲ್ಪನೆಯನ್ನು ನಿರಾಕರಿಸುತ್ತದೆ. ಅಥವಾ ಆಧುನಿಕೋತ್ತರವಾದಿ ಸಿದ್ಧಾಂತಗಳು ವಾಸ್ತವವಾಗಿ ಏಕರೂಪ ಮತ್ತು ಸುಸಂಬದ್ಧ ವಿಷಯಗಳ ಕಲ್ಪನೆಗೆ ಬಂದು ನಿಲ್ಲುತ್ತಿದ್ದುದರಿಂದ ವ್ಯಕ್ತಿ ನೆಲೆಯಲ್ಲೆ ಆಗಲಿ ಇಲ್ಲವೆ ಸಮುದಾಯದ ನೆಲೆಯಲ್ಲೆ ಆಗಲಿ ಆ ಸಂದರ್ಭದಲ್ಲಿ ನಿಜಕ್ಕು ಈ 'ನಾವು' ಎಂಬ ಕಲ್ಪನೆಯು ತಾಳಿಕೆಯುಳ್ಳ ಕಲ್ಪನೆ ಅಲ್ಲ ಎಂಬ ತಕರಾರನ್ನು ನೀವು ತೆಗೆಯಬಹುದು. ಆದರೆ.... ಇಲ್ಲಿ ಚಟರ್ಜಿಯನ್ನು ನೆನಪಿಸಿಕೊಳ್ಳಿ: ಭಾಷೆಗಳನ್ನು, ನೆನಪುಗಳನ್ನು ಮತ್ತು


ಮಾವೋರಿ ಬುಡಕಟ್ಟು ಜನ

ಪಾಶ್ಚಾತ್ಯ ಆಧುನಿಕತೆಯ ಲೋಕವಿಜ್ಞಾನವನ್ನೂ 'ಅವರ' ಆಧುನಿಕತೆಯ ಒಂದು ಆಕಾರಕ್ಕೆ ತಂದು ನಿಲ್ಲಿಸಿಕೊಳ್ಳುವುದು ಆಧುನಿಕ ಪಾಶ್ಚಾತ್ಯ ಶಿಸ್ತುಗಳಿಗೆ ತುಂಬಾ ಆರಾಮದಾಯಕ ಮತ್ತು ಒಳ್ಳೆಯದೇ. ಇದು ಆಧುನಿಕ ವಸಾಹತುಶಾಹಿಗೆ ಅಧ್ಯಯನ ವಸ್ತುಗಳೆ ಆದ ಮತ್ತು ತಮ್ಮದೇ 'ನಮ್ಮ' ಆಧುನಿಕತೆಗಾಗಿ ಹಂಬಲಿಸುವ ಮಾವೋರಿ, ಐಮಾರ ಅಥವಾ ಘಾಣಾದ ತತ್ವಜ್ಞಾನಿ ಅಥವಾ ಕಲ್ಕತ್ತಾದ ಭಾರತೀಯ ಇಂಥವರಿಗೆ ಖಂಡಿತಾ ಅನುಕೂಲಕರ ಅಲ್ಲ. ಇವರು ವ್ಯಾನ್‌ಗಾರ್ಡ್ ಆಧುನಿಕೋತ್ತರ ವಿಮರ್ಶಕರ ಅಥವಾ ಹಿಂದುಳಿದವರನ್ನು ಮುಂದೆ ತರುವ ಪಾಶ್ಚಾತ್ಯ ಪರಿಣತರ ಮಾತುಗಳನ್ನು ಕೇಳಕೂಡದು.

ಆಗ ಜ್ಞಾನದ ಭೌಗೋಳಿ-ರಾಜಕಾರಣವು ಮುನ್ನೆಲೆಗೆ ಬರುತ್ತದೆ. ಇಲ್ಲೆಲ್ಲ ಜಗತ್ತಿನಲ್ಲಿ ಹಲವು ರೀತಿಯ 'ನಮ್ಮ ಆಧುನಿಕತೆಗಳು' ಇವೆ. ಘಾನಾದ, ಇಂಡಿಯಾದ, ಮಾವೋರಿಯ, ಆಫ್ರೋ-ಕೆರಿಬಿಯಾದ, ಉತ್ತರ ಅಫ್ರಿಕಾದ, ಇಸ್ಲಾಮಿಕ್ ವೈವಿಧ್ಯದ ಹಲವು 'ನಮ್ಮ ಆಧುನಿಕತೆಗಳು' ಇವೆ. ಆದರೆ ಭಿನ್ನತೆಗಳ ನಡುವೆ ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ ಮತ್ತು ಸಂಯುಕ್ತ ರಾಷ್ಟ್ರಗಳಲ್ಲಿ ಒಂದೇ ಒಂದು 'ಅವರ' ಆಧುನಿಕತೆ ಇದೆ.

ತರ್ಕಸರಣಿಯ ಭೂಗೋಳವನ್ನು ಬದಲಾಯಿಸುವುದು ಮತ್ತು ಜ್ಞಾನದ ಭೌಗೋಳಿ ರಾಜಕಾರಣವನ್ನು ಕಾರ್ಯಗತಗೊಳಿಸುವುದು ಎಂದರೆ ಏನು ಎಂದು ನಿಮಗೆ ಈಗ ಮನದಟ್ಟಾಗಿದೆ ಎಂದುಕೊಂಡಿದ್ದೇನೆ. ಇದನ್ನು ತಿಳಿದರೆ ಸಾಮಾನ್ಯವಾಗಿ (ಅಥವಾ ಪ್ರತಿಯೊಂದೂ ಸ್ಥಳೀಯ ಚರಿತ್ರೆಗೆ ನಿರ್ದಿಷ್ಟವಾಗಿ) ನಿರ್ವಸಾಹತೀಯ ಆಯ್ಕೆ ಎಂದರೆ ಏನು ಎಂಬುದು ಕೂಡ ತಿಳಿಯುತ್ತದೆ. ಅಂದರೆ: (ಪ್ರಾಥಮಿಕವಾಗಿ ನಾನು ಈಗಾಗಲೇ ನೀಡಿರುವ ಮೂರು ಉದಾಹರಣೆಗಳಲ್ಲಿ ತಿಳಿಸಿರುವಂತೆ) ಜ್ಞಾನಶಾಸ್ತ್ರೀಯ ಅಸಹಕಾರದಲ್ಲಿ ತೊಡಗುವುದು. ಜ್ಞಾನಶಾಸ್ತ್ರೀಯ ಅಸಹಕಾರವು ಅಗತ್ಯವಾಗಿ ನಾಗರೀಕ ಅಸಹಕಾರವೇ ಆಗಬೇಕು. (ಗಾಂಧಿ, ಮಾರ್ಟಿನ್ ಲೂಥರ್ ಕಿಂಗ್) ಅಂದರೆ ಅದು ನಾಗರೀಕ ಅಸಹಕಾರದಂತೆ ಪ್ರತೀಕಾರರಹಿತ ಆಗಿರಬೇಕು.

ಆಧುನಿಕ ಪಾಶ್ಚಾತ್ಯ ಜ್ಞಾನಶಾಸ್ತ್ರದ (ನೆನಪಿಸಿಕೊಳ್ಳಿ, ಗ್ರೀಕ್ ಮತ್ತು ಲ್ಯಾಟಿನ್ ಹಾಗೂ ಆರು ಸಾಮ್ರಾಜ್ಯಶಾಹಿ ಮತ್ತು ಆಧುನಿಕ ಯೂರೋಪಿನ ಭಾಷೆಗಳ ಎದುರಿನ) ನಾಗರೀಕ ಅಸಹಕಾರವು ಕೇವಲ ಸುಧಾರಣೆಯನ್ನು ತರಬಲ್ಲುದೇ ವಿನಃ ರೂಪಾಂತರಗಳನ್ನು ಉಂಟುಮಾಡಲಾರದು. ಈ ಒಂದು ಸರಳ ಕಾರಣಕ್ಕಾಗಿ ನಿರ್ವಸಾಹತೀಯ ಚಿಂತನೆಯ ಕಾರ್ಯ ಮತ್ತು ನಿರ್ವಸಾಹತೀಯ ಆಯ್ಕೆಯ ಅನುಷ್ಠಾನ ಇವುಗಳು ಇಪ್ಪತ್ತೊಂದನೆ ಶತಮಾನದಲ್ಲಿ ಜ್ಞಾನಶಾಸ್ತ್ರೀಯ ಬೇರ್ಪಡುವಿಕೆಯಿಂದ ಮತ್ತು ಜ್ಞಾನಶಾಸ್ತ್ರೀಯ ಅಸಹಕಾರದ ಕ್ರಿಯೆಗಳಿಂದ ಮಾತ್ರ ಆರಂಭ ಆಗಬಲ್ಲುವು.

## IV

ಎಲ್ಲಾ ಮೂರು ದೃಷ್ಟಾಂತ (ಮತ್ತು ನಾಲ್ಕನೆಯದಾಗಿ ನನ್ನದೇ ವಾದದಲ್ಲಿ ಕೂಡ) ಜ್ಞಾನದ ಭೌಗೋಳಿ-ರಾಜಕಾರಣವನ್ನು ಒತ್ತುಕೊಟ್ಟು ಗುರುತಿಸಿದ್ದೇನೆ. ತುಂಬಾ ತೀವ್ರವಾಗಿ ಅದು ನನ್ನನ್ನು ಕಾಡಿದೆ. ಇದರ ಜೊತೆಗೆ ಜ್ಞಾನದ ದೇಹ-ರಾಜಕಾರಣ ಕೂಡ ಪ್ರಸ್ತಾಪವಾಗಿದೆ. ಜ್ಞಾನದ ದೇಹ-ರಾಜಕಾರಣ ಎಂದರೆ ಏನು? ಇದನ್ನು ಖಚಿತವಾಗಿ ವಿವರಿಸಲು ಫ್ರಾನ್ಜ್ ಫ್ಯಾನಾನ್ ಸಹಾಯ ಪಡೆಯುವುದೇ ಒಳ್ಳೆಯದು. ಹೋಮಿ ಬಾಬಾ ಅವರ ಫ್ಯಾನಾನ್ ಓದನ್ನು ಎತ್ತಿಕೊಳ್ಳದೆ ಲೀವಿಸ್ ಗೋರ್ಡಾನ್ ಮತ್ತು ಸಿಲ್ವಿಯ ವಿಂಟರ್ ಇವರ ಫ್ಯಾನಾನ್ ಓದುಗಳನ್ನು ಎತ್ತಿಕೊಂಡು ಅದನ್ನು ವಿವರಿಸುತ್ತೇನೆ.

ಮೊದಲಿಗೆ ಇದು ನನ್ನದಲ್ಲ ಎಂದು ಒಂದು ಹಕ್ಕುನಿವೃತ್ತಿ ಘೋಷಣೆ ಮಾಡುವ ಅಗತ್ಯವಿದೆ. ಮೈಕೇಲ್ ಫ್ಯೂಕೋನ ಜೀವ-ರಾಜಕಾರಣ ಪರಿಕಲ್ಪನೆಯ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ ಪ್ರತಿಚರ್ಚೆಗಳು ಆಗಿವೆ. ಪ್ರಭುತ್ವವು ಜನಸಂಖ್ಯಾ ನಿಯಂತ್ರಣಕ್ಕೆ ಬಳಸಿದ

ಒಂದು ಹೊಸ ಹತ್ಯಾರವೆ ಜೀವ-ರಾಜಕಾರಣ. ಇದು ಆಧುನಿಕ ರಾಷ್ಟ್ರಗಳ ಉಗಮದ ಜೊತೆಜೊತೆಗೇ ಜನ್ಮ ತಾಳಿತು. ಫ್ಯೂಕೋ ಇದನ್ನು ಯೂರೋಪಿನಲ್ಲಿ ಅಳವಡಿಸಿಕೊಳ್ಳಲು ಪ್ರಸ್ತಾಪಿಸಿದ. ಆದರೆ ಇದು ವಸಾಹತು ನಾಡುಗಳಿಗೂ ಹಬ್ಬಿತು. ಇದರ ಹಿನ್ನೆಯಲ್ಲಿ ಸರಿಸುಮಾರು 19ನೆ ಶತಮಾನದ ಅಂತ್ಯಭಾಗದಲ್ಲಿ ನಿರ್ಧಿಷ್ಟವಾಗಿ ಅರ್ಜೆಂಟೈನಾದಲ್ಲಿ (ಸಾರ್ವತ್ರಿಕವಾಗಿ ದಕ್ಷಿಣ ಅಮೆರಿಕದಲ್ಲಿ) ಜಾರಿಗೊಳಿಸಿದ ಸುಸಂತಾನಶಾಸ್ತ್ರದ (ಉತ್ತಮ ಸಂತಾನ ಪಡೆಯುವ ವಿಜ್ಞಾನದ) ಪರಿಣಾಮಗಳನ್ನು ತೀರಾ ತಡವಾಗಿ ಅಧ್ಯಯನ ಮಾಡಲಾಯಿತು. ಯೂರೋಪಿನ ಜೀವ-ರಾಜಕಾರಣ ಮತ್ತು ವಸಾಹತುಗಳಲ್ಲಿದ್ದ ಜೀವ-ರಾಜಕಾರಣಗಳಲ್ಲಿ (ಜೀವ-ರಾಜಕೀಯವಾಗಿ ರಾಷ್ಟ್ರಗಳು ನಿರ್ವಹಣೆ ಮಾಡುತ್ತಿದ್ದಾಗಲು) ಒಂದು ಸ್ಪಷ್ಟ ವ್ಯತ್ಯಾಸ ಇತ್ತು. ಅದು ಯಾವುದೆಂದರೆ ಲಿಂಡಾ ಸ್ಮಿತ್ ಗುರ್ತಿಸಿರುವಂತೆ ಕಡಿಮೆ ಮಾನವೀಯ, ಉಪಮಾನವೀಯ ಇತ್ಯಾದಿ ಜನಾಂಗಭೇದ ನೀತಿಯದ್ದು. ಆದರೆ ವಸಾಹತುಗಳ ಮೇಲೆ ಪ್ರಯೋಗಿಸಿದ ಈ ಜೀವ-ರಾಜಕಾರಣ ತಂತ್ರಗಳು ಬೂಮರ್‍ಯಾಂಗಿನಂತೆ ಯೂರೋಪಿಗೂ ವಾಪಸು ತಿರುಗೇಟು ನೀಡಿದವು ಎಂಬುದನ್ನು ನಾವು ಮರೆಯುವಂತಿಲ್ಲ. ಇದೇ ಯೂರೋಪೇತರ ಜನರ ಮೇಲೆ ಪ್ರಯೋಗಿಸಿದ ವಸಾಹತೀಯ ಜೀವ-ತಂತ್ರಗಳನ್ನು ಯಹೂದಿ ಜನಾಂಗವನ್ನು ನಿಯಂತ್ರಿಸಲು ಮತ್ತು ನಿರ್ನಾಮ ಮಾಡಲು ಕೂಡ ಬಳಸಿಕೊಂಡದ್ದನ್ನು ಈಗಾಗಲೇ ಸಾಕಷ್ಟು ಜನ ಚರ್ಚಿಸಿದ್ದಾರೆ ಕೂಡ. ಈ ಪರಿಸ್ಥಿತಿಯು ಯೂರೋಪಿನ ಇತಿಹಾಸದಲ್ಲಿ ವಸಾಹತುಗಳು ದ್ವಿತೀಯ ದರ್ಜೆಯ ಅಥವಾ ಅಂಚಿನ ಯಕಃಶ್ಚಿತುಗಳಲ್ಲ ಎಂಬ ಸತ್ಯವನ್ನು ಎತ್ತಿ ತೋರಿಸುತ್ತದೆ. ಮತ್ತು ತರ್ಕಸರಣಿಯ ಭೂಗೋಳವನ್ನು ಪಲ್ಲಟಿಸುತ್ತದೆ. ಆದರೆ ಇದಕ್ಕೆ ವ್ಯತಿರಿಕ್ತವೆಂಬಂತೆ ಆಧುನಿಕ ಯೂರೋಪಿನ ರೂಪಗೊಳ್ಳುವಿಕೆಯಲ್ಲಿ ವಸಾಹತೀಯ ಇತಿಹಾಸಕ್ಕೆ ಸ್ಥಾನವೇ ಇಲ್ಲವಾಗಿದೆ.

ಹೀಗೆ ದೇಹ-ರಾಜಕಾರಣವು ಜೀವ-ರಾಜಕಾರಣದ ಕರಾಳ ಮಗ್ಗುಲು ಮತ್ತು ಕಾಣದ ಉಳಿದರ್ಧವಾಗಿದೆ. ವಿಕಾಸ ಹೊಂದಿಲ್ಲದ ಕಡಿಮೆ ಮಾನವರು ಎಂದು ನಮ್ಮನ್ನು ಹೆಸರಿಸಲಾಗಿದೆ ಮತ್ತು ವ್ಯಾಖ್ಯಾನಿಸಲಾಗಿದೆ ಎಂದು ತಿಳಿದ ಜನರಿಂದ ಕ್ರಿಯೆಗಿಳಿದ ನಿರ್ವಸಾಹತೀಯ ತಂತ್ರಜ್ಞಾನಗಳನ್ನೂ ಈ ದೇಹ-ರಾಜಕಾರಣವು ವಿವರಿಸುತ್ತದೆ. ನಮ್ಮನ್ನು 'ಕಡಿಮೆ ಮಾನವರು' ಎಂದು ಹೆಸರಿಸಿದ ಕ್ರಿಯೆಯೇ ಮೂಲಭೂತವಾಗಿ ಅಮಾನವೀಯ ಆದುದು ಎಂದೂ ಇವರು ತಿಳಿದಿದ್ದಾರೆ. ಹೀಗೆ ಸಾಮ್ರಾಜ್ಯಶಾಹಿ ಕಾರ್ಯವಾಹಿಗಳಲ್ಲಿ, ಸಂಸ್ಥೆಗಳಲ್ಲಿ, ಜ್ಞಾನಗಳಲ್ಲಿ ಮಾನವೀಯತೆಯೇ ಇರಲಿಲ್ಲ ಮತ್ತು ಅವರಿಗೆ ಇಷ್ಟವಾಗದೆ ಇರುವ ಜನರನ್ನು ಕಡಿಮೆ ಮಾನವರು ಎಂದು ನಿರ್ಧರಿಸುವ ದುರಹಂಕಾರ ಅವರಲ್ಲಿತ್ತು ಎಂದೂ ಇವರು ಗುರ್ತಿಸಿದ್ದಾರೆ. ಹೀಗೆ ದೇಹ-ರಾಜಕಾರಣವು ನಿರ್ವಸಾಹತೀಯ ಚಿಂತನೆ, ನಿರ್ವಸಾಹತೀಯ ಕಾರ್ಯ ಮತ್ತು ನಿರ್ವಸಾಹತೀಯ ಆಯ್ಕೆ ಇವುಗಳ ಅವಿಭಾಜ್ಯ ಅಂಗವಾಗಿದೆ.

ಪ್ಲೆಖ್ ಗುರ್ತಿಸಿದಂತಹ ಸಾಮ್ರಾಜ್ಯಶಾಹಿ ವಿಜ್ಞಾನಶ್ರಮದ ವಿಭಜನೆಯನ್ನು ವಿರೋಧಿಸಿ ಜ್ಞಾನದ ಭೌಗೋಳಿ-ರಾಜಕಾರಣವು ಚಾರಿತ್ರಿಕವಾಗಿ ತೃತೀಯ ಜಗತ್ತಿನಲ್ಲೆ ಹೊರಹೊಮ್ಮಿತು.

ನಾಗರೀಕ ಹಕ್ಕುಗಳ ಚಳವಳಿಯ ಪರಿಣಾಮವೆಂಬಂತೆ ಸಂಯುಕ್ತ ಸಂಸ್ಥಾನದಲ್ಲಿಯೆ ಜ್ಞಾನದ ದೇಹ-ರಾಜಕಾರಣವು ತನ್ನ ಹೆಚ್ಚಿನ ಪ್ರಣಾಳಿಕೆಗಳನ್ನು ಹೊಂದಿತ್ತು. ಜ್ಞಾನದ ದೇಹ-ರಾಜಕಾರಣದ ಮುಖ್ಯ ಕಾರ್ಯವಾಹಿಗಳು ಯಾರಾಗಿದ್ದರು? ಸ್ತ್ರೀಯರು. ಅದೂ ಮೊದಲಿಗೆ ಬಿಳಿಯ ಸ್ತ್ರೀಯರು. ನಂತರ ಇತರ ಬಣ್ಣದ ಸ್ತ್ರೀಯರು ಸೇರಿಕೊಂಡರು. (ಭೌಗೋಳಿ-ರಾಜಕಾರಣಕ್ಕೆ ಇದರ ಸಂಬಂಧ ಬೆಸೆದವರು, ತೃತೀಯ ಜಗತ್ತಿನ ಸ್ತ್ರೀಯರು); ಲ್ಯಾಟಿನೋ ಮತ್ತು ಲ್ಯಾಟಿನಾ ವಿದ್ವಾಂಸರು ಮತ್ತು ಹೋರಾಟಗಾರರು; ಮುಖ್ಯವಾಗಿ ಆಫ್ರೋ- ಅಮೆರಿಕದವರು ಮತ್ತು ಸ್ಥಳೀಯ ಅಮೆರಿಕದವರೂ ಅನಂತರ ಅದಕ್ಕೆ ಸೇರಿಕೊಂಡರು.




ಪರಿಕಲ್ಪನಾತ್ಮಕವಾಗಿ ಜ್ಞಾನದ ದೇಹ-ರಾಜಕಾರಣವು ಮೊದಲಿಗೆ ಫ್ರಾನ್ಸ್ ಫ್ಯಾನಾನ್‌ನ 'ಬ್ಲಾಕ್ ಸ್ಕಿನ್ ವೈಟ್ ಮಾಸ್ಕ್ಸ್' ಕೃತಿಯ ಆಂತರ್ಯದಲ್ಲಿ ಹೊರಹೊಮ್ಮಿತು.

19ನೆ ಶತಮಾನದ ಕೊನೆಕೊನೆಯ ಭಾಗದ ಸಂವಿಧಾನವಾದಿ ಪ್ರವೃತ್ತಿಗೆ ಪ್ರತಿಕ್ರಿಯೆ ಎಂಬಂತೆ, ಫ್ರಾಯ್ಡ್‌ನು ಮನೋವಿಶ್ಲೇಷಣೆಯ ಮೂಲಕ ವ್ಯಕ್ತಿಯ ವೈಯಕ್ತಿಕ ಅಂಶವನ್ನ ಲೆಕ್ಕಕ್ಕೆ ತೆಗೆದುಕೊಳ್ಳಬೇಕು ಎಂದು ಒತ್ತಿ ಹೇಳಿದ. ಜೀವವಿಕಾಸ ಸಿದ್ಧಾಂತಕ್ಕೆ ಬದಲಿಯಾಗಿ ಆತ ವ್ಯಕ್ತಿವಿಕಾಸ ದೃಷ್ಟಿಕೋನವನ್ನು ಮುಂದು ಮಾಡಿದ. ಆದರೆ ಕರಿಯ ಮಾನವರನ್ನು ಪರಕೀಯಗೊಳಿಸುವ ಕ್ರಿಯೆಯು ವೈಯಕ್ತಿಕ ಪ್ರಶ್ನೆ ಅಲ್ಲ ಎಂಬುದನ್ನು ನಾವು ಗಮನಿಸಬೇಕು. ಜೀವವಿಕಾಸ ಮತ್ತು ವ್ಯಕ್ತಿವಿಕಾಸಗಳ ಜೊತೆಯಲ್ಲೆ ಸಮಾಜವಿಕಾಸವೂ ಇದೆಯಲ್ಲವೆ? ಒಂದು ಬಗೆಯಲ್ಲಿ ಲ್ಯಾಕೊಂಟೆ ಮತ್ತು ಡ್ಯಾಮೆ ಇವರನ್ನು ಅನುಸರಿಸಿ ಹೇಳುವುದಾದರೆ, ಇದೊಂದು ಸಮಾಜ ವಿಶ್ಲೇಷಣಾತ್ಮಕ ಪ್ರಶ್ನೆಯೆ ಹೌದು.10 (1967, (1952)).

ಫ್ಯಾನಾನ್‌ನ ಸಮಾಜ ವಿಕಾಸವಾದವು ಮಾನವನ 'ಸ್ವಭಾವ'ದ ಬಗೆಗಿನ ವೈಜ್ಞಾನಿಕ ಕಲ್ಪನೆಗಳು ಮತ್ತು ತೀರ್ಮಾನಗಳಿಗೆ ಒಂದು ಇತಿಶ್ರೀಯನ್ನು ಹಾಡಿತು. ಮತ್ತು ವಿಕಾಸವಾದದಿಂದ ನರವಿಜ್ಞಾನದವರೆಗಿನ ವೈಜ್ಞಾನಿಕ ಸಿದ್ಧಾಂತಗಳ ಮಿತಿಗಳೇನು ಎಂದು ತಿಳಿಸಿತು. ಮತ್ತು ಅವುಗಳ 'ಮಾನವ ಸ್ವಭಾವ'ದ (ಮನುಷ್ಯತ್ವದ ಸ್ಥಿತಿಯ) ಕುರಿತ ಪ್ರಶ್ನೆಗೆ ತೀರ್ಪುಗಳನ್ನು

ಕೊಡುವ ಸಾಮರ್ಥ್ಯವನ್ನು ನಿರಾಕರಿಸಿತು. ಅಂದರೆ ಜೀವವಿಕಾಸದಿಂದ ನರವಿಜ್ಞಾನದವರೆಗೆ ವೈಜ್ಞಾನಿಕ ಸಿದ್ಧಾಂತಗಳಿಗೆ ನರಮಂಡಲ ವ್ಯವಸ್ಥೆಯಿಂದ ಹೊಮ್ಮಿದ ಜೀವಂತ ಅಂಗಾಂಶಗಳ ವಸ್ತುರೂಪತೆ ಬಗ್ಗೆ ಏನೂ ಹೇಳುವ ಶಕ್ತಿಯೆ ಇಲ್ಲ ಎಂದರ್ಥವಲ್ಲ. ಆದರೆ ಇಲ್ಲಿಂದ ಮುಂದಕ್ಕೆ 'ಮಾನವ ಸ್ವಭಾವ'ದ ಬಗ್ಗೆ ತೀರ್ಪು ನೀಡಲು ಅವುಗಳು ಇನ್ನೂ ಸಾವಿರಾರು ಮೈಲುಗಳ ದೂರ ಸಾಗಬೇಕಾಗಿದೆ. ಇನ್ನೂ ಮುಂದುವರಿದು ಹೇಳುವುದಾದರೆ ಸಮಾಜ ವಿಕಾಸವಾದವು ಈ ಜಗತ್ತು ದೇವರಿಂದ ಸೃಷ್ಟಿಯಾಗಿದೆ ಅಥವಾ ಮಹಾಸ್ಫೋಟದಿಂದ (ಬಿಗ್ ಬ್ಯಾಂಗ್‌ನಿಂದ) ಸೃಷ್ಟಿಯಾಗಿದೆ ಎಂಬ ಎರಡೂ ಸೃಷ್ಟಿಮೂಲಗಳಲ್ಲಿ ತನ್ನನ್ನು ಗುರ್ತಿಸಿಕೊಳ್ಳುವುದಿಲ್ಲ. ಬದಲಿಗೆ ಇದು ಪುನರುಜ್ಜೀವನ ಪ್ರತಿಪಾದಿಸಿದ ಮಾನವ ಕಲ್ಪನೆ, ಮನುಷ್ಯ ಜೀವಿಗಳ ಕಲ್ಪನೆ ಎದುರಿಗೆ ನೀಗ್ರೋಗಳನ್ನು ಕೆಳಮಟ್ಟದಲ್ಲಿ ಇರಿಸಿದ ಆಧುನಿಕ ವಸಾಹತೀಯ ಜಗತ್ತು ರೂಪಗೊಂಡಿರುವುದರಲ್ಲಿ ತನ್ನ ಉಗಮವನ್ನು ಗುರ್ತಿಸಿಕೊಂಡಿದೆ. ಅಂದರೆ ಇಲ್ಲಿ ಜೀವವಿಕಸನೀಯ ಅಥವಾ ವ್ಯಕ್ತಿವಿಕಸನೀಯ ಜ್ಞಾನಗಳು ಇಲ್ಲ. ಇದೇ ಸಮಾಜ ವಿಕಾಸವಾದ. ಒಮ್ಮೆ ಪ್ಯಾರಿಸ್‌ನಲ್ಲಿ ಫ್ಯನಾನ್ ನಡೆದು ಹೋಗುತ್ತಿರುವಾಗ ಒಂದು ಮಗು ತನ್ನ ತಾಯಿಗೆ 'ಓಹ್ ಅಮ್ಮ, ಅಲ್ನೋಡು, ನೀಗ್ರೋ!' ಎಂದು ಅಚ್ಚರಿ ಮತ್ತು ಬೆರಗಿನಿಂದ ಹೇಳಿತ್ತಂತೆ. ಜೀವವಿಕಸನೀಯ ಅಥವಾ ವ್ಯಕ್ತಿವಿಕಸನೀಯ ಜ್ಞಾನಗಳು ಇಂತಹ ಅನುಭವದ ಪ್ರಸಂಗವನ್ನು ವಿವರಿಸಲಾರವು ಇದನ್ನು ಸಮಾಜವಿಕಾಸ ತತ್ವ ಮಾತ್ರ ವಿವರಿಸಬಲ್ಲುದು. ಈ ಅನುಭವದ ಕ್ಷಣವೊಂದಕ್ಕೆ ಫ್ಯನಾನ್ ಒಂದಿಡೀ ಅಧ್ಯಾಯವನ್ನೆ ಮೀಸಲಿಟ್ಟಿದ್ದಾನೆ.

ಆ ಅಧ್ಯಾಯವು ಇಂಗ್ಲಿಶಿಗೆ 'ಕಪ್ಪುತನದ ನಿಜಾಂಶ' ಎಂದು ಭಾಷಾಂತರವಾಗಿದೆ. ತುಂಬಾ ಖಚಿತವಾದಿ, ಜೀವಸ್ವಭಾವಿ ಭಾಷಾಂತರವಾದ ಅದು ಓದುಗನನ್ನು ನಿಜಾಂಶದ ಕಡೆಗೆ ನೋಡು ವ್ಯಕ್ತಿಸ್ವಭಾವೀಯ ಪ್ರಶ್ನೆಗಳನ್ನು ಕೇಳಬೇಡ ಎಂದು ಒತ್ತಾಯಿಸುತ್ತದೆ. ಫ್ರೆಂಚ್‌ನಲ್ಲಿ ಆ ಅಧ್ಯಾಯದ ತಲೆಬರಹವು 'ಲೆ,ಕ್ಸ್‌ಪೀರಿಯನ್ಸೆ ವೆಸು ದು ನೊಯಿರ್' ಎಂದು ಇದೆ. ಫ್ರೆಂಚಿನ ತಲೆಬರಹವು ನಿಜಾಂಶವನ್ನು ಮುಂದು ಮಾಡದೆ ಅನುಭವವನ್ನು ಮುಂದು ಮಾಡುತ್ತದೆ. ಅಂದರೆ ಅದು (ಜಾಗತಿಕ ಮಾನವ ಹಕ್ಕುಗಳ ಘೋಷಣೆಯಲ್ಲಿ ಹೇಳಿರುವಂತೆ) ಜಾಗತಿಕ ಮನುಷ್ಯತ್ವದ ಕಲ್ಪನೆಯನ್ನು ಸೃಷ್ಟಿಸಿದ ಆಧುನಿಕ ಮತ್ತು ಆಧುನಿಕೋತ್ತರ ಚಿಂತನೆಗಳು ಮತ್ತು ಯೂರೋಪಿನವರ ಯಜಮಾನೀಯ ಜ್ಞಾನಗಳು ಕಟ್ಟಿಕೊಟ್ಟ 'ಮನುಷ್ಯ ಜೀವಿ' ಕಲ್ಪನೆಯನ್ನು ಆಧರಿಸಿದ 'ಸಾರ್ವತ್ರಿಕ ಅನುಭವ' ಅಲ್ಲ. ತುಂಬಾ ಸ್ಥಳವಿಶಿಷ್ಟ ಮತ್ತು ಜನಾಂಗವಿಶಿಷ್ಟ ಅನುಭವ. (ಜ್ಞಾನ ಅಲ್ಲ, ಅನುಭವ).

ಎಲ್ಲಾ ಸರಿ, ಒಂದೇ ಒಂದು ಫ್ಯನಾನ್ ಹೇಳುವ ಅಪ್ರಸ್ತುತ ಸಂಗತಿ ಎಂದರೆ ಕರಿಯರಿಗೆ (ಹ್ಯಾಮ್‌ನ ಮಕ್ಕಳು) ಕ್ರೈಸ್ತಧರ್ಮವು ಬಂದು ತಗಲಿಕೊಂಡಲ್ಲಿನಿಂದ 'ನೀಗ್ರೋನ ಜೀವಿಸಿದ ಅನುಭವ'ವು ಆಧುನಿಕ ವಸಾಹತೀಯ ಜಗತ್ತಿನ ಜನಾಂಗೀಯ ಅಚ್ಚಿನಿಂದಲೆ ರೂಪಗೊಂಡಿದೆ ಎಂಬುದು; ಅಲ್ಲದೆ ನಿಜಾಂಶವೆಂದರೆ 'ಗುಲಾಮಗಿರಿ ಮತ್ತು ಕರಿಯತನಗಳನ್ನು ಬೇರ್ಪಡಿಸಲು ಆಗದು' ಎಂಬಂತೆ ಬೆಸೆದುಕೊಂಡಿದ್ದ 16ನೆ ಶತಮಾನದ ಸಂದರ್ಭದಲ್ಲಿ ಸ್ಥಳಗಳನ್ನು ಮತ್ತು ಜನಗಳನ್ನು ವರ್ಗೀಕರಿಸಿ ಇಟ್ಟಿದ್ದರ ಹಿಂದಿದ್ದ

ಜ್ಞಾನಶಾಸ್ತ್ರೀಯ ಮುಂಚೂಣಿ ಶಕ್ತಿ ಎಂದರೆ ಅದು ಕ್ರೈಸ್ತಧರ್ಮವೇ ಆಗಿದೆ ಎಂಬುದು. ಇದನ್ನು ಒಪ್ಪಲಾಗದು. ಅನಂತರದಲ್ಲಿ ನೀಗ್ರೋ ಒಬ್ಬನ 'ಜೀವಿಸಿದ ಅನುಭವ'ವನ್ನು ಯಾವಾಗಲೂ ಬಿಳಿಯನೊಬ್ಬನ ಕಿರುಗಣ್ಣಿ ನೋಟವೊಂದರಿಂದಲೆ ಕಟ್ಟಬಹುದು ಎಂಬಂತೆ ಸಾಮಾಜಿಕ ಮತ್ತು ಮನೋವೈಜ್ಞಾನಿಕ ಆಯಾಮಗಳನ್ನು ನಿರ್ದಿಷ್ಟವಾಗಿ ರೂಪಿಸಲಾಗಿದೆ ಎಂದು ಫ್ಯಾನಾನ್ ಹೇಳುತ್ತಾನೆ. ಸಿಲ್ವಿಯಾ ವಿಂಟರ್ ಫ್ಯಾನಾನ್‌ನ ಪರಿಕಲ್ಪನಾತ್ಮಕ ಮತ್ತು ಅನುಭವಾಧಾರಿತ ನಿದರ್ಶನವನ್ನು ಬೀಜರೂಪಿಯಾಗಿ ಹೀಗೆ ಕಟ್ಟಿಕೊಡುತ್ತಾಳೆ: ಫ್ಯಾನಾನ್ ಸಮಾಜವಿಕಾಸವಾದ ಎಂಬ ವಿವರಣಾತ್ಮಕ ಪರಿಕಲ್ಪನೆಯನ್ನು 'ನೀಗ್ರೋ ಆಗಿ ಇರುವುದು ಎಂದರೆ ಅರ್ಥವೇನು?' ಎಂದು ಪ್ರಶ್ನೆ ಎತ್ತುವ ಮೂಲಕ ತನ್ನದೇ ಸ್ವಂತ ಪ್ರಶ್ನೆಯನ್ನು ಯಾರದ್ದೋ ಮೂರನೆಯವರ ಪ್ರತಿಕ್ರಿಯೆ ಎಂಬಂತೆ ಮಂಡಿಸಿದ್ದಾನೆ. ಈ ಕಾರಣಕ್ಕಾಗಿ ಈ ಪ್ರಶ್ನೆಯ ಮೂಲಕ ಸಮಾಜವಿಜ್ಞಾನ, ನರವಿಜ್ಞಾನ ಅಥವಾ ಇಂತಹ ಯಾವುದೇ ಶಿಸ್ತುಗಳ ಆಯುಧಾಗಾರ ಬಳಸಿ 'ನೀಗ್ರೋ'ಗಳನ್ನು ಅಧ್ಯಯನ ಮಾಡಲಾಗದು. ಆದರೆ ಇಲ್ಲಿ ಮುಖ್ಯವಾಗಿ ಜ್ಞಾನದ ನಿರ್ವಸಾಹತೀಕರಣಕ್ಕಾಗಿ ಜ್ಞಾನದ ನಿರ್ಮಾಣದಲ್ಲಿ ತೊಡಗಿರುವುದು ಒಂದು ನೀಗ್ರೋ ದೇಹವೇ ಎಂಬುದು ಮುಖ್ಯ. ಅದೂ ತನ್ನ ಅಸ್ತಿತ್ವದ ವಸಾಹತೀಯ ಹೊಣೆ ಹೊತ್ತಿರುವ ನೀಗ್ರೋ ದೇಹ. ಒಂದು ನೆಲೆಯಲ್ಲಿ ಫ್ಯಾನಾನ್ ನಡೆಯು ಜ್ಞಾನಶಾಸ್ತ್ರೀಯ ಬೇರ್ಪಡೆ ಮತ್ತು ಜ್ಞಾನಶಾಸ್ತ್ರೀಯ ಅಸಹಕಾರವೇ ಆಗಿದೆ. ರಾಜಕಾರಣ ಮತ್ತು ಜ್ಞಾನಶಾಸ್ತ್ರಗಳಲ್ಲಿ ನಿರ್ವಸಾಹತೀಕರಣ ಆಯ್ಕೆಗೆ ನಿಜಕ್ಕು ಹಾರಲು ರೆಕ್ಕೆ ಬಂದಿದೆ.

V

ನಾವೀಗ ಮುಂಚಿನ ಭಾಗದಲ್ಲಿ ವಿವರಿಸಿರುವ ಜ್ಞಾನದ-ನಿರ್ಮಾಣದ ಮತ್ತು ಜ್ಞಾನದ ಉತ್ಪಾದನೆಯ ಜಾಗತಿಕ ಅಧಿಕಾರ ವ್ಯತ್ಯಯವಾಗಿ ಜೆನ್‌ವೆನಿಸ್ತೆಯ 'ಔಪಚಾರಿಕ ನಿರೂಪಣೆಯ ಪರಿಕರ'ವನ್ನು ವಿಸ್ತರಿಸಲು ಸಾಧ್ಯವಿದೆ. ಆಧುನಿಕ/ವಸಾಹತು ನಾಡುಗಳ ಜ್ಞಾನದ-ನಿರ್ಮಾಣವು ಈಗ ಜ್ಞಾನವೇ ಆಗಿದೆ. ಇಲ್ಲಿ ಈಗ ಒಮ್ಮೆಗೆ 'ನ್ಯಾಯಾಧೀಶ'ರೂ, ನ್ಯಾಯಯುತ ಹಾಗೂ ಸ್ವಸಮರ್ಥ ಜ್ಞಾನದ ಖಾತ್ರಿದಾರರೂ ಆದವರು ಮತ್ತು ಅವರ ಆಧುನಿಕತೆಯ ಪರಿಕಲ್ಪನೆ ಎರಡೂ 'ನಮ್ಮ' ಜ್ಞಾನದ ಒಳಗೆ ಮುಳುಗಿ ಹೋಗಲಿವೆ. ವಂದನಾ ಶಿವ (1993) ಪಾಶ್ಚಾತ್ಯ ಸಾಮ್ರಾಜ್ಯಶಾಹಿ ಜ್ಞಾನ ಮತ್ತದರ ಜ್ಞಾನಶಾಸ್ತ್ರದ ನಿರಂಕುಶ ಮತ್ತು ಅಪ್ರಜಾಪ್ರಭುತ್ವೀಯ ಅನ್ವಯವನ್ನು ವಿವರಿಸಲು 'ಮನಸ್ಸಿನ ಏಕಸಂಸ್ಕೃತಿಗಳು' ಎಂಬ ಪರಿಕಲ್ಪನೆಯನ್ನು ನೀಡಿದ್ದಾರೆ.[11]

ಜ್ಞಾನದ ನಿರ್ಮಾಣವು ಸಂಜ್ಞಾಶಾಸ್ತ್ರೀಯ ವಿನಿಮಯಗಳ ಬಳಕೆದಾರರ ನಡುವೆ ಹಂಚಿಕೊಂಡ ಸಂಜ್ಞಾಶಾಸ್ತ್ರೀಯ ಸಂಜ್ಞೆಗಳನ್ನು (ಭಾಷೆಗಳು, ಚಿತ್ರಗಳು, ಶಬ್ದಗಳು, ಬಣ್ಣಗಳು ಇತ್ಯಾದಿ) ಪೂರ್ವಕಲ್ಪಿಸುತ್ತದೆ. ಇದೊಂದು ಸಾಮಾನ್ಯ ಮಾನವ ಕಾಯಕ. (ಇದು ಎಲ್ಲ ಜೀವವುಳ್ಳ ಘಟಕಗಳಿಗೂ ಅನ್ವಯಿಸುತ್ತದೆ. ಅಂದರೆ 'ತಿಳಿಯುವುದು' ಇಲ್ಲದೆ ಜೀವನವೇ ಇರಲಾರದು) ಮಾನವ ಜೀವಿಗಳಲ್ಲಿನ ಜ್ಞಾನ-ನಿರ್ಮಾಣದ ಸರ್ವಸಾಮಾನ್ಯ ಸ್ಥಿತಿಗಳನ್ನು ಬಿಟ್ಟು ಸಂಸ್ಥೆಗಳನ್ನು, ಸಮಾಜವನ್ನು ಸಂಘಟಿಸುವ ಜ್ಞಾನ-

ನಿರ್ಮಾಣಕ್ಕೆ ಹತ್ತಿರದ ದಾರಿ ಕಂಡುಕೊಳ್ಳುವುದಾದರೆ 'ನಿರ್ಜಾತಿ–ನಿರ್ಲಿಂಗಿ' (ಸೆನ್ಸು ಲಾರ್ಗೋ, ಅಂದರೆ ಜಾತಿ–ಜನಾಂಗೀಯವಲ್ಲದ, ಲಿಂಗ/ಲೈಂಗಿಕ ಪ್ರಮಾಣೀಯತೆಗಳಿಲ್ಲದ) ಒಂದನ್ನು ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಅದು ಎರಡು ರೀತಿ ಕಾರ್ಯ ನಿರ್ವಹಿಸುತ್ತದೆ: ಒಂದು, ಹೊಸ (ಜ್ಞಾನಶಾಸ್ತ್ರೀಯ ಸಹಕಾರ) ಸದಸ್ಯರ ತರಬೇತಿ. ಇನ್ನೊಂದು, ಯಾರು ಒಳಬರುತ್ತಾರೆ ಹಾಗೂ ಜ್ಞಾನನಿರ್ಮಾಣವು ಏನನ್ನು ಒಳಕ್ಕೆ ತೆಗೆದಿಕೊಂಡಿದೆ, ತೆಗೆದುಕೊಂಡಿಲ್ಲ, ಅಪಮೌಲ್ಯಗೊಳಿಸಿದೆ ಅಥವಾ ವೈಭವಿಸಿದೆ ಎಂಬುವುದರ ನಿಯಂತ್ರಣ.

ಯೂರೋಪಿನ ಪುರುಜ್ಜೀವನದಿಂದ ಸಂಯುಕ್ತ ಸಂಸ್ಥಾನದ ನವ ಉದಾರವಾದದವರೆಗೆ (ಎಫ್.ಎ. ಹಾಯೆಕ್ ಮತ್ತು ಮಿಲ್ಟನ್ ಫ್ರೈಡ್‌ಮನ್ ಇವರಿಂದ ಪ್ರತಿಪಾದಿತವಾದ ರಾಜಕೀಯ ಆರ್ಥಿಕತೆಯವರೆಗೆ) ಸಾಮ್ರಾಜ್ಯಶಾಹಿ, ವಸಾಹತುಶಾಹಿ ಉದ್ದೇಶಗಳಿಂದ ಇಡಿಕಿರಿದಿರುವ ಜ್ಞಾನ–ನಿರ್ಮಾಣವು ಜಾಗತೀಕರಣದ ಕೊನೆಯ ಹಂತವನ್ನು (ರೊನಾಲ್ಡ್ ರೇಗನ್‌ನಿಂದ ಹಿಡಿದು ವಾಲ್‌ಸ್ಟ್ರೀಟ್ ಕುಸಿತದವರೆಗೆ) ನಿರ್ದೇಶಿಸಿದೆ. ಅದು ಈಗಾಗಲೇ ಹೇಳಿರುವಂತೆ ನಿರ್ದಿಷ್ಟ ಭಾಷೆಗಳಲ್ಲಿ, ಸಂಸ್ಥೆಗಳಲ್ಲಿ ಮತ್ತು ಭೌಗೋಳಿ–ಚಾರಿತ್ರಿಕ ಸ್ಥಳಗಳಲ್ಲಿ ಬಂದು ಕುಳಿತುಕೊಂಡಿದೆ. ಪಾಶ್ಚಾತ್ಯ ಸಾಮ್ರಾಜ್ಯಶಾಹಿ/ಜ್ಞಾನ–ನಿರ್ಮಾಣವನ್ನು ಹೊತ್ತ ಆ ಭಾಷೆಗಳು (ಮತ್ತು ತಮ್ಮನ್ನು ತಾವು ಪಶ್ಚಿಮದ ಕ್ರೈಸ್ತರೆಂದು ಕರೆದುಕೊಳ್ಳುವ ಸಾಮಾಜಿಕ ಕಾರ್ಯವಾಹಿಯರಿಂದ ಆಗಿರುವ ಪಶ್ಚಿಮದ, ಜೆರೂಸಲೇಮಿನ ಸ್ವ–ನಿರ್ವಚನ ಉಳ್ಳ ಭಾಷೆಗಳು) ನಿರ್ದಿಷ್ಟ ನೆನಪುಗಳೊಂದಿಗೆ ನಿರ್ದಿಷ್ಟ ಭೌಗೋಳಿ–ಚಾರಿತ್ರಿಕ ಪ್ರದೇಶಗಳಲ್ಲಿ ವಾಸವಿರುವ ಸಾಮಾಜಿಕ ಕಾರ್ಯವಾಹಿ (ಮನುಷ್ಯ ಜೀವಿ) ಜನರಿಂದ (ಬರಹ ಮತ್ತು ಮಾತು ಎರಡೂ ನೆಲೆಯಲ್ಲಿ) ಬಳಸಲ್ಪಡುತ್ತಿವೆ. ಆ ಕಾರ್ಯವಾಹಿ ಜನರು ತಮ್ಮದೇ ಆದ ಕ್ರೈಸ್ತ ಪಾಶ್ಚಾತ್ಯ ಮತ್ತು ಯೂರೋಪೀಯ ಅಸ್ಮಿತೆಗಳನ್ನು ಸೃಷ್ಟಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಮತ್ತೆ ಮತ್ತೆ ತಮ್ಮನ್ನು ಮತ್ತು ತಮ್ಮ ಭಾಷೆಗಳನ್ನು ಕಟ್ಟಿಕೊಂಡಿದ್ದಾರೆ, ಮರುಕಟ್ಟಿಕೊಂಡಿದ್ದಾರೆ.

ಸಂಕ್ಷಿಪ್ತವಾಗಿ ಹೇಳುವುದಾದರೆ ಸಾಂಸ್ಥಿಕ ಮತ್ತು ಭೌಗೋಳಿ–ರಾಜಕೀಯದ ಕಡೆಗಿನ ಉದ್ದೇಶಿತ ಜ್ಞಾನ–ನಿರ್ಮಾಣದಲ್ಲಿ ತೊಡಗಲು ಔಪಚಾರಿಕ ನಿರೂಪಣೆಯ ಉಪಕರಣವೆ ಪ್ರಾಥಮಿಕ ಉಪಕರಣವಾಗಿದೆ. ಮೂಲಭೂತವಾಗಿ ಜ್ಞಾನ–ನಿರ್ಮಾಣದ ಲೋಕವಿಜ್ಞಾನೀಯ ಮತ್ತು ಪರಿಕಲ್ಪನಾತ್ಮಕ ಚೌಕಟ್ಟನ್ನು ರೂಪಿಸಿರುವ ತಲಕಟ್ಟು ಎಂದರೆ ಅದು ಕ್ರೈಸ್ತ ಮತಶಾಸ್ತ್ರವೆ. ಇದರಲ್ಲೆ ಸಾಮಾಜಿಕ ಕಾರ್ಯವಾಹಿಗಳು ಕಾರ್ಯಶೀಲರಾಗಿರುವುದು ಮತ್ತು (ರಾಜಮನೆತನಗಳು, ಚರ್ಚುಗಳು, ವಿಶ್ವವಿದ್ಯಾಲಯಗಳು, ರಾಷ್ಟ್ರಗಳು ಇತ್ಯಾದಿ) ಸಂಸ್ಥೆಗಳನ್ನು ಕಟ್ಟಿರುವುದು. ಜಾತ್ಯಾತೀತತೆ–ಮತಾತೀತತೆಯು 18ನೆ ಶತಮಾನದಲ್ಲಿ ಕ್ರೈಸ್ತ ಮತಶಾಸ್ತ್ರವನ್ನು ಪಲ್ಲಟಿಸಿ ಅಲ್ಲಿ ಜಾತ್ಯತೀತ ತತ್ವಜ್ಞಾನ ಮತ್ತು ವಿಜ್ಞಾನಗಳನ್ನು ಪ್ರತಿಷ್ಠಾಪಿಸಿತು. ಮತಶಾಸ್ತ್ರೀಯ ಮತ್ತು ಮತಾತೀತ ಎರಡೂ ಚೌಕಟ್ಟುಗಳು ಸೇರಿ ತಮ್ಮ ಭೌಗೋಳಿ–ಚಾರಿತ್ರಿಕ ತಳಾದಿಯನ್ನು ಅಡಗಿಸಿ ಬದಲಿಗೆ ಅಲ್ಲಿ ಭೌಗೋಳಿ–ಚಾರಿತ್ರಿಕ ಮತ್ತು ದೇಹ ಸ್ಥಾನದ ಆಚೆಗೆ ಮತಶಾಸ್ತ್ರ ಮತ್ತು ತತ್ವಜ್ಞಾನ/ವಿಜ್ಞಾನದ ಒಂದು ಜ್ಞಾನದ ಚೌಕಟ್ಟನ್ನು ಸೃಷ್ಟಿಸಿಕೊಂಡವು. ಮತಶಾಸ್ತ್ರೀಯ

ಜ್ಞಾನದ ವಸ್ತುವಿಷಯವು ದೇವರ ಆದೇಶಗಳನ್ನು ಅವಲಂಬಿಸಿದ್ದರೆ, ಜಾತ್ಯತೀತ ತತ್ವಜ್ಞಾನ/ವಿಜ್ಞಾನದ ವಸ್ತುವಿಷಯವು ತರ್ಕಸರಣಿಯನ್ನು ಅವಲಂಬಿಸಿತ್ತು. ಅದೂ ಡೆಕಾರ್ಟೆಯ ಅಹಂ/ಮನಸ್ಸು ಮತ್ತು ಕ್ಯಾಂಟನ ತರ್ಕಾತೀತ ತರ್ಕಸರಣಿಯನ್ನು ಅವಲಂಬಿಸಿತ್ತು. ಹೀಗೆ ಪಾಶ್ಚಾತ್ಯ ಸಾಮ್ರಾಜ್ಯಶಾಹಿ ಜ್ಞಾನವು ಮತರಾಜಕೀಯವಾಗಿ ಮತ್ತು ಅಹಂ-ರಾಜಕೀಯ ತಳಹದಿಯ ಮೇಲೆ ಸ್ಥಾಪನೆಯಾಗಿತ್ತು. ಮತ್ತು ಅದು ಪಾಶ್ಚಾತ್ಯ ಸಾಮ್ರಾಜ್ಯಶಾಹಿ ಭಾಷೆಗಳಲ್ಲಿ ರೂಪುಗೊಂಡಿತ್ತು. ಈ ರೀತಿಯ ತಳಹದಿಯು ವಶಮಾಡಿಕೊಂಡದ್ದನ್ನೆಲ್ಲ ಮಾನ್ಯ ಮಾಡುತ್ತದೆ ಮತ್ತು ಜ್ಞಾನವು ದೇಹ ಮತ್ತು ಸ್ಥಳಗಳನ್ನು ದಾಟಿಯೂ ಇತ್ತು ಎಂದು ವಾದಿಸುತ್ತದೆ. ಮತ್ತು ಆ ಕ್ರೈಸ್ತ ಮತಶಾಸ್ತ್ರ, ಜಾತ್ಯತೀತ ತತ್ವಜ್ಞಾನ/ವಿಜ್ಞಾನ ಇವುಗಳೆಲ್ಲ ಜ್ಞಾನನಿರ್ಮಾಣದ ಮಿತಿಗಳೇ ಆಗಿವೆ. ಇವುಗಳ ಜೊತೆಗೆ ಮತ್ತು ಆಚೆಗೆ ಇರುವ ಎಲ್ಲ ರೀತಿಯ ಜ್ಞಾನವು: ಜಾನಪದ, ಪುರಾಣ, ಸಾಂಪ್ರದಾಯಿಕ ಜ್ಞಾನ ಇವೆಲ್ಲವೂ ಸಾಮ್ರಾಜ್ಯಶಾಹಿ ಜ್ಞಾನಶಾಸ್ತ್ರವನ್ನು ಮಾನ್ಯ ಮಾಡಲೆಂದೆ ಕಂಡುಹಿಡಿದವಾಗಿವೆ.

ಜ್ಞಾನದ ಕ್ರೈಸ್ತಮತೀಯ-ರಾಜಕಾರಣ ಮತ್ತು ಅಹಂ-ರಾಜಕಾರಣ ಕೂಡ ಜ್ಞಾನ-ನಿರ್ಮಾಣದಲ್ಲಿ ದೇಹವನ್ನು ಅಲಕ್ಷಿಸಿದೆ. (2007ಎ, ಮಿಗ್ನೊಲೊ) ಜ್ಞಾನವು ಮನಸ್ಸಿಗೆ ಸೀಮಿತವಾದುದು ಎಂದು ಹೇಳುವ ಮೂಲಕ ಮತ್ತು 'ದ್ವಿತೀಯ ಗುಣ'ಗಳನ್ನು (ಪ್ರಭಾವಗಳು, ಭಾವನೆಗಳು, ಆಸೆಗಳು, ಕೋಪ, ಅವಮಾನ ಇತ್ಯಾದಿ) ಅಲಕ್ಷ್ಯ ಮಾಡುವ ಮೂಲಕ ದೇಹ ಎಂದರೆ ಅಮುಖ್ಯ ಎನ್ನಲಾಗಿದೆ. ಬಿಳಿಯರೆ ಆಗಿದ್ದ ಯೂರೋಪ್/ಪಾಶ್ಚಾತ್ಯ ಕ್ರೈಸ್ತಸಮಾಜಗಳಲ್ಲಿ ನೆಲೆಸಿದ್ದ ಮತ್ತು ನಿರ್ದಿಷ್ಟ ಭಾಷೆಗಳನ್ನು ಆಡುತ್ತಿದ್ದ ಸಾಮಾಜಿಕ ಕಾರ್ಯವಾಹಿಯರು ತಮಗೆ ಯಾವುದು ಎಲ್ಲಿ ಸರಿ ಎನ್ನಿಸುತ್ತಿತ್ತೊ ಅದನ್ನೆ ಮತ್ತು ಯಾವುದು ಅವರ ಪ್ರಭಾವ, ಭಾವನೆ, ಭಯ ಮತ್ತು ಕೋಪಗಳನ್ನು ತಣಿಸುತ್ತಿತ್ತೋ ಅದನ್ನೆ ನಿಜವಾಗಿಯೂ ಈ ಭೂಮಂಡಲದ ಮೇಲಿನ ಇನ್ನಿತರ ಎಲ್ಲರಿಗೂ ಸರಿ ಮತ್ತು ಯುಕ್ತ ಎಂದು ಭಾವಿಸಿದರು. ಮತ್ತು ಪರಿಣಾಮವಾಗಿ ನಾವೆ ಸಾರ್ವತ್ರಿಕ ಜ್ಞಾನದ ಠೇವಣಿದಾರರೂ, ಖಾತ್ರಿದಾರರೂ, ಸೃಷ್ಟಿಕರ್ತರೂ, ಹಂಚಿಕೆದಾರರೂ ಆಗಿದ್ದೇವೆ ಎಂದು ತಿಳಿದರು.

ಗ್ರೀಸ್‌ನಿಂದ ರೋಮನವರೆಗೆ ಇದ್ದ ಕ್ರೈಸ್ತರಲ್ಲದ, ಯೂರೋಪಿನ ನೆನಪುಗಳೂ ಇಲ್ಲದ ಮನುಷ್ಯ ಜೀವಿಗಳು ಯೂರೋಪಿನ ಆರೂ ಆಧುನಿಕ ಸಾಮ್ರಾಜ್ಯಶಾಹಿ ಭಾಷೆಗಳನ್ನು ಅಷ್ಟಾಗಿ ತಿಳಿದಿರಲಿಲ್ಲ. ಯೂರೋಪಿನ ನಂಬಿಕೆಗಳ ವ್ಯವಸ್ಥೆ ಮತ್ತು ಜ್ಞಾನದ ಸಂರಚನೆಯನ್ನು ಜಗತ್ತಿನಾದ್ಯಂತ ಜಾರಿಗೊಳಿಸುವ ಪ್ರಕ್ರಿಯೆಯ ಬಗ್ಗೆ ಈ ಕ್ರೈಸ್ತೇತರರು ನಿಜಕ್ಕೂ ಮೊದಲಿಗೆ ಅಷ್ಟೇನೂ ತಲೆ ಕೆಡಿಸಿಕೊಂಡಿರಲಿಲ್ಲ. ಆನಂತರದಲ್ಲಿ ನೀವೂ ಕೂಡ ನಮ್ಮ ಯೂರೋಪಿನ (ಮತ್ತು 20ನೆ ಶತಮಾನದ ನಂತರ ಸಂಯುಕ್ತ ಸಂಸ್ಥಾನದ) ಜ್ಞಾನ, ನಂಬಿಕೆ, ಜೀವನವಿಧಾನ ಮತ್ತು ವಿಶ್ವಕಲ್ಪನೆಗೆ ತಲೆಬಾಗಿ ಎಂಬ ಅಪೇಕ್ಷೆ ಮತ್ತು ಬೇಡಿಕೆ ಕಂಡಾಗ ಅವರಿಗೂ ಈ ರಾಜಕೀಯದ ಅರಿವಾಯಿತು.

16ನೆ ಶತಮಾನಕ್ಕೆ ಹೋಲಿಸಿದರೆ ಇಪ್ಪತ್ತನೆ ಶತಮಾನದಲ್ಲಿ ತುಂಬಾ ಭಿನ್ನವಾದ ಪ್ರತಿರೋಧಗಳು ಈ ಬಗ್ಗೆ ಜಗತ್ತಿನಾದ್ಯಂತ ಬರಲಾರಭಿಸಿದವು. ಆದರೆ ಜ್ಞಾನದ

ಸಾಮ್ರಾಜ್ಯಶಾಹಿ ಕ್ರೈಸ್ತಮತೀಯ ಮತ್ತು ಭೌಗೋಳಿ-ರಾಜಕಾರಣವು ತನ್ನ ಸದೃಢ ಆರ್ಥಿಕ ಸಂಸ್ಥೆಗಳ (ವಿಶ್ವವಿದ್ಯಾಲಯಗಳು, ಮ್ಯೂಸಿಯಮ್ಮುಗಳು, ಆಯೋಗಗಳು, ರಾಜ್ಯ ಅಧಿಕಾರಿಗಳು, ಸೈನ್ಯ ಮೊದಲಾದವುಗಳ) ಮೂಲಕ ತನ್ನ ಅಸ್ತಿತ್ವವನ್ನು ಹೇಗೋ ಕಾಪಾಡಿಕೊಂಡಿತು. ಆದರೆ ನಾನು ಈಗ ವಿವರಿಸುತ್ತಿರುವ ಪ್ರತಿಕ್ರಿಯೆಗಳು ಆ ರೀತಿಯವಲ್ಲ. ಇವು ವಸಾಹತುಶಾಹಿ ಅಧಿಕಾರ ವ್ಯೂಹದ ನಿರ್ಮಾಣ ಮತ್ತು ಮರುನಿರ್ಮಾಣದಿಂದ ಉತ್ತೇಜಿತವಾದ ಪ್ರತಿಕ್ರಿಯೆಗಳು. ಇವು ಸಾಧಾರಣ ಆದುವಲ್ಲ: ಇವು ಆರ್ಥಿಕತೆಯ (ಶ್ರಮದ ಶೋಷಣೆ ಮತ್ತು ಭೂಕಬಳಿಕೆ ಹಾಗೂ ಸಂಪನ್ಮೂಲಗಳ ಕೊಳ್ಳೆ), ಅಧಿಕಾರದ (ಸರ್ಕಾರ, ಸೈನ್ಯಶಕ್ತಿ), ಲಿಂಗ/ಲೈಂಗಿಕತೆ ಮತ್ತು ಜ್ಞಾನ/ವ್ಯಕ್ತಿನಿಷ್ಠತೆಗಳ ವಲಯದಲ್ಲಿ ಸಂಕೀರ್ಣ ಪರಿಕಲ್ಪನಾತ್ಮಕ ಸಂರಚನೆಗಳಿಂದ ನಿರ್ದೇಶಿತವಾದ ಕಾರ್ಯಾಚರಣೆಗಳು. ಇವು ವಸಾಹತೀಯ ಅಧಿಕಾರದ ಜಾಲಕ್ಕೆ ನೀಡಿದ ಪ್ರತಿಕ್ರಿಯೆಗಳು. ಇಂತಹ ಪ್ರತಿಕ್ರಿಯೆಗಳನ್ನು ನಾನು ನಿರ್ವಸಾಹತೀಯ ಪ್ರತಿಕ್ರಿಯೆಗಳು ಎಂದೇ ಕರೆಯುತ್ತೇನೆ. (ಮಿಗ್ನೊಲೊ, 2007ಬಿ) ಇಲ್ಲಿನ ಮೂರನೆ ಭಾಗದಲ್ಲಿ ನಾನು ನೀಡಿದ ದೃಷ್ಟಾಂತ ಉದಾಹರಣೆಗಳು ಕೂಡ ಸಾಮ್ರಾಜ್ಯಶಾಹಿ ಮತೀಯ ಮತ್ತು ಅಹಂ-ರಾಜಕೀಯ ಪ್ರೇರಿತವಾದ ಸಾರ್ವತ್ರಿಕ ಪಾಶ್ಚಾತ್ಯ ಜ್ಞಾನ-ನಿರ್ಮಾಣ ಮತ್ತು ಸಾಂಸ್ಥಿಕ ಪ್ರತಿಷ್ಠಾಪನೆಯ ನಂಬಿಕೆಗಳ ವಿರುದ್ಧ ಸೆಣಸಿದ ಜ್ಞಾನದ ಬೌಗೋಳೀ-ರಾಜಕೀಯ ಮತ್ತು ನಿರ್ವಸಾಹತೀಯ ಪ್ರತಿಕ್ರಿಯೆಗಳೇ ಆಗಿವೆ.



ಆದರೆ ನಿರ್ವಸಾಹತೀಯ ಜ್ಞಾನದ ರಾಜಕಾರಣದಲ್ಲಿ ನನ್ನ ವಾದಕ್ಕೆ ಅಗತ್ಯವಾದ ಇನ್ನೂ ಒಂದು ಅಂಶ ಬಾಕಿಯಿದೆ. ಸಾಮ್ರಾಜ್ಯಶಾಹಿ ಹಿತಾಸಕ್ತಿಗಳಿಗಾಗಿ ಜನತೆಯನ್ನು ನಿಯಂತ್ರಿಸಿ ನಿರ್ವಹಿಸುವುದಕ್ಕಿಂತ ಸೌಖ್ಯ ಜೀವನಕ್ಕಾಗಿ ಜ್ಞಾನವನ್ನು ನಿರ್ಮಾಣ ಮಾಡುವುದು ಒಳಿತು. ಇದು ಸ್ಥಳೀಯ ಅನುಭವ ಮತ್ತು ಅಗತ್ಯಗಳಿಂದಲೇ ಉದಯಿಸಬೇಕೇ ಹೊರತು ಸ್ಥಳೀಯ ಸಾಮ್ರಾಜ್ಯಶಾಹಿ ಅನುಭವಗಳು ಮತ್ತು ಅಗತ್ಯಗಳಿಂದ ಅಲ್ಲ. ಆದರೆ ಇಲ್ಲಿ ಈ ಸಾಮ್ರಾಜ್ಯಶಾಹಿ ಅನುಭವ ಮತ್ತು ಅಗತ್ಯಗಳನ್ನೆ ಜಾಗತಿಕ ಅಗತ್ಯಗಳೆಂದು ಬಿಂಬಿಸಲಾಗಿದೆ ಮತ್ತು ಇದು ಜ್ಞಾನದ ದೇಹ-ರಾಜಕಾರಣವನ್ನೂ ಹುಟ್ಟಿಸಿದೆ. ಏಕೆ? ಏಕೆಂದರೆ: ವಂಶಪಾರಂಪರ್ಯವಾಗಿ ಸಾಮ್ರಾಜ್ಯಶಾಹಿ ಭಾಷೆಗಳನ್ನು ಮಾತನಾಡದ ಸ್ಥಳ ಮತ್ತು ಪ್ರದೇಶಗಳು ಅಷ್ಟೆ ಅಲ್ಲ ಗ್ರೀಕ್ ಮತ್ತು ಲ್ಯಾಟಿನ್ ಚರಿತ್ರೆಗೆ ಅಪರಿಚಿತ ಆಗಿದ್ದ ಪ್ರದೇಶಗಳನ್ನೂ ಕೂಡ ಜ್ಞಾನಕ್ಷೇತ್ರಗಳಲ್ಲವೆಂದು ಅನರ್ಹಗೊಳಿಸಲಾಯಿತು. ಮತ್ತು ಆ ಅನರ್ಹತೆಯನ್ನು ಯೂರೋಪಿನ ಸಮುದಾಯ ಮತ್ತು ಸಂಸ್ಥೆಗಳಲ್ಲಿದ್ದ ಜ್ಞಾನದ ಉತ್ಪನ್ನ ಮತ್ತು ಜ್ಞಾನ-ನಿರ್ಮಾಣಗಳಿಂದ ತುಂಬಿಸಲಾಯಿತು: ಮತ್ತು ಹಾಗೆ ತುಂಬಿಸಿದ ಜಾಗಗಳಲ್ಲಿ ಗ್ರೀಕ್ ಮತ್ತು ಲ್ಯಾಟಿನ್‌ಗಳ ಪರಿಕಲ್ಪನಾತ್ಮಕ ಖಾತ್ರಿಯು ಭೂಮಂಡಲದ ಮೇಲಿನ ಅವರ ಜೀವಿತದ ನಂಬುಗೆಯನ್ನು ಮಾನ್ಯ ಮಾಡಿತು. ಜೊತೆಗೆ ದೇಹಗಳನ್ನೂ ಕೂಡ.

ಜನಾಂಗೀಯವಾದವು ಇಂದು ನಾವು ಭಾವಿಸಿರುವಂತೆ ಸಾಮ್ರಾಜ್ಯಶಾಹಿ ಜ್ಞಾನದ ಎರಡು ಮುಖ್ಯ ಪರಿಕಲ್ಪನಾತ್ಮಕ ಶೋಧಗಳಿಂದ ಜನ್ಮ ತಾಳಿದ್ದಾಗಿದೆ. ಕೆಲವು ದೇಹಗಳು ಇತರರಿಗಿಂತ ಕೀಳು ಮತ್ತು ಆ ಕೀಳು ದೇಹಗಳು ಹೊಂದಿರುವ ಬುದ್ಧಿ ಕೂಡ ಕೀಳೇ ಎಂಬುದು ಮೊದಲನೆಯದಾದರೆ, ಜ್ಞಾನದ ದೇಹ-ರಾಜಕಾರಣದ ಉಗಮವು ನಿರ್ವಸಾಹತೀಯ ಚಿಂತನೆ ಮತ್ತು ನಿರ್ವಸಾಹತೀಯ ಆಯ್ಕೆ ಎಂಬುದು ಎರಡನೆಯದ್ದಾಗಿದೆ.

ಮುಂದುವರೆದ ಸಮುದಾಯ ಮತ್ತು ಪ್ರದೇಶಗಳಿಂದ ಮಾರ್ಗದರ್ಶನ ಪಡೆಯುವ ಅಗತ್ಯವುಳ್ಳ ಹಿಂದುಳಿದ 'ದೇಹ' (ಸಮುದಾಯ) ಮತ್ತು 'ಪ್ರದೇಶ'ಗಳು ಈಗಲೂ ಇವೆ ಎಂದು ನೀವು ವಾದ ಮಾಡಬಹುದು. ಮೊತ್ತಮೊದಲಿಗೆ 'ಹಿಂದುಳಿದ' ಸ್ಥಳಗಳಿಗೆ ಯಾರು ಮುಂದುವರಿದವರು ಮತ್ತು ಮಾರ್ಗದರ್ಶನ ಮಾಡಬಲ್ಲ ಶಕ್ತರು ಹೋಗುತ್ತಾರೋ ಅವರಿಗೆ ಅಂತಹ ಹಕ್ಕು ಇದೆ ಎಂದೂ ನೀವು ವಾದಿಸಬಹುದು. ಒಬ್ಬ ಪ್ರಾಮಾಣಿಕ ಉದಾರವಾದಿಯಂತೆ ನೀವು 'ನಮ್ಮ' ಅನುಭವ ಮತ್ತು ಜ್ಞಾನವನ್ನು 'ಅವರ' ಮೇಲೆ ಹೇರುವುದಿಲ್ಲ; ಆದರೆ 'ಸ್ಥಳೀಯರ ಜೊತೆ ಸೇರಿ ಕೆಲಸ ಮಾಡು'ತ್ತೇವೆ ಎಂದೂ ಹೇಳಬಹುದು. ಇಲ್ಲಿ ಸಮಸ್ಯೆ ಏನೆಂದರೆ: ಯಾವ ಕಾರ್ಯಸೂಚಿಯನ್ನು ನೀವು ಜಾರಿಗೊಳಿಸುತ್ತೀರಿ? ಅವರ ಕಾರ್ಯಸೂಚಿಯನ್ನೋ? ನಿಮ್ಮ ಕಾರ್ಯಸೂಚಿಯನ್ನೋ? ಆಗ ನೀವು ಚಟರ್ಜಿ ಮತ್ತು ಲಿಂಡಾ ಸ್ಮಿತ್ ಅವರಿಗೆ ಮರಳಬೇಕಾಗುತ್ತದೆ.

ನಿರ್ವಸಾಹತೀಯ ಚಿಂತನೆಯು ಮೊತ್ತಮೊದಲಿಗೆ 'ಸಾಮ್ರಾಜ್ಯಶಾಹಿ ಜ್ಞಾನದ ಬಲೆ'ಯಿಂದ (ಕ್ರೈಸ್ತಮತೀಯ ಮತ್ತು ಅಹಂ-ರಾಜಕೀಯವಾಗಿ ಸ್ಥಾಪಿತವಾದ) ಮತ್ತು ಶಿಸ್ತೀಯ

ನಿರ್ವಹಣೆಯಿಂದ ಬೇರ್ಪಡುವಿಕೆಯನ್ನು (ಜ್ಞಾನಶಾಸ್ತ್ರೀಯವಾಗಿ ಮತ್ತು ರಾಜಕೀಯವಾಗಿ) ಬಯಸುತ್ತದೆ.

'ಬಂಡವಾಳವಾದವನ್ನು ರಕ್ಷಿಸುವುದು ಹೇಗೆ' ಎಂಬುದು ಇತ್ತೀಚೆಗೆ ಅಂದರೆ ವಾಲ್‌ಸ್ಟ್ರೀಟ್ ಆರ್ಥಿಕ ಬಿಕ್ಕಟ್ಟಿನ ನಂತರದಲ್ಲಿ ಸಾಮಾನ್ಯವಾದ ಚರ್ಚೆಯ ವಿಷಯವಾಗಿದೆ. ಇಲ್ಲಿ ನಿರ್ವಸಾಹತೀಯ ಪ್ರಶ್ನೆ ಎಂದರೆ: ನೀವು ಮನುಷ್ಯರನ್ನು ರಕ್ಷಿಸುವುದನ್ನು ಬಿಟ್ಟು ಬಂಡವಾಳವಾದವನ್ನು ಏಕೆ ರಕ್ಷಿಸುತ್ತೀರಿ? ಬಂಡವಾಳವಾದವು ನಿರಂತರವಾಗಿ ನಮ್ಮನ್ನು ನಾಶಪಡಿಸುತ್ತಿರುವಾಗ ಮನುಷ್ಯರನ್ನು ರಕ್ಷಿಸದೆ ಏತಕ್ಕೆ ಅಮೂರ್ತ ಘಟಕವನ್ನು ರಕ್ಷಿಸಲು ಗುದ್ದಾಡುತ್ತೀರಿ? ಇದೇ ಪಾತಳಿಯಲ್ಲಿ ಜ್ಞಾನದ ಭೌಗೋಳಿ ಮತ್ತು ದೇಹ–ರಾಜಕಾರಣ, ನಿರ್ವಸಾಹತೀಯ ಚಿಂತನೆ ಮತ್ತು ನಿರ್ವಸಾಹತೀಯ ಆಯ್ಕೆ ಇವುಗಳು ಮನುಷ್ಯ ಜೀವಿಗಳನ್ನು–ಬದುಕನ್ನು ಮೊದಲ ಆದ್ಯತೆಯಾಗಿ ನೋಡುತ್ತಿವೆ. 'ಶಿಸ್ತುಗಳನ್ನು ರೂಪಾಂತರಿಸು'ವುದನ್ನಲ್ಲ. ಆದರೆ ಈಗಲೂ ನಿರ್ವಸಾಹತೀಯ ಚಿಂತನೆಯು ಬದುಕು ಮತ್ತು ಮನುಷ್ಯ ಜೀವಕ್ಕೆ ಮೊದಲ ಆದ್ಯತೆ ಕೊಡುತ್ತಿದ್ದಾಗ್ಯೂ ನಿಕೋಲಸ್ ರೋಸ್ ಅವರ 'ಸ್ವತಃ ಜೀವನದ ಒಳಗೆ ಇರುವ ರಾಜಕಾರಣ'ದ ಹಾಗೆ ಏತಕ್ಕೆ ಪರಿವರ್ತನೀಯ ಶಕ್ತಿಗಳ ಜೊತೆ ಕೈಜೋಡಿಸುತ್ತಿಲ್ಲ? ರೋಸ್ ಅವರ 'ಪಾಲಿಟಿಕ್ಸ್ ಆಫ್ ಲೈಫ್ ಇನ್ ಇಟ್ಸೆಲ್ಫ್' (ಸ್ವತಃ ಜೀವನದ ಒಳಗೆ ಇರುವ ರಾಜಕಾರಣ) ಇದು ಕೊನೆಯ 'ಜೀವನದ ವಾಣೀಜ್ಯೀಕರಣ' ಮತ್ತು 'ಜೀವ–ಅಧಿಕಾರ'. (ಫ್ಯುಕೋ ಹೊಂದಿರುವಂತೆ). 'ಸ್ವತಃ ಜೀವನದ ಒಳಗೆ ಇರುವ ರಾಜಕಾರಣ'ದಲ್ಲಿ ರಾಜಕೀಯ ಮತ್ತು ಆರ್ಥಿಕ ತಂತ್ರಗಾರಿಕೆಗಳು ಏಕಕಾಲಕ್ಕೆ ಜೀವನವನ್ನು ನಿಯಂತ್ರಿಸಲು ಮತ್ತು ಹಾಗೆಯೆ ಹೆಚ್ಚು ಹೆಚ್ಚು ಗ್ರಾಹಕರನ್ನು ಸೃಷ್ಟಿಸಲು ಕೈಜೋಡಿಸುತ್ತವೆ. ಜ್ಞಾನದ ಅಹಂ–ರಾಜಕಾರಣದ ಹಲವು ನೈಜ ಫಲಿತಗಳಲ್ಲಿ ರಾಜ್ಯವು ಜಾರಿಗೆ ತಂದದ್ದು ಫ್ಯೂಕೋನ ಪರಿಕಲ್ಪನೆಯ ಜೀವ–ರಾಜಕಾರಣ ಒಂದೇ. 'ಸ್ವತಃ ಜೀವನದ ಒಳಗೆ ಇರುವ ರಾಜಕಾರಣ'ವು ಅದನ್ನು ಮಾರುಕಟ್ಟೆಗೆ ವಿಸ್ತರಿಸಿತು. ಹೀಗೆ 'ಸ್ವತಃ ಜೀವನದ ಒಳಗೆ ಇರುವ ರಾಜಕಾರಣ'ವು ತಮ್ಮ ದುಡಿಮೆಯ ಹಣದಿಂದ ಆರೋಗ್ಯ–ಪ್ರಸಾರಕ ಉತ್ಪನ್ನಗಳನ್ನು ಖರೀದಿಸಲು ಬಂಡವಾಳ ಹೂಡಬಲ್ಲ ಗ್ರಾಹಕರನ್ನು ಅಗಾಧ ಪ್ರಮಾಣದಲ್ಲಿ ಸೃಷ್ಟಿಸಬಲ್ಲ ಶಕ್ತಿಯು ಜೀವ–ತಂತ್ರಜ್ಞಾನಕ್ಕೆ ಇರುವುದನ್ನು ವಿವರಿಸುತ್ತದೆ. ಆ ಮೂಲಕ ತಂತ್ರಜ್ಞಾನದ (ಬಯೋಟೆಕ್ನಾಲಜಿಯ) ಉತ್ಪಾದನೆ, ಪುನರುತ್ಪಾದನೆ ಮಾಡುವ ಮತ್ತು ಆ ಮೂಲಕ ಸಂಪಾದನೆಯನ್ನು ಹೆಚ್ಚಿಸಿಕೊಳ್ಳುವ ಮತ್ತು ಆ ಮೂಲಕ ಮನುಷ್ಯರನ್ನು ನಿಯಂತ್ರಿಸುವ ಶಕ್ತಿಯನ್ನೂ ಹೆಚ್ಚಿಸಿಕೊಳ್ಳುವ ಸುಲಭ ಮಾರ್ಗವನ್ನೂ ವಿವರಿಸುತ್ತದೆ.

ಇಲ್ಲಿಯೆ, ಇದೇ ಬಿಂದುವಿನಲ್ಲೆ ನಿರ್ವಸಾಹತೀಯ ಆಯ್ಕೆಗಳು ಜ್ಞಾನದ ಭೌಗೋಳಿ ಮತ್ತು ದೇಹ–ರಾಜಕಾರಣದಲ್ಲಿ ತಮ್ಮ ನೆಲೆ ಕಂಡುಕೊಂಡಿವೆ. ಇಲ್ಲಿಯೆ ಇವು ಜ್ಞಾನದ ನಿರ್ವಸಾಹತೀಕರಣ, ನಿರ್ವಸಾಹತೀಯ ಜ್ಞಾನ–ನಿರ್ಮಾಣ, ಸಾಮ್ರಾಜ್ಯಶಾಹಿ/ಆಧುನಿಕ ಜ್ಞಾನದ ಬಲೆಯಿಂದ ಮತ್ತು ವಸಾಹತೀಯ ಅಧಿಕಾರದ ಜಾಲದಿಂದ ಬೇರ್ಪಡುವಿಕೆ ಇವುಗಳಲ್ಲಿ ತೊಡಗಿವೆ.

■

## ಟಿಪ್ಪಣಿಗಳು

1. ಈಗ ಈ ಹಕ್ಕುಮಂಡನೆಯು ಎಲ್ಲ ಕಡೆಯೂ ಹಬ್ಬಿದೆ. ದಕ್ಷಿಣ ಪೂರ್ವ ಮತ್ತು ಪೂರ್ವ ಏಷ್ಯಾಗಳಲ್ಲಿ ಅಪಾಶ್ಚಾತ್ಯೀಕರಣ ಯೋಜನೆಯ ಒಂದು ಪ್ರಾಥಮಿಕ ಅಂಶ ಇದು. ಈ ಬಗ್ಗೆ ಕಿಶೋರ್ ಮಹಬೂಬಾನಿ ಅವರ ಪ್ರಚೋದನಾತ್ಮಕ ಮಾತುಗಳನ್ನು ಗಮನಿಸಿ.

2. ತಪ್ಪು ತಿಳುವಳಿಕೆಯನ್ನು ನಿವಾರಿಸಲು ಇಲ್ಲಿ ನಾನು ಪ್ರಾನ್ಸಿನಲ್ಲಿ ಪಡೆದ ಸಂಜ್ಞಾಶಾಸ್ತ್ರೀಯ ತರಬೇತಿಯ ಕಡೆಗೆ ಮತ್ತು ನನ್ನದೇ ಈ ಮುಂಚಿನ ಪ್ರಕಟಣೆಗಳ ಕಡೆಗೆ ನಿಮ್ಮ ಗಮನ ಸೆಳೆಯಲು ಬಯಸುತ್ತೇನೆ. ( ನೋಡಿ ಕ್ಯಾಸ್ಟ್ರೋ ಗೊಮೆಜ್, 2007 ಮತ್ತು ಜೊತೆಗೆ ನೋಡಿ ಮಿಗ್ನೊಲೊ 1993)

3. ನೋಡಿ: ಬಿಲ್ ರೀಡಿಂಗ್ಸ್ (1996) ಇವರ ಅಭಿಜಾತವಾದ. ವಿಶೇಷವಾಗಿ ಯೂರೋ ಅಮೆರಿಕಾದ ವಿಶ್ವವಿದ್ಯಾಲಯಗಳ ಚರಿತ್ರೆಯ ಬಗ್ಗೆ ರೀಡಿಂಗ್ಸ್ ಗಮನ ಹರಿಸುತ್ತಾರೆ. ರೀಡಿಂಗ್ಸ್ ಅವರ ಮೂಲಕ ನಾನು ವಸಾಹತೀಯ ವಿಶ್ವವಿದ್ಯಾಲಯಗಳ ಪರಿಣಾಮಗಳ ಬಗ್ಗೆ ಶೋಧಿಸಿದ್ದೇನೆ. (ಸ್ಯಾಂಟೋ ಡೊಮಿಂಗೋ, ಮೆಕ್ಸಿಕೊ, ಲಿಮಾ, ಕಾರ್ಡೋಬಾ, ಮತ್ತು ಇತರ 16ನೇ ಶತಮಾನದಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯಗಳು) ಮತ್ತು ಹಾರ್ವರ್ಡ್ ವಿಶ್ವವಿದ್ಯಾಲಯ (ಇದು ದೆಕಾರ್ಟೆಯ 'ಡಿಸ್‌ಕೋರ್ಸ್ ಡಿ ಲ ಮೆ'ತೋದೆ' ಪ್ರಕಟವಾದ ವರ್ಷ ಅಂದರೆ 1636ರಲ್ಲಿ ಸ್ಥಾಪಿತವಾಯಿತು.) ನೋಡಿ ಮಿಗ್ನೋಲಾ 2003

4. ಚಾರಿತ್ರಿಕ ವಿವರಕ್ಕೆ ನೋಡಿ: ಹೀಲ್‌ಬ್ರಾನ್ (1995) ಫ್ಯುಕೋ (1996), ವಾಲರ್‌ಸ್ಟೀನ್ ಎತ್ ಅಲ್, (1995) ಮತ್ತು ಸಮಾಜ ವಿಜ್ಞಾನಗಳು ಮತ್ತು ಮಾನವಿಕಗಳು ಅಮೇರಿಕದಲ್ಲಿ ಒಂದೇ ಆಗಿದ್ದವು ಎಂಬ ಬಗ್ಗೆ ಏನಾದರೂ ಅನುಮಾನಗಳಿದ್ದರೆ, ನೋಡಿ: ಗುಸ್ಡಾರ್ಫ್ (1967).

5. ಪೂರಕ ಪರಾಮರ್ಶನ ಯಥೇಚ್ಚವಾಗಿದೆ. ನಾನು ಯಾವಾಗಲೂ ಪ್ರಯೋಗಾತ್ಮಕ ಮತ್ತು ವ್ಯಾಖ್ಯಾನಾತ್ಮಕ ವಿಜ್ಞಾನಗಳ ನಡುವೆ, ಜ್ಞಾನಶಾಸ್ತ್ರ ಮತ್ತು ವಿವರಣೆಯ ನಡುವೆ, ಶಬ್ದಾರ್ಥಶಾಸ್ತ್ರ ಮತ್ತು ವ್ಯಾಖ್ಯಾನಗಳ ನಡುವೆ ನಿರ್ದಿಷ್ಟ ದೃಷ್ಟಿಕೋನವನ್ನು ಅದಷ್ಟು ವ್ಯತ್ಯಾಸಗಳೊಂದಿಗೆ ಬಳಸುತ್ತೇನೆ. ನೋಡಿ: ಮಿಗ್ನೊಲೊ (1989).

6. ನೋಡಿ: http://www.britannica.com/ebchecked/topic/179408/educAtion/47455/Ancient China

7. ನೋಡಿ: http://www.britannica.com/ebchecked/topic/179408/educAtion/47455/The new World -civilizations-of-the-maya-aztec-and-inka

8. ಈ ಬಗ್ಗೆ ಇನ್ನಷ್ಟು ವಿವರಗಳಿಗೆ ನೋಡಿ: ಗೋರ್ಡಾನ್ ಅವರ ತಲಸ್ಪರ್ಶಿ ಅಧ್ಯಯನ (1995).

9. ನೋಡಿ: http://www.harvardir.org/articles/1324

10. ನೋಡಿ: ಈ ವಿಚಾರವನ್ನು ಸಿಲ್ವಿಯಾ ವೈಂಟರ್ (2001) ಚರ್ಚಿಸಿದ್ದಾರೆ. ಜೊತೆಗೆ ಲೀವಿಸ್ ಗೋರ್ಡಾನ್ (2006) ಒಳ್ಳೆಯ ಒಳನೋಟವುಳ್ಳ ಸಂಕ್ಷಿಪ್ತ ಟಿಪ್ಪಣಿ ಮತ್ತು ಇತ್ತೀಚಿನ ಬೆಳವಣಿಗೆಗಳಿಗೆ ನೋಡಿ: ಕರೇನ್ ಎಂ. ಕಾನೆ (2007).

11. ಈ ವಿಚಾರದ ಮೇಲಿನ ಒಂದು ಸಂದರ್ಶನಕ್ಕೆ ನೋಡಿ: http://www.indiatogether.org/2003/apr/ivw-vandana.htm

## ಶಬ್ದಾರ್ಥಕೋಶ

(ಸದರಿ ಲೇಖನದಲ್ಲಿ ಬಳಕೆ ಆಗಿರುವ ಇಂಗ್ಲಿಶ್ ಪರಿಭಾಷೆಯ ಕನ್ನಡ ರೂಪಗಳು)

Anchor= ನಿರೂಪಕ, ಲಂಗರು, ಆಧಾರ, ನಿದರ್ಶನ

Anthropos= ಮಾನವರು

Archaeology of knowledge= ಜ್ಞಾನದ ಪುರಾತತ್ವ

Arsenal= ಆಯುಧಾಗಾರ

Bio-Graphical= ಜೀವ-ಚಾರಿತ್ರಿಕ

Bio-politics= ಜೀವ-ರಾಜಕಾರಣ

Bio –power= ಜೀವ-ಅಧಿಕಾರ (ಜೈವಿಕ ಶಕ್ತಿ)

Body –politics= ದೇಹ-ರಾಜಕಾರಣ (ಘಟಕ-ರಾಜಕಾರಣ: ದೇಹ ಎಂದರೆ ಜನಾಂಗೀಯ ಘಟಕ, ಲಿಂಗೀಯ ಘಟಕ, ಪ್ರಾದೇಶಿಕ ಘಟಕ ಮತ್ತು ವ್ಯಕ್ತಿದೇಹ ಎಂಬ ಅರ್ಥದಲ್ಲಿ: ದೇಹ, ಜನಾಂಗ, ಜಾತಿ, ವ್ಯಕ್ತಿ, ಪ್ರದೇಶಗಳ ನೆಲೆಯಲ್ಲಿ ಮಾಡುವ ತಾರತಮ್ಯ)

Bottom Line= ಒಟ್ಟು ಮೊತ್ತ (ಲೆಕ್ಕದಲ್ಲಿ ನಮೂದಿಸುವ ಕೊನೆಯ ಒಟ್ಟು ಮೊತ್ತ)

Bracketing= ಅಡಗಿಸು, ಅಲಕ್ಷಿಸು

Capitalism= ಬಂಡವಾಳವಾದ

Cartesian ego= ಡೆಕಾರ್ಟೆಯ ಅಹಂ (ರೆನೆ ಡೆಕಾರ್ಟೆಯ ಒಂದು ಪರಿಕಲ್ಪನೆ)

Centrifugal= ಕೇಂದ್ರಾಪಗಾಮಿ

Chimera= ಮಿಶ್ರತಳಿ

Christendom= ಕ್ರೈಸ್ತಸಮಾಜ

Civilization of death= ನಾಗರೀಕತೆಯ ಸಾವು (ನಾಥನ್ ಹಲೆ ಪ್ರತಿಪಾದಿಸಿದ ಕಲ್ಪನೆ)

Colonial matrix of power= ವಸಾಹತೀಯ ಅಧಿಕಾರದ ಜಾಲ

Cosmology= ಲೋಕವಿಜ್ಞಾನ

De-Colonial Freedom= ನಿರ್ವಸಾಹತೀಯ ಸ್ವಾತಂತ್ರ್ಯ

De-colonial option= ನಿರ್ವಸಾಹತೀಯ ಆಯ್ಕೆ

De-colonial project= ನಿರ್ವಸಾಹತೀಯ ಯೋಜನೆ (ಹುನ್ನಾರ)

De-colonization= ನಿರ್ವಸಾಹತೀಕರಣ

De-colonizing knowledge= ಜ್ಞಾನದ ನಿರ್ವಸಾಹತೀಕರಣ

De-construction= ನಿರಚನೆ

Descartes's Dictom= ಡೆಕಾರ್ಟೆಯ ತತ್ವ (ಸೂತ್ರ)

Disclaimer= ಹಕ್ಕುನಿವೃತ್ತಿ

Discursive frame, conversation frame= ಆಚಾರ ಚೌಕಟ್ಟು, ಸಂವಾದ ಚೌಕಟ್ಟು

Division of scientific Labor= ವಿಜ್ಞಾನಶ್ರಮದ ವಿಭಜನೆ

Ego-political= ಅಹಂ-ರಾಜಕೀಯ

Enlightenment= ಜ್ಞಾನೋದಯ

Enunciation= ನಿರೂಪಣೆ (ಏನನ್ನಾದರೂ ಮಾತು ಅಥವಾ ಬರಹದಲ್ಲಿ ಹೇಳುವ/ಉಚ್ಚರಿಸುವ/ಅಭಿವ್ಯಕ್ತಿಸುವ ಪ್ರಕ್ರಿಯೆ)

Enunciated= ನಿರೂಪಿತ ಸಂಗತಿ/ನಿರೂಪಿಸಿದವರು/ನು/ಳು

Epistemic Disobedience= ಜ್ಞಾನಶಾಸ್ತ್ರೀಯ ಅಸಹಕಾರ (ಪಶ್ಚಿಮದ ಜ್ಞಾನವೆ ಸರಿಯಾದ ಮತ್ತು ನಿಜವಾದ ಜ್ಞಾನ, ಮಿದುಳು ಮೂಲಕ ಬರವಣಿಗೆ ರೂಪದಲ್ಲಿ ವ್ಯಕ್ತವಾದ ಜ್ಞಾನವೇ ನಿಜವಾದ ಜ್ಞಾನ, ಅನುಭವವು ಜ್ಞಾನವಲ್ಲ ಎಂಬಿತ್ಯಾದಿ ನಂಬಿಕೆಗಳು ಇರುವ ಜ್ಞಾನಮೀಮಾಂಸೆಯ ಎದುರಿನ ಜ್ಞಾನಶಾಸ್ತ್ರೀಯ ಅವಿಧೇಯತೆ, ಅವಿನಯ, ಅಸಹಕಾರ, ಹೋರಾಟ, ಪ್ರತಿರೋಧ)

Epistemic awakening= ಜ್ಞಾನಶಾಸ್ತ್ರೀಯ ಎಚ್ಚರ

Epistemology = ಜ್ಞಾನಶಾಸ್ತ್ರ

Essentialist= ಸಾರಾಂಶವಾದಿ, ಖಚಿತವಾದಿ

Eugenics= ಸುಸಂತಾನಶಾಸ್ತ್ರ (ಉತ್ತಮ ಸಂತಾನವನ್ನು ಪಡೆಯುವ ವಿಜ್ಞಾನ)

Floating sign= ಚಂಚಲ ಸಂಜ್ಞೆ

Formal Apparatus of Enunciation= ಔಪಚಾರಿಕ ನಿರೂಪಣೆಯ ಉಪಕರಣ (ಬೆನ್‌ವೆನಿಸ್ತೆ ಪ್ರತಿಪಾದಿಸಿದ ಕಲ್ಪನೆ)

Gender Normativity, Sexual Normativity, Heteronormativity= ಲಿಂಗ ಪ್ರಮಾಣೀಯತೆ /ಲೈಂಗಿಕ ಪ್ರಮಾಣೀಯತೆ, ಭಿನ್ನಲಿಂಗ ಪ್ರಮಾಣೀಯತೆ (ಗಂಡು ಮತ್ತು ಹೆಣ್ಣು ಎಂಬ ಎರಡು ಭಿನ್ನ ಲಿಂಗಗಳು ಮಾತ್ರವೆ ವಿವಾಹ ಆಗಬೇಕು, ಒಡಬಾಳಬೇಕು ಮತ್ತು ಅದೆ ಸರಿಯಾದುದು ಎಂಬ ನಂಬಿಕೆ ಮತ್ತು ನಿಯಮ)

Geo-historical, bio-graphical= ಭೌಗೋಳಿ-ಚಾರಿತ್ರಿಕ, ಜೀವ-ಚಾರಿತ್ರಿಕ

Geo-politics = ಭೌಗೋಳಿ-ರಾಜಕಾರಣ (ನಿರ್ದಿಷ್ಟ ಪ್ರದೇಶಗಳು ಕೀಳು ಎಂದು ನಿರ್ವಚಿಸುವ, ಜ್ಞಾನ, ವಿಜ್ಞಾನ, ತರ್ಕ, ತತ್ವಜ್ಞಾನ, ನಾಗರೀಕತೆ, ಆಧುನಿಕತೆ ಇವೆಲ್ಲವು ಕೆಲವೆ ಪ್ರದೇಶಗಳಲ್ಲಿ ಮಾತ್ರ ಹುಟ್ಟಿ ವಿಕಾಸ ಆಗಬಲ್ಲವು ಎಂಬ ತಾರತಮ್ಯ ನೀತಿ)

Geo-politics of knowledge= ಜ್ಞಾನದ ಭೌಗೋಳಿ-ರಾಜಕಾರಣ

Going back in time= ಹಿಂದಿನ ಸ್ಥಿತಿಗೆ ಮರಳಿ ಹೋಗು

Golden rule of development= ಅಭಿವೃದ್ಧಿಯ ಸುವರ್ಣನಿಯಮ (ಯಾರು ಸಂಪತ್ತನ್ನು ಹೊಂದಿದ್ದಾರೂ ಅವರೇ ಅಭಿವೃದ್ಧಿ ಎಂದರೆ ಏನು ಹೇಗೆ ಎಂದು ನಿರ್ವಚಿಸುವ, ನಿಯಮ ಮಾಡುವ ಅಧಿಕಾರ)

Ham= ಶಾಪಗ್ರಸ್ಥನಾದ ಕರಿಯ ಕಾನಾನ್‌ನ ಮಗ ಹ್ಯಾಮ್: ಇವನ ಮಕ್ಕಳೇ ಕರಿಯರು ಎಂದು ಒಂದು ಸುಳ್ಳು ನಂಬಿಕೆಯನ್ನು ಕತೆ ಕಟ್ಟಿ ಹಬ್ಬಿಸಲಾಗಿದೆ.

Heteronormativity= ಭಿನ್ನಲಿಂಗ ಪ್ರಮಾಣೀಯತೆ (ಭಿನ್ನ ಲೀಂಗೀಯರೇ ಮದುವೆ ಆಗಬೇಕು ಎಂಬ ಆಚಾರ, ನಂಬಿಕೆ ಅಥವಾ ನಿಯಮ)

Holocaust= ಮಾರಣಹೋಮ, ಸಾಮೂಹಿಕ ಹತ್ಯಾಕಾಂಡ, ಕಗ್ಗೊಲೆ

Hubris of the zero point= ಶೂನ್ಯ ಬಿಂದುವಿನ ಮದ

Humanitas= ಮಾನವತಾ

Ideographic, Nomothetic= ವ್ಯಾಖ್ಯಾನಾತ್ಮಕ, ಪ್ರಯೋಗಾತ್ಮಕ

Ideology= ಸಿದ್ಧಾಂತ, ಚಿಂತನೆ,

Impenitent= ಪಶ್ಚಾತ್ತಾಪವಿಲ್ಲದ

Imperial= ಸಾಮ್ರಾಜ್ಯಶಾಹಿ

Jewish= ಯಹೂದಿ

Jornalero= ಊಳಿಗದ ಜಾತಿ

Lesser humans= ಕಡಿಮೆ ಮಾನವರು

Lexicology= ನಿಘಂಟು ರಚನಾಶಾಸ್ತ್ರ

Locus of enunciation= ನಿರೂಪಣೆಯ ವಲಯ/ಸ್ಥಳ

Materiality= ವಸ್ತುರೂಪತೆ, ವಸ್ತು-ಸಾಮಗ್ರಿ ರೂಪದಲ್ಲಿ ಇರುವ ಸ್ಥಿತಿ (ವರ್ಚ್ಯುಯಾಲಿಟಿಯಲ್ಲದ ಸ್ಥಿತಿ)

Matrix= ಅಚ್ಚು, ಗರ್ಭ, ಜಾಲ, ಮಾತೃಕೆ, ವ್ಯೂಹ

Matrix of power= ಅಧಿಕಾರದ ಜಾಲ

Morphology= ಶಬ್ದರಚನಾಶಾಸ್ತ್ರ

Occidentalism= ಪಾಶ್ಚಿಮಾತ್ಯವಾದ

Ontogenic-Philogenic= ವ್ಯಕ್ತಿವಿಕಸನೀಯ-ಜೀವವಿಕಸನೀಯ

Ontogeny= ಜೀವವಿಕಾಸ

Ontology= ಮೂಲತತ್ವ, ಜೀವಿಸ್ವಭಾವಶಾಸ್ತ್ರ (ಜೀವಿಯ ಸ್ವಭಾವ/ಅಸ್ತಿತ್ವದ ಕುರಿತ ಅಧ್ಯಯನ)

Orientalism= ಪೌರ್ವಾತ್ಯವಾದ

ORT (Oral Rehydration Therapy) = ಮೌಖಿಕ ಜಲಪೂರಣ ಚಿಕಿತ್ಸೆ (ಬಾಯಿಂದ ನೀರು ಕುಡಿಸುವ ಚಿಕಿತ್ಸೆ)

Our Modernity and Their Modernity= ನಮ್ಮ ಆಧುನಿಕತೆ ಮತ್ತು ಅವರ ಆಧುನಿಕತೆ

Peripheral, Subaltern, Marginal= ಪರಿಧಿಯ, ಅಲಕ್ಷಿತ, ಅಂಚಿನ

Phylogeny, Ontogeny, Sociogeny= ವ್ಯಕ್ತಿವಿಕಾಸ, ಜೀವವಿಕಾಸ, ಸಮಾಜವಿಕಾಸ

Positivist= ಖಚಿತವಾದಿ

Pronominal system= ಸರ್ವನಾಮ ವ್ಯವಸ್ಥೆ

Racial Matrix= ಜನಾಂಗೀಯ ಅಚ್ಚು

Radical= ಆಮೂಲಾಗ್ರ, ಮೂಲಭೂತವಾಗಿ

Reason, (Reasoning)= ತರ್ಕಸರಣಿ, ಕಾರಣಮೀಮಾಂಸೆ

Renaissance= ಪುನರುಜ್ಜೀವನ

Secondary qualities= ದ್ವಿತೀಯ ಗುಣಗಳು (ಕೋಪ, ಭಯ, ನೋವು, ದುಃಖ ಇತ್ಯಾದಿ)

Semiologys= ಸಂಜ್ಞಾಶಾಸ್ತ್ರ

Sensu-largo= ನಿರ್ಜಾತಿ-ನಿರ್ಲಿಂಗಿ (ಜಾತಿ-ಜನಾಂಗೀಯತೆ, ಲಿಂಗಪ್ರಮಾಣ, ಲೈಂಗಿಕ ಪ್ರಮಾಣೀಯತೆಗಳು ಯಾವುವೂ ಇಲ್ಲದ ಸ್ಥಿತಿ)

Situated knowledge= ಸಾಂದರ್ಭಿಕ ಜ್ಞಾನ

Social actor= ಸಾಮಾಜಿಕ ಕಾರ್ಯವಾಹಿ

Structuralism post-structuralism= ರಚನಾವಾದ, ರಚನೋತ್ತರವಾದ

Subhuman= ಅಧೀನ ಮಾನವ, ಉಪಮಾನವ

Temporal and Spacial Deitics= ಸಮಯಸೂಚಿ ಮತ್ತು ಸ್ಥಳಸೂಚಿ ಗುರುತುಗಳು

Theology = ಕ್ರೈಸ್ತಮತಶಾಸ್ತ್ರ

Theo-political, Ego-political= ಕ್ರೈಸ್ತಮತೀಯ-ರಾಜಕೀಯ, ಅಹಂ-ರಾಜಕೀಯ

Three worlds (First world, Second and Third World) = ಮೂರು

ಜಗತ್ತುಗಳು (ಪ್ರಥಮ ಜಗತ್ತು, ದ್ವಿತೀಯ ಜಗತ್ತು, ತೃತೀಯ ಜಗತ್ತು)

Transcendental reasoning= ತರ್ಕಾತೀತ ತರ್ಕಸರಣಿ (ವಸ್ತುರೂಪಿ ಅಥವಾ ಆಧಾರವಾದಿ ಅಲ್ಲದ, ಇಂದ್ರಿಯಗಮ್ಯವೂ ಅಲ್ಲದ, ವಿಚಾರಾತೀತವಾದ-ಆಧ್ಯಾತ್ಮಿಕವೂ ಆದ, ಸಾಧಾರಣ ಮನಸ್ಸುಗಳು ತಿಳಿಯಲಾಗದ ತತ್ವ-ತರ್ಕಸರಣಿ)

Trivium and Cuadrivium= ತ್ರಿವಳಿ ಮತ್ತು ಚತುರ್ವಳಿ

Vernacular= ದೇಶಭಾಷೆ



## ವಿಳಾಸ

ಡಾ.ಬಸವರಾಜ ಸಾದರ
(ಆಕಾಶವಾಣಿಯ ನಿವೃತ್ತ ಕೇಂದ್ರ ನಿರ್ದೇಶಕ)
227/ಎ, ಮೊದಲ ಮಹಡಿ,
37ನೆಯ ಕ್ರಾಸ್, 2ನೆಯ ಬ್ಲಾಕ್, ರಾಜಾಜಿನಗರ,
ಬೆಂಗಳೂರು-560010.
(ಮೊ-9886985847)

ಡಾ. ಆರ್. ಲಕ್ಷ್ಮೀನಾರಾಯಣ
ನಿವೃತ್ತ ಪ್ರಾಧ್ಯಾಪಕರು ಮತ್ತು ಜಂಟಿ ನಿರ್ದೇಶಕರು
ನಂ: 12, ಶ್ರೀನಿಕೇತನ, 2ನೇ ಕ್ರಾಸ್ ಶಿವಾನಂದನಗರ,
ಮೂಡಲಪಾಳ್ಯ ಬೆಂಗಳೂರು-560072

ಸ.ರಘುನಾಥ
ವೇಣು ವಿದ್ಯಾ ಸಂಸ್ಥೆ ಎದುರು
ಕುವೆಂಪು ವೃತ್ತ, ಶ್ರೀನಿವಾಸಪುರ
ಕೋಲಾರ ಜಿಲ್ಲೆ 563 135
99805 93921, 94831 37885

ಮ.ಸು. ಮನ್ನಾರ್ ಕೃಷ್ಣ ರಾವ್
984/1, 11ನೇ ಎ. ಮುಖ್ಯರಸ್ತೆ
3ನೇ ವಿಭಾಗ, ರಾಜಾಜಿ ನಗರ
ಬೆಂಗಳೂರು – 560010.
ಮೊಬೈಲ್ :9880020888.
E Mail : mannarmestru@gmail.com

ತಾ.ಶ್ರೀ. ಗುರುರಾಜ್
ಉಪನ್ಯಾಸಕರು,
ರೀಜನಲ್ ಇನ್ಸ್‌ಸ್ಟಿಟ್ಯೂಟ್ ಆಫ್ ಇಂಗ್ಲಿಷ್, ದಕ್ಷಿಣ ಭಾರತ,
ಜ್ಞಾನಭಾರತಿ ಆವರಣ, ಬೆಂಗಳೂರು. – 560056.
ಮೊಬೈಲ್ : 9343720378
ಇ–ಮೇಲ್ : guru.tsgr@gmail.com

ಡಿ.ಎನ್.ಶ್ರೀನಾಥ್
ನವನೀತ , 2 ನೇ ತಿರುವು , ಅಣ್ಣಾಜಿರಾವ್ ಲೇಔಟ್ ಮೊದಲ ಹಂತ , ವಿನೋಬಾನಗರ,
ಶಿವಮೊಗ್ಗ–577204 9611873310 // 08182–249010

ಅನುವಾದಕರ ವಿಳಾಸ
ಡಾ. ಜಿ.ವೀರಭದ್ರಗೌಡ
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ವಿಭಾಗ
ಕೃಷಿ ವಿಶ್ವವಿದ್ಯಾಲಯ ಜಿಕೆವಿಕೆ ಬೆಂಗಳೂರು

ಡಾ. ಕೆ.ಎಸ್ ವೈಶಾಲಿ
ಪ್ರಾಧ್ಯಾಪಕರು
ಇಂಗ್ಲಿಷ್ ವಿಭಾಗ
ಜ್ಞಾನ ಭಾರತಿ
ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು – 560056
ದೂರವಾಣಿ : 9481247376

